# ಕನಸಿನ ಮನೆ

ತುಂಬಿದೀ ಊರಲ್ಲಿ
ಮನೆ ಇವಳಿಗಿಲ್ಲ

—ಶ್ರೀ

**ವಿ. ಎಂ. ಇನಾಂದಾರ್**

ಉಷಾ ಸಾಹಿತ್ಯ ಮಾಲೆ
**ಮೈಸೂರು**

# ಮೊದಲ ಮಾತು

ಈಗಾಗಲೇ ಹಲವಾರು ಕೃತಿಗಳನ್ನು ಕನ್ನಡಿಗರ ಮುಂದಿಟ್ಟಿರುವ ಶ್ರೀ ಇನಾಮದಾರರ ಪರಿಚಯ ಮಾಡಿಕೊಡುವ ಆವಶ್ಯಕತೆಯೇನೂ ಇಲ್ಲ. ಕೆಲವು ದಿನಗಳ ಹಿಂದೆ ನಮ್ಮಿಬ್ಬರಿಗೂ ಆಪ್ತರಾದವರ ಮನೆಯಲ್ಲಿ ಸಾಹಿತ್ಯದ ಚಲನವಲನಗಳನ್ನು ಚರ್ಚಿಸುತ್ತ ಕುಳಿತಿದ್ದಾಗ ಶ್ರೀ ಇನಾಮದಾರರು 'ಕನಸಿನ ಮನೆ'ಯ ವಿಷಯ ಪ್ರಸ್ತಾಪಿಸಿ, ಅಚ್ಚಾಗುತ್ತಿರುವಾಗ ಅದನ್ನು ಓದಿ, 'ತೋರಿದ ಎರಡು ಮಾತು'ಗಳನ್ನು ಬರೆಯಬೇಕೆಂದು ನನಗೆ ಹೇಳಿದರು. ಪ್ರಕಟವಾಗುವ ಮುನ್ನವೆ ಕಾದಂಬರಿಯನ್ನು ಓದಬಹುದೆಂಬ ಆಸೆಯಿಂದ ನಾನು ಒಪ್ಪಿದೆ. ಇಲ್ಲಿ ಬರೆದಿರುವುದು ಅದೇ ಎರಡು ಮಾತು.

ಈಚೆಗೆ ಕನ್ನಡದಲ್ಲಿ ಕಾದಂಬರಿಯ ಬೆಳೆ ಹುಲುಸಾಗಿ ಬರುತ್ತಿದೆ. ನಮ್ಮ ಸಾಹಿತ್ಯದಲ್ಲಿ ಸಣ್ಣ ಕಥೆಯನ್ನು ಬರೆದು ಕೈ ಕುದುರಿದಮೇಲೆ ಕಾದಂಬರಿ ಬರಲಾರಂಭಿಸಿತು. ಕೆಲವು ಕಾಲ ಕಾದಂಬರಿಯನ್ನು ಬರೆಯುವುದಕ್ಕೆ ಬೇಕಾದ ಅನುಭವವೈಶಾಲ್ಯವೂ ಪಾತ್ರವಿಸ್ತಾರದ ಶಕ್ತಿಯೂ ನಮ್ಮ ಸಾಹಿತಿಗಳಲ್ಲಿಲ್ಲವೇನೊ ಎಂದು ಕೆಲವರು ಸಂದೇಹಪಡುತ್ತಿದ್ದರು. ಕಥನಶಕ್ತಿ ಉತ್ತಮವಾಗಿದ್ದ ಕಡೆಯಲ್ಲೂ ಒಂದೆರಡು ವೇಳೆ ಕಾದಂಬರಿಗೆ ಬೇಕಾದ ರಚನಾಸಾಮರ್ಥ್ಯ, ತಂತ್ರ ಸಾಲದೆಂದು ತೋರಿತ್ತು. ಆದರೆ ಕನ್ನಡ ಕಾದಂಬರಿ ಆ ಘಟ್ಟವನ್ನು ದಾಟಿ ಎಷ್ಟೋ ವರ್ಷಗಳಾದುವು. ಮಾನವನ ಸರಳ ಗಾಂಭೀರ್ಯ, ಅವನಲ್ಲಿ ಉನ್ನತ–ಅಧಮ ಭಾವಗಳ ಹೋರಾಟ, ಅವನ ಸೋಲು–ಗೆಲುವು—ಎಲ್ಲವನ್ನೂ ಸಾವಧಾನವಾಗಿ ಪರಿಶೀಲಿಸಿ ಸ್ವಭಾವ ವಿಕಾಸವನ್ನು ಸಂಪೂರ್ಣವಾಗಿ ಚಿತ್ರಿಸುವ ಕಾದಂಬರಿಗಳು ಈಗ ನಮ್ಮ ಕಣ್ಣ ಮುಂದಿವೆ. ಅಂತೆಯೆ ಮಾನವನ ನಾಟಕಕ್ಕೆ ವಿಶಾಲವಾದ ಹಿನ್ನೆಲೆಯನ್ನು ಕಲ್ಪಿಸಿ, ಆ ಹಿನ್ನೆಲೆಯೆ ಒಂದು ವ್ಯಕ್ತಿತ್ವವನ್ನು ಪಡೆಯುವಂತೆ ಮಾಡುವ ಶಕ್ತಿ ಸಹ ಬಂದಿದೆ; ನಮ್ಮ ಮಲೆನಾಡೂ ಪಶ್ಚಿಮ ಸಮುದ್ರದ ಕರಾವಳಿಯೂ ಈಗ ಕನ್ನಡ ಸಾಹಿತ್ಯದಲ್ಲಿ ಸಜೀವ ವ್ಯಕ್ತಿಗಳಾಗಿ ಪರಿಣಮಿಸಿವೆ. ಆ ಹಿನ್ನೆಲೆಯಲ್ಲಿ ನಿಂತು ನಾಗರಿಕತೆಯ ಹೊರ ಅಲಂಕಾರಗಳಿಲ್ಲದೆ ಸರಳ ಜೀವನ ನಡೆಸಿ, ತಮ್ಮ ಅನುಭವ, ತ್ಯಾಗ, ಸಹನೆ, ಪರಿಶುದ್ಧತೆಗಳಿಂದ ಭವ್ಯರಾಗಿರುವ ಪಾತ್ರಗಳೂ ಸೃಷ್ಟಿಯಾಗಿದ್ದಾರೆ.

'ಕನಸಿನ ಮನೆ'ಯಲ್ಲಿ ನಡೆದಿರುವ ಪ್ರಯತ್ನ ಇದಕ್ಕಿಂತ ಸ್ವಲ್ಪ ಬೇರೆ ಯಾದದ್ದು. ಇಲ್ಲಿ ಹಿನ್ನೆಲೆಯ ವೈಶಾಲ್ಯವಿಲ್ಲ; ಅದನ್ನು ಕಲ್ಪಿಸುವುದು ಕಾದಂಬರಿಕಾರರ ಉದ್ದೇಶವೂ ಅಲ್ಲ. ಇಲ್ಲಿಯ ಪಾತ್ರಗಳು ಸರಳಜೀವಿಗಳು, ಒಂದು ರೀತಿಯಲ್ಲಿ ಇವರೆಲ್ಲ 'ಸುಶಿಕ್ಷಿತ'ರೆನ್ನಬಹುದು. ಆಧುನಿಕ [illegible] ವಿದ್ಯಾಭ್ಯಾಸ, ನಗರ ಜೀವನಕ್ಕೆ ಹೊಂದಿಕೊಂಡ ಸಾಮಾಜಿಕ ವ್ಯವಹಾರದ್ದ ತಿಳಿವಳಿಕೆ—ಇವೇ ಸುಶಿಕ್ಷಿತರ ಚಿಹ್ನೆಯೆನ್ನುವುದಾದರೆ, ಇದು ಸಾಮಾಜಿಕ ಕಾದಂಬರಿ. ಇಲ್ಲಿಯ ವ್ಯಕ್ತಿಗಳು ಮಾನವಸಹಜವಾದ ನಗ್ನ ಗಾಂಭೀರ್ಯ ದಿಂದ ಜೀವನವನ್ನೆದುರಿಸುತ್ತಾರೆನ್ನುವುದಕ್ಕಿಂತ, ಈಗಿನ ನಾಗರಿಕತೆಗೆ ಸಹಜ ವಾದ ಆಂದೋಲನಕ್ಕೆ ಸಿಕ್ಕಿ ಸಮಾಜ ಜೀವನವನ್ನೆದುರಿಸಿ ನಿಲ್ಲುತ್ತಾರೆನ್ನ ಬಹುದು.

ಕೆಲವು ವರ್ಷಗಳ ಹಿಂದೆ ನಮ್ಮ ಜೀವನದಲ್ಲಿ ಸಾಮಾನ್ಯವಾಗಿ ಕಾಣದಿದ್ದ ಹೊಸ ಯೋಚನೆಗಳೂ ಆದರ್ಶಗಳೂ ಈಗ ನಮ್ಮ ಗಮನವನ್ನು ಸೆಳೆಯುತ್ತಿವೆ. ಈಗಿನ ನಾಗರಿಕತೆ ಹೊಸ ಸಮಸ್ಯೆಗಳನ್ನು ತಂದೊಡ್ಡಿದೆ ಇವು ತೀರ ಹೊಸದಲ್ಲವೆಂದರೂ ಈಗ ಹೆಚ್ಚು ಪ್ರಾಮುಖ್ಯವನ್ನು ಪಡೆದಿವೆ ಎನ್ನಬಹುದು. ಸಂಪ್ರದಾಯದ ಮತ್ತು ಸಮಾಜದ ನಿಯಮಗಳನ್ನೊಪ್ಪಿ ಕೊಂಡು, ಅವುಗಳ ನಿರ್ಬಂಧಕ್ಕೆ ಒಳಪಟ್ಟು, ಬಂದುದನ್ನು ಅನುಭವಿಸುವ ತಾಳ್ಮೆಯೂ ಸಹನೆಯೂ ಈಗ ಮೊದಲಿನಷ್ಟು ಕಾಣುವುದಿಲ್ಲ. ಆ ನಿಯಮಗಳು ಸರಿಯೆ ಎಂದು ಕೇಳುತ್ತೇವೆ. ಮುಖ್ಯವಾಗಿ, ದಾಂಪತ್ಯಜೀವನಕ್ಕೆ ಸಂಬಂಧ ಪಟ್ಟ ಅನೇಕ ಜಟಿಲ ಪ್ರಶ್ನೆಗಳು ತಲೆದೋರಿವೆ. 'ತರುಣಿಗೆ ಪತಿ ದೈವಂ' ಎಂಬ ನಂಬಿಕೆಯಿಂದ ಹೆಂಗಸರು ಕಷ್ಟವೊ ನಿಷ್ಠುರವೊ ಏನು ಬಂದರೂ ಹಲ್ಲು ಕಚ್ಚಿಕೊಂಡು ಅನುಭವಿಸುವುದು ಈಗ ಮೊದಲಿನಷ್ಟು ಸಾಮಾನ್ಯವಲ್ಲ. 'ದೈವ' ಎನ್ನಿಸಿಕೊಳ್ಳುವ ಯೋಗ್ಯತೆ ಪತಿಗೆ ಇರಬೇಡವೆ?—ಎಂದು ಈಗಿನ ತರುಣಿ ಪ್ರಶ್ನೆ ಹಾಕುತ್ತಾಳೆ. ಗಂಡನು ಹೆಂಡತಿಯಲ್ಲಿ ಅಪೇಕ್ಷಿಸುವ ಹೃದಯವೈಶಾಲ್ಯ ವನ್ನೂ ಸಹನೆಯನ್ನೂ ಹೆಂಡತಿ ಗಂಡನಲ್ಲಿಯೂ ಅಪೇಕ್ಷಿಸುವುದು ಸಹಜವಲ್ಲ ಅಲ್ಲವೆ? ಗಂಡನಿಗಾಗಿ ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಬಲಿಕೊಡ ಬೇಕೆ? ಅವನ ಬಂಧುವರ್ಗದವರಿಗೆಲ್ಲ ದಾಸಿಯಾಗಿರಬೇಕೆ? ವ್ಯಕ್ತಿಗೆ ಸ್ವಾತಂತ್ರ್ಯವೇ ಬೇಡವೆ?

'ಕನಸಿನ ಮನೆ' ಈ ಸಮಸ್ಯೆಗಳನ್ನುಳ್ಳ ಆಧುನಿಕ ಸಮಾಜದಲ್ಲಿ ಕಟ್ಟಿದ್ದು. ಇಲ್ಲಿಯ ಪ್ರಧಾನ ವ್ಯಕ್ತಿಗಳಾದ ವಸಂತ, ಮೋಹಿನಿ ಮತ್ತು ಆನಂದರಾಯ ಇವರು ಎದುರಿಸುವುದು ದೈವವನ್ನಲ್ಲ, ಪ್ರಕೃತಿಯನ್ನಲ್ಲ—ಈ ಸಾಮಾಜಿಕ ಸಮಸ್ಯೆಗಳನ್ನು. ಮೋಹಿನಿ ವಿದ್ಯಾವತಿ—ದಾಂಪತ್ಯದಲ್ಲಿ ಸುಖವನ್ನು ಬಯ[illegible]. [illegible]ವಳ ಗಂಡ ಆನಂದರಾಯ ಬಂಧುಗಳ ಕೈಗೊಂಬೆ[illegible]ದ್ದರೆ, ಕೇಡಿಗನಾದ ತನ್ನ ಅಣ್ಣ ಭಾಸ್ಕರನ ಚಾಡಿಮಾತುಗಳಿಗೆ ಕಿವಿಗೊಟ್ಟು ಹೆಂಡತಿಯನ್ನು ಸಂಕಟಪಡಿಸದಿದ್ದರೆ ಆ ಸುಖ ಸುಲಭವಾಗಿ ದೊರೆಯಬಹುದಾಗಿತ್ತು. ಆದರೆ ಆನಂದರಾಯ ಸ್ವಭಾವತಃ ಒಳ್ಳೆಯವನಾದರೂ ಅವನಿಗೆ ಚಿತ್ತಸ್ಥೈರ್ಯವಿಲ್ಲ. ಮೋಹಿನಿಗೆ ಒಂದು ಕಡೆ ಬಂಧುಗಳ ಕಿರುಕುಳ, ಭಾಸ್ಕರನ ದುಷ್ಕಾಮ, ಇಲ್ಲಸಲ್ಲದ ಅಪವಾದ; ಮತ್ತೊಂದು ಕಡೆ ಗಂಡನ ಔದಾಸೀನ್ಯ, ಕೆಲವು ವೇಳೆ ಅವನ ಕ್ರೌರ್ಯ ಮತ್ತು ಪಾಶವೀ ವೃತ್ತಿ. [illegible]ನಲ್ಲಿ ಕಾಣದ ಮರುಕವನ್ನು ಅವನ ಸ್ನೇಹಿತ ವಸಂತನಲ್ಲಿ ಅರಸಿ ಅವನ ಸಲಹೆಯನ್ನೂ ಸಹಾಯವನ್ನೂ ಬೇಡುತ್ತಾಳೆ. ಹಾಗೆ ಬೇಡುವುದರಲ್ಲಿ ಕೆಟ್ಟದೇನೂ ಇಲ್ಲ. ವಸಂತನಿಗೂ ಆಕೆಯ ಗಂಡನೊಡನೆ ಮಾತಾಡಿ ಅವನ ಸಂಸಾರವನ್ನು ನೇರಮಾಡಲು ಪ್ರಯತ್ನಿಸಬೇಕೆಂಬ ಇಚ್ಛೆ. ಈ ವಿಷಯವನ್ನು ಚರ್ಚಿಸುವ ಉದ್ದೇಶದಿಂದ ವಸಂತ–ಮೋಹಿನಿಯರು ಮೂರು ನಾಲ್ಕು ಬಾರಿ ಸೇರುತ್ತಾರೆ.

ಮೋಹಿನಿ ಹೇಳುವಂತೆ "ಒಂದು ಗಂಡು ಒಂದು ಹೆಣ್ಣು ಕಾಮದ ಹೊರತು ಬೇರೆ ಯಾವ ಸಂಬಂಧದಲ್ಲಿಯೂ ಇರಲಾರದೆಂಬುದು" ಸಮಾಜಕ್ಕೆ "ಪರಂಪರಾಗತವಾಗಿ ನಡೆದುಬಂದ ಬುದ್ಧಿ"—ಇದೇ ಅವಳ ಗಂಡ ಆನಂದರಾಯನ ಮತ್ತು ಅವನ ಬಂಧುಗಳ ನಂಬಿಕೆ, ಭಾಸ್ಕರನಿಗಂತೂ ಈ ನಂಬಿಕೆ ಇರುವುದು ಸಹಜವೇ. ಅವನ ಜೀವನದಲ್ಲಿ ಕಾಮವೊಂದು ಹೊರತು ಬೇರೆ ಯಾವುದಕ್ಕೂ ಸ್ಥಾನವೇ ಇಲ್ಲ. ಅವನು ಸ್ವಂತ ತಮ್ಮನ ಹೆಂಡತಿಯಾದ ಮೋಹಿನಿಯನ್ನೇ ಬಯಸಿದನಲ್ಲವೆ! ಆದ್ದರಿಂದ ವಸಂತ–ಮೋಹಿನಿಯರು ಹಲವು ಬಾರಿ ಕಲೆತು ಮಾತಾಡಿ, ಹೋಟಲಿನಲ್ಲಿ ಒಟ್ಟಿಗೆ ಊಟ ಮಾಡಿದ್ದು, ಜುಹುವಿನಲ್ಲಿ ಕಾಲ ಕಳೆದದ್ದು—ಎಲ್ಲ ಸಂಶಯಕ್ಕೆ ಎಡೆಗೊಟ್ಟಿತು.

ಕಾಮದ ಕಳಂಕವಿಲ್ಲದ ಗಂಡು–ಹೆಣ್ಣು ಸ್ನೇಹದಲ್ಲಿ ಇರಬಹುದಾದರೆ

ಜೀವನದ ಚೆಲುವು ನೂರು ಮಡಿ ಹೆಚ್ಚುತ್ತದೆ, ಸಂಶಯವಿಲ್ಲ; ಹಾಗಿರುವುದು ಅಸಾಧ್ಯವೂ ಅಲ್ಲ. ಸಮಾಜವೇನೊ ಯಾವಾಗಲೂ ಗಂಡು-ಹೆಣ್ಣಿನ ಸ್ನೇಹವನ್ನು ಸಂಶಯ ದೃಷ್ಟಿಯಿಂದಲೆ ನೋಡುತ್ತದೆ. ಆದರೆ ಸಮಾಜಕ್ಕೆ ' ಪರಂಪರಾಗತವಾಗಿ ನಡೆದುಬಂದ ಬುದ್ಧಿ 'ಯೂ ಕೇವಲ ಹುಚ್ಚೆಂದು ಹೇಳುವ ಹಾಗೂ ಇಲ್ಲ. ಗಂಡು-ಹೆಣ್ಣಿನ ಸಂಬಂಧ ಅತಿಕಷ್ಟತರವಾದದ್ದು. ಚೆಲುವಿನ ದೇಹದಲ್ಲಿಯೂ ಆ ಚೆಲುವನ್ನು ನೋಡುವ ಕಣ್ಣಿನಲ್ಲಿಯೂ ನೆತ್ತರ ಬಿಸಿಯಾಗಿದೆ; ಮಣ್ಣಿನಲ್ಲಿ ಬೆಳೆದ ಗಿಡಕ್ಕೆ ಮಣ್ಣಿನ ಅಂಶ ಅಂಟದೆ ಇರುವುದಿಲ್ಲ. ಅಲ್ಲದೆ, ಕಾಮ ನಮ್ಮ ಮೇಲೆ ದಾಳಿಯಿಟ್ಟು ಬರುವಾಗ ತನ್ನ ನಿಜರೂಪದಲ್ಲಿ ಬರುವುದಿಲ್ಲ: ನಾನಾ ರೀತಿಯಲ್ಲಿ ಸೋಗು ಹಾಕಿಕೊಂಡು ಬರುತ್ತದೆ. ' ಗಂಡು ಹೆಣ್ಣು ಸೇರಬೇಕಾದರೆ ಒಂದೇ ಉದ್ದೇಶದಿಂದಲ್ಲ' ಎಂದು ನಮ್ಮ ಕಿವಿಯಲ್ಲಿ ಉಸಿರುವಾಗಲೂ ತನ್ನೊಳಗೇ ನಗುತ್ತಿರುತ್ತದೆ. ' ಹೆಣ್ಣು ಕಷ್ಟದಲ್ಲಿರುವಾಗ ಅನುಕಂಪ ತೋರಿಸಬೇಡವೆ ? ' ಎಂದು ಕೇಳಿ ತನ್ನಲ್ಲಿ ತಾನು ಕಣ್ಣು ಮಿಟಕಿಸುತ್ತದೆ. ಅನುಕಂಪದಿಂದ ಪ್ರೇಮಕ್ಕೆ—ಪ್ರೇಮದ ವೇಷ ಹಾಕಿರುವ ಕಾಮಕ್ಕೆ ಒಂದೇ ಹೆಜ್ಜೆ. ಮೋಹಿನಿ ರೂಪವತಿಯಲ್ಲದಿದ್ದರೆ ವಸಂತ ಆಕೆಯ ಸಹಾಯಕ್ಕೆ ಅಷ್ಟು ಉತ್ಸಾಹದಿಂದ ಮುಂದೆ ಬರುತ್ತಿರಲಿಲ್ಲ ಪದೆ ಪದೆ ಅವಳನ್ನು ನೋಡುವುದಕ್ಕೆ ಗಂಟೆಗಟ್ಟಲೆ ರಸ್ತೆಯಲ್ಲಿ ಕಾದಿರುತ್ತಿರಲ್ಲಿಲ್ಲ. ವಿವೇಕವನ್ನು ಅದುಮಿ ಅವರಿಬ್ಬರ ನಡುವೆ ಕಾಮ ಬೃಹದಾಕಾರವನ್ನು ತಾಳುತ್ತಿದೆ. ಅವರಿಬ್ಬರ ಸ್ನೇಹದ ನಿಜಸ್ವರೂಪ ಮೋಹಿನಿಗೆ ಕನಸಿನಲ್ಲಿ ಸ್ಪಷ್ಟವಾಗಿ ಗೋಚರವಾಯಿತು. ಹಾಗಾದಮೇಲೆಯೂ ಅವಳು ವಸಂತನೊಡನೆ ಮೊದಲಿಗಿಂತ ಹೆಚ್ಚಿನ ಸಲಿಗೆಯಿಂದಲೆ—ಸ್ವಲ್ಪಮಟ್ಟಿಗೆ ಸ್ವಾಚ್ಛಂದ್ಯದಿಂದಲೆ ಎಂದರೂ ತಡೆಯುತ್ತದೆ—ವರ್ತಿಸಿದಳು. ಅಂದಮೇಲೆ ಸಮಾಜದ ' ಪರಂಪರಾಗತವಾದ ಬುದ್ಧಿ ' ಅಷ್ಟೇನೂ ಮರುಳುತನವಲ್ಲವೆಂದು ವಸಂತ-ಮೋಹಿನಿಯರೇ ಸಮರ್ಥಿಸಿದಂತಾಯಿತು. ಮೋಹಿನಿಯನ್ನು ಒಂದು ಸಂಕಟದಿಂದ ಪಾರಾಗಿಸಲು ಹೆ
ವಸಂತ ಆಕೆಯನ್ನು ಅದಕ್ಕಿಂತಲೂ ಭಯಂಕರವಾದ ಸಂಕಟಕ್ಕೆ ಎ
ತ್ತಿದ್ದನು. ಆ ಎಳೆತ ಅವಳಿಗೂ ಹಿತಕರವಾಗಿಯೆ ತೋರಿತು. ವಸಂ
ಮೊದಲಿನ ಉದ್ದೇಶವಾದರೂ ಗಂಡಹೆಂಡಿರನ್ನು ಒಟ್ಟಿಗೆ ಕೂಡಿಸುವುದು. ಆದರೆ ಪರಿಣಾಮದಲ್ಲಿ ಮೋಹಿನಿ ಗಂಡನ ಸಂಬಂಧವನ್ನು ಕಡಿದು ಹೊರಟಿದ್ದಕ್ಕೆ

ವಸಂತನೇ ಹತ್ತಿರದ ಕಾರಣವಾದಂತಾಯಿತು. ಅವರಿಬ್ಬರ ಸಂಬಂಧ ತೀರ ಕೆಟ್ಟು ಪಾಪದಲ್ಲಿ ಪರ್ಯವಸಾನ ಹೊಂದದೆ ಇದ್ದದ್ದು ಅವರ ಸುದೈವ. ಇದನ್ನೆಲ್ಲ ಶ್ರೀ ಇನಾಮದಾರರು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

'ಪರಂಪರಾಗತವಾದ ಬುದ್ಧಿ'ಯನ್ನು ಹಳಿದು ವ್ಯಕ್ತಿಯನ್ನು ಎತ್ತಿ ಹಿಡಿಯುವುದು ಅತಿ ಸುಲಭವಾದ ಕೆಲಸ. ಈ ಬಗೆಯ ಕೂಗು ಸಾಕಷ್ಟು ಕೇಳಿಬಂದಿದೆ. ಆದರೆ ಸಮಸ್ಯೆ ಎಷ್ಟು ಜಟಿಲವಾದದ್ದೆಂಬುದನ್ನು ಬಲ್ಲ ಶ್ರೀ ಇನಾಮದಾರರು ಈ ಸುಲಭದ ಹಾದಿಯನ್ನು ತುಳಿದಿಲ್ಲ. ಸಮಾಜವನ್ನು ಟೀಕಿಸಿ ಅದರ ಹುಳುಕುಗಳನ್ನು ತೋರಿಸಿದ್ದಾರೆ; ಆದರೆ ವ್ಯಕ್ತಿಯನ್ನು ಸಿಂಹಾಸನಕ್ಕೇರಿಸುವ ಸಾಹಸ ಮಾಡಿಲ್ಲ. ದಾಂಪತ್ಯಜೀವನದಲ್ಲಿ ಮುಖ್ಯವಾಗಿರಬೇಕಾದದ್ದು ಪ್ರೇಮ—ದೇಹವಿನಿಮಯ ಮಾತ್ರವಲ್ಲ—ಎಂಬ ನಂಬಿಕೆ ಬೆಳೆಯಲೇ ಬೇಕು. ವ್ಯಕ್ತಿ ತನ್ನ ಆತ್ಮವಿಕಾಸಕ್ಕೆ ಗಮನಕೊಡಲೂ ಬೇಕು. ಆದರೆ 'ಮಾರ' ನಮ್ಮನ್ನು ಸೆರೆಹಿಡಿಯುವಾಗ ಇಂಥ ಉದಾತ್ತ ಭಾವನೆಗಳನ್ನೇ ಮುಂದಿಟ್ಟುಕೊಂಡು ಉಪನಿಷತ್ತುಗಳನ್ನು ಉದ್ಧರಿಸಿಕೊಂಡೇ ಬರುತ್ತಾನೆ. ಇದನ್ನು ಮರೆಯಬಾರದು. ಇದನ್ನು ಸ್ಪಷ್ಟಗೊಳಿಸಿರುವುದಕ್ಕಾಗಿ ಶ್ರೀ ಇನಾಮದಾರರು ಅಭಿನಂದನೀಯರು.

ಸ್ವಾತಂತ್ರ್ಯದ ಮಾತು ಬಂದಾಗಲೂ ಕಾದಂಬರಿಕಾರರು ಆ ಶಬ್ದದ ಮಾಧುರ್ಯಕ್ಕೆ ಮರುಳಾಗಿಲ್ಲ. ಮೋಹಿನಿಗೆ ಸಿಕ್ಕಿದ ಸ್ವಾತಂತ್ರ್ಯ ಅವಳು ಬಯಸಿದ ರೀತಿಯಲ್ಲಿ ಬರುವುದಿಲ್ಲ. ಹಾಗೆ ಬರುವುದು ಎಲ್ಲಿಯೂ ಅಪರೂಪ. ಬಯಸಿದಾಗ ಮನೋಹರವಾಗಿ ಕಂಡ ಸ್ವಾತಂತ್ರ್ಯ ಬಂದಾಗ ಎದೆ ನಡುಗಿಸುತ್ತದೆ. ಮೋಹಿನಿ ಸ್ವಾತಂತ್ರ್ಯವನ್ನು ಪಡೆದರೂ ಅವಳಲ್ಲಿ ಸ್ವಾತಂತ್ರ್ಯದ ಭೀತಿ ತಲೆದೋರಿತು. ಅಲ್ಲದೆ 'ಬಂಧನವಿಲ್ಲದೆ ಬದುಕಿಲ್ಲ' ಎಂಬುದು ಅವಳಿಗೆ ಮನವರಿಕೆಯಾಯಿತು.

ವಸಂತ-ಮೋಹಿನಿಯರ ಮುಂದಿನ ಜೀವನ ಹೇಗೇ ಸಾಗಲಿ, ಅವರ ಅನುಭವದಿಂದ ಇಬ್ಬರ ಆತ್ಮಕ್ಕೂ ಪುಷ್ಟಿಬಂದಿರಬೇಕು. ಮನಸ್ಸಿನಲ್ಲಿ ಅಡಗಿದ್ದ ಕಲುಷಿತವಾದ ಆಸೆಯನ್ನು ಅವರು ಹೊರಗೆಳೆದಂತಾಯಿತು. ರಾಗೋದ್ರೇಕದ ಮುಂದೆ ವಿವೇಕ ಎಷ್ಟು ದುರ್ಬಲವಾಗಬಹುದೆಂದು ಸಕಾಲದಲ್ಲಿ ತಿಳಿದಂತಾ

ಯಿತು. ಈ ತಿಳಿವು ಬಹುಶಃ ವಸಂತನಿಗಿಂತ ಮೋಹಿನಿಯಲ್ಲಿ ಚೆನ್ನಾಗಿ ಕಾಣುತ್ತದೆ. ಅದಕ್ಕಾಗಿ ಹೆಚ್ಚು ಬೆಲೆ ಕೊಟ್ಟವಳೂ ಅವಳೇ.

ದಾಂಪತ್ಯಜೀವನದ ಮತ್ತು ಗಂಡು-ಹೆಣ್ಣಿನ ಪ್ರೇಮದ ಸಮಸ್ಯೆಯನ್ನು ನಿಷ್ಪಕ್ಷಪಾತವಾಗಿ ತುಲನಾತ್ಮಕ ದೃಷ್ಟಿಯಿಂದ ನೋಡಿ, ಕಲೆಗಾರರಿಗೆ ಸಹಜವಾದ ರೀತಿಯಲ್ಲಿ ಕಥೆಯನ್ನು ನಿರೂಪಿಸಿ ಶ್ರೀ ಇನಾಮದಾರರು ನಮಗೆ ಉಪಕಾರ ಮಾಡಿದ್ದಾರೆ. ಸಮಸ್ಯೆಯನ್ನು ಬಗೆಹರಿಸಿದ್ದಾರೆಯೆ ಎಂಬ ಪ್ರಶ್ನೆ ಇಲ್ಲಿ ಸಲ್ಲದು. ಅದು ಕಾದಂಬರಿಕಾರರು ಮಾಡಲೇಬೇಕಾದ ಕೆಲಸವಲ್ಲ. ಅದರ ಸ್ವರೂಪವನ್ನು ಜೀವನಚಿತ್ರಗಳ ಮೂಲಕ ನಮ್ಮೆದುರಿಗಿಟ್ಟರೆ ಅವರ ಕೆಲಸ ತೀರಿತು. ಈ ಕೆಲಸದ ನಿರ್ವಹಣೆ ಚೆನ್ನಾಗಿ ನಡೆದಿದೆಯೆಂದು ಓದುಗರಿಗೆ ಅನ್ನಿಸದಿರದು.

**ಎ. ಎನ್. ಮೂರ್ತಿರಾವ್**

# ಅರಿಕೆ

'ಉಷಾ ಸಾಹಿತ್ಯ ಮಾಲೆ' ಪ್ರಾರಂಭವಾದಾಗ ಶ್ರೀ ಹಬ್ಬು ಅವರು ತಮ್ಮ ಮಾಲೆಗೆ ನಾನೂ ಒಂದು ಕಾದಂಬರಿಯನ್ನು ಬರೆಯಬೇಕೆಂದು ಸೂಚಿಸಿದರು. ಸಹಜವಾದ ಅವರ ಸೂಚನೆಗೆ ಸಹಜವಾಗಿಯೆ 'ಆಗಬಹುದು' ಎಂದೆ. ಮುಂಬರುವ ಕಾದಂಬರಿಗಳ ಪಟ್ಟಿಯಲ್ಲಿ 'ದೂರದ ದಾರಿ' ಎಂಬ ಕಾದಂಬರಿಯ ಹೆಸರನ್ನು ಅವರು ಸೇರಿಸಿಯೂ ಬಿಟ್ಟರು. ಬರೆಯದೆ ಗತ್ಯಂತರ ಉಳಿಯಲಿಲ್ಲ. ಬರೆಯಲು ಮೊದಲುಮಾಡಿದೆ; ಆದರೆ ಆ ಕಾದಂಬರಿಯನ್ನು ಬರೆಯುತ್ತಿರುವಾಗ ನಡುವೆಯೆ ಬೇರೆಯೊಂದು ಕಾದಂಬರಿಯ ರೂಪರೇಖೆ ಕಣ್ಣಮುಂದೆ ನಿಂತಿತು. ಅದನ್ನೇ ಮೊದಲು ಬರೆಯುವಂತಾಯಿತು. ಆ ಕಾದಂಬರಿಯೆ 'ಕನಸಿನ ಮನೆ'. ಯಾವುದೆ ಆದರೂ ಬರೆಯಿಸಿದ ಶ್ರೇಯಸ್ಸು ಉಷಾ ಸಾಹಿತ್ಯ ಮಾಲೆಯವರದು.

ಬರೆದಾದನಂತರವೂ 'ಕನಸಿನ ಮನೆ' ಕನಸಾಗಿಯೆ ಉಳಿಯಬಹುದಾದ ಪ್ರಸಂಗವೊಂದು ಒದಗಿಹೋಯಿತು. ಕಳೆದ ಜೂನ್ ತಿಂಗಳ ಮೊದಲ ವಾರದಲ್ಲಿ ಮಧ್ಯ ರಾಜಪುತಾನದಲ್ಲಿ ಪ್ರವಾಸ ಮಾಡುತ್ತಿದ್ದಾಗ ಕಾದಂಬರಿಯ ಒಂದೇ ಒಂದು (ಮೂಲ) ಹಸ್ತಪ್ರತಿ ಅಕಸ್ಮಾತ್ತಾಗಿ ರೈಲಿನಲ್ಲಿ ಕಳೆದು ಹೋಯಿತು. ಮಾರವಾಡ ಜಂಕ್ಶನ್ ಮತ್ತು ಸೋಜಾತ್ ರೋಡುಗಳ ಸ್ಟೇಶನ್ ಮಾಸ್ತರರ ಸಹಾನುಭೂತಿ, ಪರಿಶ್ರಮ ನನ್ನ ನೆರವಿಗೆ ಬಾರದಿದ್ದರೆ ಇಂದು ಈ ಕಾದಂಬರಿ ಓದುಗರ ಕೈಯಲ್ಲಿರುತ್ತಿರಲಿಲ್ಲ. ಕಾದಂಬರಿಯ ನಾಯಕಿಯಂತೆ ಕಾದಂಬರಿಗೂ ಬದುಕಲೇಬೇಕೆಂಬ ಹಟವಿದ್ದಂತೆ ಕಾಣುತ್ತದೆ. ಈ ಹಟವನ್ನು ಸಾಧ್ಯವಾಗಿಸಿದವರು ಎಷ್ಟೋ ಗೆಳೆಯರು. ಅದು ಕೊನೆಯವರೆಗೂ ಕಣ್ಮರೆಯಾಗಿಯೆ ಉಳಿಯದಂತೆ ಮಾಡಿದ ಆ ಇಬ್ಬರು ಪರಿಚಿತ ಮಾತ್ರರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸಬೇಕಾಗಿದೆ. ನನಗೆ ಬೇಕಾದವರಾದ ಶ್ರೀ ಎ. ಎನ್. ಮೂರ್ತಿರಾಯರು ಸಹೃದಯತೆಯಿಂದ ಒಪ್ಪಿ ಮುನ್ನುಡಿಯೊಂದನ್ನು ಬರೆದುಕೊಟ್ಟು ಉಪಕಾರಮಾಡಿದ್ದಾರೆ. ಉಷಾ ಸಾಹಿತ್ಯ

ಮಾಲೆಯಲ್ಲಿ ಕಾದಂಬರಿಯನ್ನು ಪ್ರಕಟಿಸಲು ಒಪ್ಪಿದ ಶ್ರೀ ರಾ. ವೆಂ. ಶ್ರೀನಿವಾಸರಿಗೂ, ಅಂದವಾಗಿ ಅಚ್ಚುಮಾಡಿಕೊಟ್ಟ ಶ್ರೀ ಹಬ್ಬು ಅವರಿಗೂ ನನ್ನ ವಂದನೆಗಳು.

ಸಾಧನಕೇರಿ, ಧಾರವಾಡ
೧ನೇ ಅಕ್ಟೋಬರ್, ೧೯೪೭

**ವಿ. ಎಂ. ಇನಾಂದಾರ್**

# ಮತ್ತೆರಡು ಮಾತುಗಳು

ಈ ಕಾದಂಬರಿಯ ಎರಡನೆಯ ಮುದ್ರಣ ಇದೀಗ ಪ್ರಕಟವಾಗುತ್ತಲಿರುವುದು ಸಂತೋಷದ ಸಮಾಚಾರವೆ. ಈ ಪುನರ್ಮುದ್ರಣದ ಕೆಲಸ ಸುಮಾರು ಹದಿನೆಂಟು ತಿಂಗಳ ಹಿಂದೆಯೆ ನಡೆಯಬೇಕಿತ್ತು. ಆದರೆ ಅದರ ಯೋಗ ಈಗ ಬಂದಿದೆ. ಕಾದಂಬರಿ ಮೊದಲು ಪ್ರಕಟವಾದಾಗ ಓದುಗರು ಅದಕ್ಕೆ ಅನಿರೀಕ್ಷಿತವಾದ ಮನ್ನಣೆಯನ್ನು ಕೊಟ್ಟರು. ತಮ್ಮ ಮೆಚ್ಚಿಗೆಯನ್ನು ಹತ್ತಾರು ವಿಧದಲ್ಲಿ ವ್ಯಕ್ತಮಾಡಿದರು. ಗೆಳೆಯರಿಂದ, ಪರಿಚಿತರಿಂದ, ಅಪರಿಚಿತರಿಂದ ಕೂಡ, ನನಗೆ ಈ ಕಾದಂಬರಿಯನ್ನು ಕುರಿತು ಬಂದಷ್ಟು ಅಭಿನಂದನಪರವಾದ ಕಾಗದಗಳು ನನ್ನ ಇನ್ನು ಯಾವ ಕಾದಂಬರಿಯ ವಿಚಾರದಲ್ಲಿಯೂ ಬಂದಿಲ್ಲ. ಮರಾಠಿಯಲ್ಲಿ, ತಮಿಳಿನಲ್ಲಿ, ತೆಲುಗಿನಲ್ಲಿ ಇದರ ಭಾಷಾಂತರಗಳು ಬೇಗನೆ ಪ್ರಕಟವಾಗಲಿವೆ.

ಕೇವಲ ಮೆಚ್ಚಿಗೆಯ ಮಾತುಗಳನ್ನು ಹೇಳಿದವರು ಹಲವರು; ವಿಮರ್ಶಾತ್ಮಕವಾಗಿ ಬರೆದವರು ಕೆಲವರು. ವಿಮರ್ಶೆಯ ಆ ಎಲ್ಲ ಅಂಶಗಳನ್ನು ಎತ್ತಿಕೊಂಡು ಈ ಮುನ್ನುಡಿಯನ್ನು ವಿಸ್ತರಿಸುವುದು ಪ್ರಸ್ತುತವೂ ಅಲ್ಲ; ಪ್ರಯೋಜನಕಾರಿಯೂ ಅಲ್ಲ. ಆದರೆ ಈ ಇಬ್ಬರೂ ಸಾಮಾನ್ಯವಾಗಿ ಹೇಳಿದ ಒಂದು ವಿಷಯವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಆ ಮಾತೆಂದರೆ: ‘ಈ ಕಾದಂಬರಿ ಹಠಾತ್ತಾಗಿ ಮುಗಿಯುತ್ತದೆ. ಮುಂದಿನ ಕತೆಯನ್ನು ಹೇಳಬಹುದಾಗಿತ್ತು. ಓದುಗರ ಕುತೂಹಲ ತೀರ ಕೆರಳಿ ನಿಂತಾಗ ಕತೆಯನ್ನು ಮುಗಿಯಿಸಲಾಗಿದೆ.’ ಇಲ್ಲಿ ಹೇಳಿದ ಕತೆಯನ್ನು ಪೂರ್ತಿಯಾಗಿ ಮೆಚ್ಚಿದವರು ಕತೆಯ ಮುಂದಿನ ಭಾಗವನ್ನು ಓದಬೇಕು ಎಂಬ ಕುತೂಹಲದಿಂದ ಹೀಗೆ ಹೇಳಿದ್ದಾರೆ. ಮುಂದಿನ ಕತೆಯನ್ನು ನಾನು ಹೇಳಲೇಬೇಕು ಎಂದು ಆಗ್ರಹದ ಸೂಚನೆಯನ್ನು ಮಾಡಿದ್ದಾರೆ. ಇದಕ್ಕೆ ಪ್ರತಿಯಾಗಿ ಉಳಿದ ಕೆಲವರು ಕತೆ ಹೀಗೆ ಮುಗಿಯುವುದು ಕಾದಂಬರಿಯ ಒಂದು ಕೊರತೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇಬ್ಬರಿಗೂ ಒಂದೇ ಉತ್ತರವನ್ನು ಇಂದು ಹೇಳಬಹುದಾಗಿದೆ. ಇಲ್ಲಿಗೆ ಕಾದಂಬರಿ ಮುಗಿದರೂ ಕತೆ ಮುಗಿಯಲಿಲ್ಲ ಎಂಬ ಅರಿವು ನನಗಿದೆ. ಕತೆ ಮುಗಿಯಲಿಲ್ಲ ಎಂಬ ಮಾತಿನಲ್ಲಿ ಈ ಕತೆಯ ವಿಷಯ

ಸೂಚನೆಯೂ ಪೂರ್ತಿಯಾಗಿ ವ್ಯಕ್ತವಾಗಿಲ್ಲವೆಂಬುದೂ ಸ್ಪಷ್ಟವಾಗಿಯೆ ಇದೆ. ಇಲ್ಲಿಯ ಕತೆಯ ಮೂಲಕ ಸಮಸ್ಯೆಯ ಒಂದು ಮುಖವನ್ನು ಮಾತ್ರ ನಾವು ಕಾಣುತ್ತೇವೆ. ಒಂದು ಹೆಣ್ಣು ತನ್ನ ವ್ಯಕ್ತಿಸ್ವಾತಂತ್ರ್ಯಕ್ಕಾಗಿ ನಡೆಯಿಸಿದ ಪ್ರಯತ್ನವನ್ನು ನಾವು ಇಲ್ಲಿ ನೋಡುತ್ತೇವೆ. ಆ ಸ್ವಾತಂತ್ರ್ಯವನ್ನು ಆಕೆ ಕಸಿದುಕೊಂಡು ಪಡೆದ ಸನ್ನಿವೇಶದಿಂದ ಇಲ್ಲಿಯ ಕತೆ ಮುಗಿಯುತ್ತದೆ. ಆದರೆ ಬಂದ ಸ್ವಾತಂತ್ರ್ಯವನ್ನು ಆಕೆ ಬಳಸಿದ ರೀತಿ ಯಾವುದು, ಅದರಿಂದ ಆಕೆ ಪಡೆದ ಪ್ರಯೋಜನಗಳು ಎಂಥವು ಎಂಬ ಮುಂತಾದ ಪ್ರಶ್ನೆಗಳು ಸಹಜ ವಾಗಿಯೆ ತಲೆ ಎತ್ತುತ್ತವೆ. ಅಲ್ಲದೆ, ಈ ಸ್ವಾತಂತ್ರ್ಯದ ಬೆಲೆ ಎಷ್ಟು, ಅದರ ಅಗತ್ಯದ ಸ್ವಭಾವ-ಸ್ವರೂಪಗಳು ಎಂಥವು, ಅದರ ವ್ಯಾಪ್ತಿ-ಪರಿಮಿತಿಗಳು ಏನು ಎಂಬ ಪ್ರಶ್ನೆಗಳೂ ಸ್ವಾಭಾವಿಕವಾಗಿ, ಅನಿವಾರ್ಯವಾಗಿ ಮುಂಬರು ತ್ತವೆ. ಆದರೆ ಕತೆಯನ್ನು ಪೂರ್ತಿಯಾಗಿ ಮುಗಿಯಿಸದೆ ಈ ಯಾವ ಮಾತು ಗಳನ್ನು ಕುರಿತೂ ಯೋಚಿಸಿ, ಚರ್ಚಿಸಿ ಪ್ರಯೋಜನವಿಲ್ಲ. ಹೀಗೆಂದೇ ಇಲ್ಲಿಯ ಕತೆಯನ್ನು 'ಕಟ್ಟಿದ ಮನೆ' ಮತ್ತು 'ಬಾಡಿದ ಹೂ' ಎಂಬ ಎರಡು ಕಾದಂಬರಿಗಳಲ್ಲಿ ಮುಂದರಿಸಿ ಮುಗಿಯಿಸಿದ್ದೇನೆ. ಈ ಎರಡು ಕಾದಂಬರಿಗಳಲ್ಲಿ ಮೋಹಿನಿ ತನಗೆ ದೊರಕಿದ ಸ್ವಾತಂತ್ರ್ಯವನ್ನು ಬಳಸಿದ ಬಗೆಯನ್ನೂ, ಅದರಿಂದಾಗಿ ಹುಟ್ಟಿಕೊಂಡ ಸನ್ನಿವೇಶವನ್ನೂ ಚಿತ್ರಿಸಬಯ ಸಿದ್ದೇನೆ. ಮೋಹಿನಿಯ ರೀತಿ ಮೋಹಿನಿಯದು. ಆಕೆಯ ಪಾಲಿಗೆ ಬಂದ ಸುಖದುಃಖಗಳ ಹೊಣೆ ಆಕೆಯದು. ಆದ್ದರಿಂದ ಹೆಣ್ಣುಗಂಡುಗಳ ಸಮಾನ ಅಧಿಕಾರದ ಸಮಸ್ಯೆಗೆ ಮೋಹಿನಿಯ ಕತೆ ಒಂದು ಬಗೆಯ ಉತ್ತರವನ್ನು ಹೇಳುತ್ತದೆ. ಅದು ಕೊನೆಯ ಉತ್ತರವೂ ಅಲ್ಲ: ಅದೊಂದೇ ಉತ್ತರವೂ ಅಲ್ಲ. ಬೇರೆ ಬೇರೆ ವ್ಯಕ್ತಿಗಳು ಬೇರೆಯಾಗಿ ಅದೇ ಸಮಸ್ಯೆಯನ್ನು ಬಿಡಿಸಬಲ್ಲವು. ಮೋಹಿನಿ ಆ ಸಮಸ್ಯೆಯನ್ನು ಎದುರಿಸಿದ ಬಗೆಯನ್ನು ವಿವರಿಸುವ ಈ ಎರಡೂ ಕಾದಂಬರಿಗಳು ಇದೇ ಸಾಹಿತ್ಯ ಮಾಲೆಯಲ್ಲಿ ಬೇಗನೆ ಪ್ರಕಟವಾಗಲಿವೆ. ಕುತೂಹಲ ತಳೆದ ಓದುಗರಿಗೂ ಕೊರತೆಯನ್ನು ಕಂಡ ವಿಮರ್ಶಕರಿಗೂ ಈ ಒಂದು ಆಹ್ವಾನನ ಸಾಕಲ್ಲವೆ?

ಅಹಮ್ಮದಾಬಾದ್

೬-೩-೧೯೫೨ **ವಿ. ಎಂ. ಇನಾಂದಾರ್**

# ಕನಸಿನ ಮನೆ

## ೧

ಚರ್ಚ್‌ಗೇಟ್ ನಿಲ್ದಾಣದಲ್ಲಿಯ ಟಿಕೆಟ್ ಆಫೀಸಿನ ಹತ್ತಿರ ನಿಂತು ದಾರಿ ಕಾಯ್ದು ಕಾಯ್ದು ವಸಂತನಿಗೆ ಬೇಸರವಾಯಿತು. ವೇಳೆ ಮೂರೂ ಇಪ್ಪತ್ತಾದರೂ ಮೂರು ಗಂಟೆಗೆ ಸರಿಯಾಗಿ ಬರುತ್ತೇನೆಂದು ಹೇಳಿದವರು ಬಂದಿರಲಿಲ್ಲ. ಇನ್ನೈದು ನಿಮಿಷಗಳಿಗೆ ಇನ್ನೊಂದು ಲೋಕಲ್ ಬರುವುದಿತ್ತು. ವಸಂತ ಹತ್ತಿರದ ಗೋಡೆಯ ಮೇಲೆ ಅಂಟಿಸಿದ ವೇಳಾಪತ್ರಿಕೆಯನ್ನು ನೋಡಿಕೊಂಡು ಬಂದ. ಇಪ್ಪತ್ತು ನಿಮಿಷಗಳನಂತರದ ಲೋಕಲ್ ಬರುವ ವರೆಗೆ ಕಾಯ್ದು ತಾನು ತಿರುಗಿ ದಾದರ್ ಕಡೆಗೆ ಹೋಗತಕ್ಕದ್ದೆಂದು ನಿರ್ಧಾರಮಾಡಿದ. ವೇಳೆಗೆ ಸರಿಯಾಗಿ ಬರುತ್ತೇನೆಂದು ಹೇಳಿದವರು ಬಾರದೆ ಹೋದರೆ ಕಾಯುವವನಿಗೆ ನಿರಾಶೆಯೆನಿಸುವುದೇನೋ ಸ್ವಾಭಾವಿಕ. ಆದರೆ ವಸಂತನ ಬೇಸರದಲ್ಲಿ ನಿರಾಶೆಗಿಂತಲೂ ಉತ್ಸಾಹಭಂಗ ಹೆಚ್ಚಾಗಿತ್ತು. ಉತ್ಸಾಹಭಂಗಕ್ಕಿಂತಲೂ ದಾರಿಗಾಣದ ಕುತೂಹಲ ಕುಸಿದುಬೀಳುವಂತಾಗಿತ್ತು. ಯಾಕೆಂದರೆ ಮೂರು ಗಂಟೆಗೆ ಸರಿಯಾಗಿ ತನ್ನನ್ನು ಚರ್ಚ್‌ಗೇಟಿನಲ್ಲಿ ಕಾಣುತ್ತೇನೆಂದು ಹೇಳಿದವರು ವಸಂತನ ಗೆಳೆಯನೂ ಅಲ್ಲ, ಗೆಳತಿಯೂ ಅಲ್ಲ; ಬೋರಿವಲಿಯಲ್ಲಿಯ ತನ್ನ ಕೋಣೆಯಿಂದ ಮೂರು ನಾಲ್ಕು ಮನೆ ಬಿಟ್ಟು ಐದನೆಯ ಮನೆಯಲ್ಲಿರುತ್ತಿದ್ದ ಆನಂದನ ಹೆಂಡತಿ—ಮೋಹಿನಿ! ಇನ್ನಾರಾದರೂ ಆಗಿದ್ದರೆ ವಸಂತ ಯಾವಾಗಲೋ ಹೊರಟುಹೋಗುತ್ತಿದ್ದ. ಆದರೆ ಮೋಹಿನಿ ತನ್ನನ್ನು ಯಾತಕ್ಕಾಗಿ ಕಾಣಬೇಕಾಗಿತ್ತು ಎಂಬುದೂ ಕೂಡ ತಿಳಿಯದಿದ್ದ ವಸಂತನಿಗೆ ಎಷ್ಟು ಬೇಸರವೆನಿಸಿದ್ದರೂ—ದಾರಿ ಕಾಯುವುದು ಉಪಚಾರಕ್ಕಾಗಿಯಾದರೂ ಅನಿವಾರ್ಯವಾಗಿ ಕಾಣುತ್ತಿತ್ತು.

ಒಂದು ಲೋಕಲ್ ಗಾಡಿ ಬಂದು ಜನಜಾತ್ರೆಯೆಲ್ಲವೂ ಬಯಲಾಯಿತು. ಅಂದು ಶನಿವಾರವಾದ್ದರಿಂದ ಆಫೀಸುಗಳಿಂದ ತಿರುಗಿ ಹೋಗುವವರ ಗದ್ದಲವೂ ವಿಪರೀತವಾಗಿತ್ತು. ಆ ಗಾಡಿಯಿಂದಲೂ ಮೋಹಿನಿ ಬರಲಿಲ್ಲ. ಇನ್ನು ಮುಂದಿನ ಗಾಡಿ ಕೊನೆಯದೆಂದು ಅತ್ತಿತ್ತ ಅಲೆದಾಡಿದ. ಮನಸ್ಸಿನಲ್ಲಿ ಒಂದೇ

ಒಂದು ಯೋಚನೆ ಪ್ರಶ್ನೆಯಾಗಿ ಮೂಡಿ ಉತ್ತರ ಸಿಕ್ಕದೆ ತೊಳಲಾಡುತ್ತಿತ್ತು. ತಾನು ಬೆಳಗ್ಗೆ ಒಂಬತ್ತು ಗಂಟೆಗೆ ಆಫೀಸಿಗೆ ಹೊರಟಾಗ ಬೋರಿವಲಿ ಪ್ಲಾಟ್ ಫಾರ್ಮಿನ ಮೇಲೆ ಅವಳು ತನ್ನನ್ನು ಸಂಧಿಸಿದ ಸನ್ನಿವೇಶ ಮೇಲಿಂದಮೇಲೆ ಕಣ್ಣೆದುರು ನಿಲ್ಲುತ್ತಿತ್ತು. ವಸಂತ ಅವಳನ್ನು ಹೆಚ್ಚುಕಡಿಮೆ ಬೆಳಗಿನ ಅದೇ ರೈಲಿನಿಂದ ಹೋಗುವುದನ್ನು ಎಷ್ಟೋ ಬಾರಿ ನೋಡಿದ್ದ. ಅವಳನ್ನು ನೋಡಿದಾಗಲೆಲ್ಲವೂ ಆನಂದನ ದೈವವನ್ನು ಕೊಂಡಾಡಿದ್ದ—ಅಂಥ ಚೆಲುವು ಆಕೆಯದು! ಇದುವರೆಗೆ ಮೋಹಿನಿಯನ್ನು ತಾನಾಗಿಯೇ ಮಾತನಾಡಿಸಿರಲಿಲ್ಲ. ಆದರೆ ಇತ್ತೀಚೆಗೆ ಎಲ್ಲಿಯಾದರೂ ಆಕೆ ದಾರಿಯಲ್ಲಿ ಸಿಕ್ಕಾಗ 'ಏನು? ಎಲ್ಲ ಸೌಖ್ಯವಷ್ಟೆ? ಆನಂದ ಏನೆನ್ನುತ್ತಾರೆ?' ಎಂಬಂಥ ಸಾಮಾನ್ಯ ಪ್ರಶ್ನೆ ಕೇಳಿ ನಸುನಕ್ಕು ಮುಂದಕ್ಕೆ ಸಾಗುತ್ತಿದ್ದ. ಇದಕ್ಕೆ ಕಾರಣ—ವಸಂತ-ಆನಂದರ ಪರಿಚಯ ಕಳೆದ ಒಂದು ವರ್ಷದಲ್ಲಿ ಬೆಳೆಯುತ್ತಿದ್ದು ಗೆಳೆತನವಾಗುವುದರಲ್ಲಿತ್ತು. ರಜೆ ಇದ್ದಾಗ ಆನಂದ ಆಗೀಗ ವಸಂತನ ಕೋಣೆಗೆ ಬರುತ್ತಿದ್ದ. ಹತ್ತಾರು ವಿಷಯಗಳನ್ನು ಕುರಿತು ಹರಟೆ ಹೊಡೆಯುತ್ತಿದ್ದ. ಓದಲಿಕ್ಕೆಂದು ವಸಂತನಿಂದ ಬೇಕಾದಷ್ಟು ಪುಸ್ತಕಗಳನ್ನು ಒಯ್ಯುತ್ತಿದ್ದ. ಏನೋ ಒಂದು ರೀತಿಯಲ್ಲಿ ಸಲಿಗೆ ಬೆಳೆಯುತ್ತಿದ್ದಿತು. ವಸಂತ ಕೂಡ ಆನಂದನ ಜತೆಯಲ್ಲಿ ಅವನ ಮನೆಗೆ ಹೋಗುತ್ತಿದ್ದ. ಒಂದೆರಡು ಸಲ ಹಬ್ಬದ ನಿಮಿತ್ತವಾಗಿ ವಸಂತನಿಗೆ ಆನಂದನ ಮನೆಯಲ್ಲಿ ಔತಣದ ಊಟವೂ ಆಗಿತ್ತು. ಇಂತಹ ಪ್ರಸಂಗಗಳಲ್ಲಿ ಮೋಹಿನಿ ವಸಂತನ ಕೂಡ ನಡುನಡುವೆ ಬಾಯಿಹಾಕಿ ಮಾತನಾಡಿದ್ದೂ ಇತ್ತು. ಹದಿನೈದು ದಿವಸಗಳ ಹಿಂದೆ ಆನಂದ-ಮೋಹಿನಿಯರೊಡನೆ ವಸಂತನೂ ಚಿತ್ರಪಟವೊಂದನ್ನು ನೋಡಲಿಕ್ಕೆ ಹೋದಾಗ ಆ ಚಿತ್ರಪಟದ ವಿಷಯವಾಗಿ ಹೆಣ್ಣಿನ ಸ್ಥಾನಮಾನಗಳನ್ನು ಕುರಿತು ಮೂವರಲ್ಲಿಯೂ ಒಳ್ಳೆ ತುರುಸಿನ ಚರ್ಚೆಯಾಗಿತ್ತು. ಆ ಚರ್ಚೆಯಲ್ಲಿ ಆನಂದ ಮೋಹಿನಿಯರು ವಿರುದ್ಧ ಪಕ್ಷಪಾತಿಗಳು. ವಸಂತನ ಒಲವು ತನ್ನ ಕಡೆಗೆ ಇದ್ದುದನ್ನು ತಿಳಿದ ಮೋಹಿನಿ ಒಳ್ಳೆ ಗೆಲುವಿನಿಂದ ವಾದ ನಡೆಸಿದ್ದಳು........ ಆದರೆ ಇದುವರೆಗೆ ಮೋಹಿನಿ ತಾನಾಗಿಯೆ ತನ್ನನ್ನು ಮಾತನಾಡಿಸದಿದ್ದವಳು ಇಂದು ಬೆಳಗ್ಗೆ ಬಂದು ನಿಲ್ದಾಣದಲ್ಲಿ ಮಾತನಾಡಿಸಿದ್ದು ವಸಂತನಿಗೆ ವಿಚಿತ್ರವೆನಿಸಿತ್ತು. ಆದರೆ ಮರುಕ್ಷಣದಲ್ಲಿಯೆ ವಸಂತನಿಗೆನಿಸಿತು, ತಾವು ಮಾತ

ನಾಡುತ್ತಿದ್ದುದು ಅದೇನು ನಿಜವಾಗಿಯೂ ಮೊದಲ ಸಲವಲ್ಲ ಎಂದು. ವಾರ ದಲ್ಲಿ ಮೂರು ನಾಲ್ಕು ಬಾರಿಯಾದರೂ ಸಿಲ್ದಾಣದಲ್ಲಿ ಭೆಟ್ಟಿಯಾಗುತ್ತಿದ್ದ ರಿಂದಲೊ, ತನ್ನ ಮತ್ತು ಆನಂದನ ನಡುವೆ ಬೆಳೆಯುತ್ತಿದ್ದ ಸಲಿಗೆ ಗೊತ್ತಿದ್ದ ರಿಂದಲೊ, ಎಷ್ಟೋ ಬಾರಿ ತನ್ನ ಮತ್ತು ಮೋಹಿನಿಯ ಕಣ್ಣುಗಳು ಒಬ್ಬ ರೊಬ್ಬರೊಡನೆ ಬಾಯಿಗಿಂತ ಹೆಚ್ಚಾಗಿ ಮಾತನಾಡಿದ್ದನ್ನು ನೆನೆದಾಗ, ವಸಂತನಲ್ಲಿಯ ವಿಚಿತ್ರವಾದ ಆ ಭಾವನೆ ತಗ್ಗಿ, ಆಕೆ ತನ್ನನ್ನು ಕಾಣ ಬೇಕೆಂದುದು ಯಾತಕ್ಕಾಗಿರಬಹುದು ಎಂಬ ಕುತೂಹಲ ಕೆರಳಿ ನಿಲ್ಲುತ್ತಿತ್ತು.

ಅಂತೆಯೆ ಇಂದು ಬೆಳಗ್ಗೆ ರೈಲಿಗಾಗಿ ಕಾಯುತ್ತಿದ್ದ ವಸಂತ ತನ್ನೆಡೆಗೇ ಬರುತ್ತಿದ್ದ ಮೋಹಿನಿಯನ್ನು ಕಂಡು ಅರೆನಿಮಿಷ ಚಕಿತನಾಗಿದ್ದ. ಏನು, ಎಂತು ಎಂದು ವಿಚಾರ ಮಾಡುವುದರಲ್ಲಿಯೇ ಮೋಹಿನಿ ಬಂದು ಹೇಳಿದ್ದಳು :

"ನಿಮ್ಮ ಕೂಡ ಒಂದೆರಡು ಮಾತು ಹೇಳಬೇಕಾಗಿದೆ."

"ನನಗೆಯೆ ?"

"ಹುಂ...."

"ಹೇಳಬಹುದಲ್ಲ ?"

"ಯಾವಾಗ ?"

"ಯಾವಾಗಲೇನು ? ಈಗಲೇ ಹೇಳಿಬಿಡಬಹುದಲ್ಲ !"

"ಇಂದು ಮಧ್ಯಾಹ್ನ ನಿಮಗೆ ಬಿಡುವಿಲ್ಲವೆ ?"

"ಇಂದು ಮಧ್ಯಾಹ್ನ ನಾನು ಆಫೀಸು ಬಿಡುವುದು ಎರಡೂವರೆಗೆ...."

"ಎಲ್ಲಿ ನಿಮ್ಮ ಆಫೀಸು ?"

"ಫೋರ್ಟಿನಲ್ಲಿ."

"ಹಾಗಾದರೆ ನಾನು ಚರ್ಚ್‌ಗೇಟಿಗೆ ಬಂದರೆ ಅನುಕೂಲವೆ ನಿಮಗೆ?"

"ಯಾಕೆ ? ಆ ಕಡೆ ನೀವು ಬರುವವರಿದ್ದೀರಾ ?"

"ಹೌದು !"

"ಎಷ್ಟು ಗಂಟೆಗೆ ?"

"ಮೂರು ಗಂಟೆಗೆ ಬರಲೆ ?"

"ನಿಮ್ಮ ಅನುಕೂಲ...."

" ನೀವು ಅಲ್ಲಿ ಕಾಯುವಿರಾ ? "

" ಹುಂ...."

" ಎಲ್ಲಿ ? "

" ನೀವೇ ಹೇಳಿಬಿಡಿರಿ."

" ಟಿಕೆಟ್ ಆಫೀಸಿನ ಹತ್ತಿರ ನಾನಿರುತ್ತೇನೆ...."

" ಸರಿ. ಆದರೆ ಏನು ವಿಷಯ ಹೇಳಕೂಡದೆ ? "

" ಹೇಳಕೂಡದೇಕೆ ? ಹೇಳಬೇಕೆಂತಲೆ ಬರುತ್ತೇನೆ."

" ಆನಂದರಾಯರೂ ಬರುತ್ತಾರೇನು ? "

" ಇಲ್ಲ ! "

" ಹಾಗಾದರೆ...."

ಎನ್ನುವಷ್ಟರಲ್ಲಿಯೆ ರೈಲು ಬಂದಿತ್ತು. ಮೋಹಿನಿ ಹೆಣ್ಣುಮಕ್ಕಳ ಗಾಡಿಯನ್ನು ಸೇರಿದ್ದಳು.

ಆ ಕ್ಷಣದಿಂದ ಈ ವರೆಗೂ ವಸಂತನಿಗೆ ಅದೇ ಯೋಚನೆ. ಯಾತಕ್ಕಾಗಿ ಕರೆದಿರಬಹುದು ? ಹೇಳಬೇಕಾದ ವಿಷಯವೇನು ಇರಬಹುದು ? ಎಂದು. ಆಫೀಸಿನ ಕೆಲಸದಲ್ಲಿ ಲಕ್ಷ್ಯವೆ ಉಳಿದಿರಲಿಲ್ಲ. ಸಾವಿರ ಯೋಚನೆಗಳು ಸುಳಿದು ಹೋಗಿದ್ದವು. ಏನೆಂಬುದನ್ನು ತಿಳಿಯುವ ಕುತೂಹಲ ಒಂದೆಡೆಯಾದರೆ, ತಾನವಳಿಗೆ ಬರಲೊಪ್ಪಿ ಅವಳಿಗಾಗಿ ಕಾಯುತ್ತೇನೆಂದು ಹೇಳಿದ್ದು ಸರಿಯೆ ಎಂಬ ವಿವೇಕದ ವಿಚಾರ ಇನ್ನೊಂದೆಡೆಗೆ. ಎಷ್ಟಾದರೂ ಅವಳು ಎರಡನೆಯವರ ಹೆಂಡತಿ. ಆದರೆ ಕೂಡಲೆ ಸಮಾಧಾನ ಹೇಳಿಕೊಳ್ಳುತ್ತಿದ್ದ. ತಾನಾಗಿಯೆ ಬಂದು ಮಾತನಾಡಿಸಿದರೆ ಮಾಡುವುದೇನು ? ತನ್ನದೇನು ತಪ್ಪು ? ಎಂದು. ಅವಳಿಗಾಗಿ ದಾರಿ ಕಾಯಬೇಕೊ ಬೇಡವೋ ಎಂಬ ಎಳೆದಾಟದಲ್ಲಿ ಚೆಲುವನ್ನು ಎಲ್ಲಿ ಕಂಡರೂ ಮಾರುಹೋಗುವ ವಸಂತನ ಮನಸ್ಸು ವಿವೇಕವನ್ನು ಸೋಲಿಸಿಬಿಟ್ಟಿತ್ತು. ಆನಂದ–ಮೋಹಿನಿಯರ ವೈವಾಹಿಕ ಜೀವನದ ಬಗೆಯಲ್ಲಿ ಎಷ್ಟೋ ಹಾರುಮಾತುಗಳನ್ನು ವಸಂತ ಕೇಳಿದ್ದ. ತನ್ನ ಮತ್ತು ಆನಂದನ ಸಲಿಗೆ ಇದ್ದುದನ್ನು ನೆನೆದು ಅದೇ ವಿಷಯವನ್ನು ಕುರಿತು ಏನನ್ನಾದರೂ ಹೇಳುವವಳಿರಬಹುದೇ ಎಂದೂ ಯೋಚಿಸಿದ್ದ. ಆದರೆ ವಸಂತನ ಬುದ್ಧಿ ಹತ್ತು ಪ್ರಶ್ನೆಗಳನ್ನೇ ಎತ್ತುತ್ತಿತ್ತಲ್ಲದೆ ಆ ಪ್ರಶ್ನೆಗಳಿಗೆ ಉತ್ತರ ಹೇಳಲು ಸಮರ್ಥವಾಗುತ್ತಿದ್ದಿಲ್ಲ.

ನಿಂತು ನಿಂತು ಸಾಕಾಯಿತು. ಕಾಲುಗಳೂ ನೋಯಹತ್ತಿದವು. ಮೂರೂ ನಾಲ್ವತ್ತಕ್ಕೆ ಒಂದು ಲೋಕಲ್ ಬಂದಿತು. ಈ ಗಾಡಿಯಿಂದ ಬರದೇ ಇದ್ದರೆ ತಾನು ಹೊರಡತಕ್ಕದ್ದೆಂದು ಗೊತ್ತುಮಾಡಿಕೊಂಡಿದ್ದ ವಸಂತ ನುಗ್ಗಿ ಬರುತ್ತಿದ್ದ ಜನಸಮುದಾಯದಲ್ಲಿಯ ಪ್ರತಿಯೊಬ್ಬ ಸ್ತ್ರೀಯನ್ನೂ ನೋಡಿದ. ಸಂದಣಿ ಬರಿದಾಗತೊಡಗಿತು. ನಾಲ್ಕಾರು ಜನರ ಹಿಂದೆ ಮೋಹಿನಿ ಕಾಣಿಸಿ ಕೊಂಡಳು. ಅದೇಕೆ ಯಾರು ಬಲ್ಲರು—ವಸಂತನಿಗೆ ಅರೆನಿಮಿಷ ಮೈ ಝುಲ್ಲೆಂದಿತು. ಕೈಯಲ್ಲೊಂದು ಕ್ಯಾನ್‌ವಾಸ್ ಬ್ಯಾಗ್ ಹಿಡಿದುಕೊಂಡು ಮೋಹಿನಿ ತನ್ನನ್ನೆ ಹುಡುಕಿಕೊಂಡು ಬಂದಳು.

"ಕ್ಷಮಿಸಿ, ಬಹಳ ತಡವಾಯಿತು....ನೀವು ಬಂದು ಆಗಲೆ ಬಹಳ ಹೊತ್ತಾಯಿತೇನು?"

"ಸರಿಯಾಗಿ ಮೂರಕ್ಕೆ ಬಂದೆ...."

"ನನಗೆ ಬೆಳಗ್ಗೆ ಗಡಿಬಿಡಿಯಲ್ಲಿ ಜ್ಞಾಪಕಕ್ಕೆ ಬರಲಿಲ್ಲ, ನಮಗಿಂದು ಕೊನೆಯ ಪೀರಿಯಡ್ ಸ್ಪೆಷಲ್ ಕ್ಲಾಸ್ ಇದ್ದದ್ದು. ತಪ್ಪಿಸಲಿಕ್ಕೂ ಆಗಲಿಲ್ಲ. ನಿಮಗೆ ತೀರ ಬೇಸರವಾಗಿರಬೇಕು...."

"ಹಾಗೇನಿಲ್ಲ, ಈ ಗಾಡಿಗೆ ನೀವು ಬಂದಿರದಿದ್ದರೆ ಮಾತ್ರ ನಾನು ಹೊರಟುಹೋಗುತ್ತಿದ್ದೆ...."

"ಇನ್ನೂ ಹತ್ತು ನಿಮಿಷ ಬೇಗ ಬರಬಹುದಾಗಿತ್ತು. ನಡುವೆಯೆ ಗಾಡಿ ಬೇರೆ ನಿಂತುಬಿಟ್ಟಿತು...."

"ಹೌದು. ಗಾಡಿ ಹತ್ತು ನಿಮಿಷ ತಡವಾಗಿಯೆ ಬಂದಿತು."

"ಈಗ ಎಲ್ಲಿ ಹೋಗೋಣ? ಹೊರಗಡೆ ಹೋಗೋಣವೆ?"

"ಹುಂ....ಇಲ್ಲಿಯೆ ಎಲ್ಲಿಯಾದರೂ ರೆಸ್ಟೂರಾಂಟಿಗೆ ಹೋಗಿ ಚಹ ತೆಗೆದುಕೊಳ್ಳಬಹುದಲ್ಲವೆ?"

"ಆಗಬಹುದು" ಎಂದು ಮೋಹಿನಿ ಮೌನದಿಂದಲೆ ಸೂಚಿಸಿದಳು. ನಿಲ್ದಾಣದ ಪಶ್ಚಿಮ ಬದಿಯಲ್ಲಿಯ ದೊಡ್ಡ ಬೀದಿಗುಂಟ ಇಬ್ಬರೂ ಜೊತೆಯಾಗಿ ನಡೆದರು. ವಸಂತನ ಕಣ್ಣುಗಳು ಒಳ್ಳೆಯದಾದ ಚಹದಂಗಡಿಯೊಂದನ್ನು ಹುಡುಕುತ್ತಿದ್ದವು. ಕೇವಲ ಚಹ ಕುಡಿದು ಹೊರಬೀಳುವುದಾಗಿದ್ದರೆ ಅಲ್ಲಿಯೆ ಸಮೀಪದ ಅಂಗಡಿಯನ್ನೆ ಸೇರಿಬಿಡಬಹುದಾಗಿತ್ತು. ಆದರೆ

ಕುಡಿಯುವ ಚಹದಕಿಂತ ಆಡಬೇಕಾದ ಮಾತೇ ಮಹತ್ವದ್ದಾಗಿದ್ದರಿಂದ ಹಾಯಾಗಿ ಕುಳಿತುಕೊಳ್ಳಲಿಕ್ಕೆ ಯೋಗ್ಯವಾದ ಸ್ಥಳವಿದ್ದುದನ್ನು ವಸಂತ ಇದಿರುನೋಡುತ್ತಿದ್ದ. ಬೀದಿಯ ಕೊನೆಯವರೆಗೂ ಬಂದಾಯಿತು. ಇಳಿ ಬಿಸಿಲು ಮೋರೆಯನ್ನು ಅಡರುತ್ತಿತ್ತು. ಎದುರಿನಲ್ಲಿಯೆ ಸಮುದ್ರ ವಿಸ್ತಾರವಾಗಿ ಹಬ್ಬಿಕೊಂಡಿತ್ತು. ಮೂಲೆಯ ಮೇಲಿನ ಅಂಗಡಿಯೆ ಕೊನೆಯದಾದ್ದರಿಂದ ಇಬ್ಬರೂ ಒಳಸೇರಿದರು. ಎದುರಿನ ಕುರ್ಚಿಯ ಮೇಲೆ ತನ್ನ ಹ್ಯಾಟನ್ನು ಇಡುತ್ತಿದ್ದ ವಸಂತನಿಗೆ ಮೋಹಿನಿ,

"ಇಲ್ಲಿ ಯಾಕೆ? ಆ ರೂಮಿನಲ್ಲೆ ಕುಳಿತುಕೊಳ್ಳಬಹುದಲ್ಲವೆ?" ಎಂದಳು.

ಎದುರಿನ 'ಫ್ಯಾಮಿಲಿ ರೂಮ್' ತೆರವಾಗಿಯೆ ಇತ್ತು. ವಸಂತನಿಗೆ ಒಂದು ಕ್ಷಣ ವಿಚಿತ್ರವೆನಿಸಿತು. ಆದರೂ ಹ್ಯಾಟನ್ನೆತ್ತಿಕೊಂಡು ಒಳಗಡೆಗೆ ನಡೆದ. ಮೋಹಿನಿ ಪಕ್ಕದ ಕುರ್ಚಿಯಲ್ಲಿ ಕುಳಿತುಕೊಳ್ಳುವಷ್ಟರಲ್ಲಿಯೆ ಪರಿಚಾರಕನೂ ಬಂದ.

"ಏನು ತೆಗೆದುಕೊಳ್ಳುತ್ತೀರಿ ನೀವು?"

ಎಂದ ವಸಂತ.

"ನನಗೇನೂ ಬೇಡ...."

"ಚಹ ತೆಗೆದುಕೊಳ್ಳುವುದಿಲ್ಲವೆ ನೀವು?"

"ಹುಂ....ಚಹ ಸಾಕು."

"ತಿನ್ನಲಿಕ್ಕೆ?"

"ತಿನ್ನಲಿಕ್ಕೆ ಏನೂ ಬೇಡ."

"ಬಿಸ್ಕೇಟು ಹೇಳಲಾ?"

"ಹುಂ...."

"ದೋ ಚಾಯ್ ಔರ್ ಬಿಸ್ಕೇಟ್ ಲಾವ್."

ಪರಿಚಾರಕ ಮರೆಯಾದ. ಮೋಹಿನಿ ತನ್ನ ಕೈಯಲ್ಲಿಯ ಚಿನ್ನದ ಬಳೆಗಳನ್ನು ಹಿಂದುಮುಂದೆ ಸರಿಸಾಡುತ್ತಿದ್ದಳು. ವಸಂತನ ಮನಃಸ್ಥಿತಿ ವಿಚಿತ್ರವಾಗಿತ್ತು. ಏನು ಮಾತಾಡಬೇಕೆಂಬುದು ತಿಳಿಯದೆ ಮೋಹಿನಿಯನ್ನು ನೋಡುವುದಕ್ಕೆ ಸರಿಯಾಗಿ ಮೋಹಿನಿಯೂ ಅವನನ್ನು ನೋಡಿ ನಸುನಕ್ಕು,

" ಏನು ? " ಎಂದಳು.

" ಅದನ್ನೇ ನಾನೂ ಕೇಳುತ್ತಿದ್ದೇನೆ."

" ಮೊದಲು ನೀವು ಹೇಳಿರಿ."

" ನಾನೇನು ಮೊದಲು ಹೇಳಲಿ ? ಏನನ್ನೋ ಹೇಳಬೇಕಾಗಿದೆ ಎಂದು ಹೇಳಿದವರು ನೀವು ! "

" ಹೌದು. ಆದರೂ ನಿಮ್ಮಿಂದ ಒಂದು ವಿಷಯ ತಿಳಿಯಬೇಕಾಗಿದೆ ! "

" ಏನು ? "

" ಮೊನ್ನೆ ನಮ್ಮ ಮನೆಯೆದುರು ನೀವು ಹಾಯ್ದುಹೋಗುತ್ತಿದ್ದಾಗ ನನ್ನ ಭಾವ ಭಾಸ್ಕರರಾಯ ನಿಮ್ಮನ್ನು ಮಾತಾಡಿಸಿದರಲ್ಲವೆ ? "

" ಹೌದು."

" ಏನೆಂದು ಹೇಳಿದರು ? "

" ಏನೂ ಇಲ್ಲ ! "

" ಏನೂ ಇಲ್ಲವೆ ? ಹಾಗಾದರೆ ಒಳ್ಳೆ ಇಪ್ಪತ್ತು ನಿಮಿಷ ಏನು ಮಾತಾಡಿದಿರಿ ? ನನ್ನ ವಿಷಯವಾಗಿಯೆ ಮಾತಾಡಿದಿರಲ್ಲವೆ ? "

" ಅದು ನಿಮಗೆ ಹೇಗೆ ಗೊತ್ತು ? "

" ನನಗೆ ಹೇಗೆ ಗೊತ್ತೆ ? ಅವರಿಗೆ ಮಾತಾಡಲಿಕ್ಕೆ ನನ್ನ ಹೊರತು ಬೇರೆ ವಿಷಯವೇ ಇರುವುದಿಲ್ಲ. ನನ್ನ ವಿಷಯದಲ್ಲಿ ಎಷ್ಟು ಅಪಪ್ರಚಾರ ಮಾಡಿದರೂ ಅವರಿಗೆ ಸಮಾಧಾನವಿಲ್ಲ."

" ಆದರೆ ನನ್ನ ಮುಂದೆ ಅಂಥ ಯಾವ ಮಾತನ್ನೂ ಆಡಲಿಲ್ಲ ಅವರು."

" ಹಾಗಾದರೆ ಎಂಥ ಮಾತು ಹೇಳಿದರು ? "

" ಏನೊ, ಅವರಿಗೆ ತಪ್ಪು ಕಲ್ಪನೆಯಾಗಿರಬೇಕು....ಪಾಪ...."

" ಯಾಕೆ ಈ ಮುಚ್ಚುಮರೆ ? ನನಗೆ ಅದನ್ನು ತಿಳಿಯಬೇಕಾಗಿದೆ ಯೆಂದೇ ನಿಮ್ಮ ಕಡೆಗೆ ಬರುವ ಧೈರ್ಯ ಮಾಡಿದ್ದೇನೆ....ನಿಮಗೆ ವಿಚಿತ್ರ ವೆನಿಸುತ್ತಿರಬಹುದು. ಆದರೆ ಯಾಕೋ ನಿಮ್ಮನ್ನು ವಿಶ್ವಾಸದಿಂದ ಈ ವಿಷಯದಲ್ಲಿ ಮಾತನಾಡಿಸಬಹುದು ಎನಿಸಿತು ; ಅದಕ್ಕಾಗಿ ನಿಮ್ಮನ್ನು ಕೇಳಿ ಕೊಂಡೆ."

ಇನ್ನುಮುಂದೆ ಮಾತು ತಪ್ಪಿಸುವುದು ಸಾಧ್ಯವಿಲ್ಲವೆನಿಸಿತು ವಸಂತನಿಗೆ. ಅವಳ ದನಿಯಲ್ಲಿ ಎಲ್ಲಿಯೊ ಒಂದು ಅವ್ಯಕ್ತವಾದ ದುಃಖ ಅಡಗಿಕೊಂಡಂತಿತ್ತು. ಅವಳ ದೃಷ್ಟಿ 'ನನ್ನ ಮೇಲೆ ಇನ್ನೂ ಕನಿಕರವಿಲ್ಲವೆ ನಿಮಗೆ?' ಎನ್ನುವಂತಿತ್ತು. ಮೋಹಿನಿ ಇನ್ನೂ ವರೆಗೆ ಚಹವನ್ನಾಗಲಿ ಬಿಸ್ಕೇಟುಗಳನ್ನಾಗಲಿ ಮುಟ್ಟದೆ ಇದ್ದುದನ್ನು ನೋಡಿ ವಸಂತನೆಂದ:

"ಬಿಸ್ಕೇಟು ಬೇಡವೆ, ನಿಮಗೆ?"

"ತೆಗೆದುಕೊಳ್ಳುತ್ತೇನೆ...." ಎನ್ನುತ್ತ ಒಂದನ್ನೆತ್ತಿಕೊಂಡಳು. ಚಹದ ಕಪ್ಪನ್ನು ಕೆಳಗಿರಿಸುತ್ತ ವಸಂತ ಕೇಳಿದ:

"ಕಳೆದ ವಾರ ಆನಂದರಾಯ ಮನೆಗೆ ಬಂದಿರಲೇ ಇಲ್ಲವೆ?"

"ಇಲ್ಲ!"

"ಅವರಿಗೆ ನೀವು ಯಾರ ಕೈಲಾದರೂ ಬರಹೇಳಿದ್ದಿರೇನು?"

"ಹೌದು....ಯಾಕೆ?"

"ನಿಮ್ಮ ಭಾಸ್ಕರರಾಯರದು ಅದೇ ತಪ್ಪು ಕಲ್ಪನೆಯಾಗಿದ್ದಿತು. ಅಂದು ಸಾಯಂಕಾಲ ಆನಂದರು ಬಂದಿರಲಿಲ್ಲವೆ?"

"ಬಂದಿದ್ದರು....ಅದರಲ್ಲಿ ತಪ್ಪು ಕಲ್ಪನೆಯೇನು?"

"ಅವರನ್ನು ಬರಹೇಳಿದವ ನಾನು ಎಂದು ಅವರು ತಿಳಿದಿದ್ದರು...."

"ಯಾಕೆ ಬರಹೇಳಿದಿರೆಂದು ಕೇಳಿದರೆ?"

"ಹೌದು...."

"ಆಮೇಲೆ?"

"ಆಮೇಲೇನು? ನಾನು ಹೇಳಿಯೆ ಇಲ್ಲವೆಂದು ಹೇಳಿದರೂ ಅವರಿಗೆ ವಿಶ್ವಾಸವಾಗಲಿಲ್ಲವೆಂದು ಕಾಣುತ್ತದೆ."

"ಯಾಕೆ?"

"ಆಮೇಲೆ ಅವರು ತಮ್ಮ ಪಂಚಾಂಗವನ್ನೆ ಬಿಚ್ಚಿದರು. ಎಂಟು ದಿವಸ ಆನಂದರಾಯರಿಗೆ ಬಾರದೆ ಇರಲಿಕ್ಕೆ ಹೇಳಿದವರು ಅವರೇ ಅಂತೆ....ನನಗೆ ವಿಚಿತ್ರವೆನಿಸಿತು!"

"ವಿಚಿತ್ರವೇನೂ ಇಲ್ಲ. ನನ್ನ-ಅವರ ಭೆಟ್ಟಿಯಾಗಬಾರದೆಂಬುದೆ ಅವರ ಉದ್ದೇಶ. ಅದನ್ನು ಅವರು ಅಂದೂ ಸಾಧಿಸಿಬಿಟ್ಟರು!"

“ ಆನಂದರಾಯರು ಬಂದಿದ್ದರಲ್ಲವೆ ? ”

“ ಬಂದಿದ್ದರೂ ಭೆಟ್ಟಿಯಾಗಲಿಲ್ಲ ! ”

“ ಅದು ಹೇಗೆ ? ”

“ ಹೇಗೇನು ? ಅವರಿಗೆ ನನಗಿಂತಲೂ ಅವರ ಅಣ್ಣ, ಅಕ್ಕ ಬೇಕಾಗಿದ್ದಾರೆ. ಅವರಿಬ್ಬರಿಗೆ ನಾನು ಬೇಡವಾಗಿದ್ದೇನೆ. ಅವರಿಬ್ಬರ ಮಾತು ಕೇಳಿ ಕೇಳಿ ಇವರಿಗೂ ಬೇಡವಾಗಿದ್ದೇನೆ ! ”

ಮುಂದೆ ಏನು ಮಾತನಾಡಬೇಕೆಂಬುದು ವಸಂತನಿಗೆ ತಿಳಿಯದೆ ಸುಮ್ಮನಾದ. ಅಷ್ಟರಲ್ಲಿ ಪರಿಚಾರಕ ಬಂದದ್ದರಿಂದ ಕೇಳಿದ :

“ ಇನ್ನಿಷ್ಟು ಚಹ ಹೇಳಲೆ ? ”

“ ನನಗೆ ಬೇಡ.”

“ ನಿಜವಾಗಿಯೂ ? ”

ಅವಳ ಮುಖದಲ್ಲಿ ಅನುಮಾನ ಕಂಡಿತು. ಮತ್ತೆರಡು ಕಪ್ಪು ಚಹ ತರಹೇಳಿ ವಸಂತ ಕೇಳಿದ :

“ ನಾನು ಈ ವಿಷಯದಲ್ಲಿ ಬಾಯಿ ಹಾಕಬಾರದೇನೊ. ಆದರೆ ನೀವಾಗಿಯೆ ಮಾತೆತ್ತಿದ್ದೀರಿ. ಯಾಕೆ ಈ ಎಲ್ಲ ವೈಮನಸ್ಯ ? ಸುಮ್ಮನೆ ಜನರಿಗೆ ಆಡಿಕೊಳ್ಳಲಿಕ್ಕೊಂದು ವಿಷಯ ! ”

“ ನಾನೇನು ಮಾಡಬಹುದು ಅದಕ್ಕೆ ? ”

“ ತಪ್ಪು ಯಾರದು ನಾನೇನು ಹೇಳಬಹುದು ? ಆದರೆ ಹತ್ತು ಬಾಯಿಯಲ್ಲಿ ನಿಮ್ಮಿಬ್ಬರ ವಿಷಯ ಕೇಳಿದ್ದೇನೆ. ನೀವು ದಯಮಾಡಿ ತಪ್ಪು ತಿಳಿದುಕೊಳ್ಳಬಾರದು. ನಿಮ್ಮಿಬ್ಬರಿಗಾಗಿಯೂ ಕಳವಳಪಟ್ಟಿದ್ದೇನೆ....ಸುಖವಾಗಿಯೇ ಇರಬಹುದಲ್ಲ ? ”

“ ಇರಬಹುದು....ಬಹುದು ಅಷ್ಟೇ....”

“ ಅವರ ಅಕ್ಕ-ಅಣ್ಣನ ಮನೆಯವರ ಕೂಡ ಕೂಡಿ ಇರುವುದು ಸಾಧ್ಯವಿಲ್ಲದಾಗಿದ್ದರೆ ನೀವಿಬ್ಬರೂ ಬೇರೆಯಾಗಿಯೆ ಇದ್ದುಬಿಡಬಹುದಲ್ಲ....”

“ ಹತ್ತು ಸಾವಿರ ಬಾರಿ ಹೇಳಿದ್ದೇನೆ ಈ ಮಾತನ್ನು. ಇವರೊಂದು ಒಪ್ಪಬೇಕಲ್ಲ ? ”

“ ಆನಂದರಾಯ ಇದಕ್ಕೆ ಒಪ್ಪುವುದಿಲ್ಲವೆ ? ”

“ ಒಪ್ಪಿದ್ದರೆ ಇಷ್ಟಕ್ಕೇಕೆ ಬರುತ್ತಿತ್ತು ? ”

“ ಯಾಕೆ ಒಪ್ಪುವುದಿಲ್ಲ ? ”

“ ಅವರನ್ನು ಬಿಟ್ಟು ಬೇರೆಯಾಗಿರುವುದು ಅವರಿಗೆ ಸಾಧ್ಯವಿಲ್ಲವಂತೆ ! ”

“ ಹಾಗಾದರೆ ಹೀಗೆಯೆ ಎಷ್ಟು ದಿವಸ ನಡೆಯಬಹುದಂತೆ ? ”

“ ಎಷ್ಟಾದರೂ ಅವರೆಲ್ಲರಿಗೇನು ? ಅವರೆಲ್ಲರೂ ಒಂದು, ನಾನು ಒಂದು. ಅವರೆಲ್ಲರ ಹಿಂಸೆಗೆ ನಾನು ಗುರಿಯಾಗಬೇಕು. ಸಹನೆಯಿರುವ ವರೆಗೂ ನಡೆಯುತ್ತದೆ....ಮುಂದೆ....”

ಮೋಹಿನಿಗೆ ಮಾತು ಸಾಗಿಸಲಾಗಲಿಲ್ಲ. ಕಣ್ಣುಗಳಲ್ಲಿ ನೀರು ತೇಲಾಡುತ್ತಿರುವಂತಿತ್ತು. ಮತ್ತೊಂದು ಕಡೆಗೆ ಮುಖ ತಿರುವಿ ಬೆರಳುಗಳ ತುದಿಯಿಂದ ಕಣ್ಣು ತಿಕ್ಕಿಕೊಂಡಳು. ಯಾವ ರೀತಿ ಸಮಾಧಾನ ಹೇಳಬೇಕೆಂಬುದು ವಸಂತನಿಗೆ ತಿಳಿಯದೆ ಹೋಯಿತು. ಅವನಂದ :

“ ನೀವು ಯೋಚನೆ ಮಾಡಬೇಡಿರಿ, ನಾನು ಯತ್ನ ಮಾಡುವೆ.”

“ ಏನು ಮಾಡಬಹುದು ನೀವು ? ”

“ ಆನಂದರಾಯರ ಕೂಡ ಮಾತಾಡಿ ನೋಡುವೆ.”

“ ಅವರ ಮನಸ್ಸು ದೂಷಿತವಾಗಿದೆ.”

“ ಏನೆಂದು ? ”

ಮೋಹಿನಿ ತಡೆದಳು. ಎದೆಯಲ್ಲಿಯ ಸಂಕಟ ನಾಲಗೆಯನ್ನು ಬಂಧಿಸಿತ್ತು. ವಸಂತನೇ ಮುಂದುವರಿದ :

“ ಏನು, ಅವರ ಆಕ್ಷೇಪಣೆಯಾದರೂ ಏನು ? ”

“ ನನ್ನ ನಡತೆ ಸರಿಯಾಗಿಲ್ಲವಂತೆ ! ”

“ ಅಂದರೆ ? ”

“ ನಾನು ಕಾಲೇಜಿಗೆ ಹೋಗುವುದು ಒಂದು ನೆಪವಂತೆ ! ”

“ ಹೋಗಬಾರದು ಎನ್ನುತ್ತಾರೆಯೋ ? ”

“ ಹೌದು....”

“ ಬೇಡವೆಂದರೆ ಬಿಟ್ಟರಾಯಿತು. ನೀವಾದರೂ ಅವರ ಮನಸ್ಸಿನಂತೆ ನಡೆದು ಯಾಕೆ ನೋಡಬಾರದು ? ”

“ ಎಲ್ಲವನ್ನೂ ಮಾಡಿ ನೋಡಿದ್ದೇನೆ. ಮದುವೆಯಾದಾಗ ಜ್ಯೂನಿಯರ್

ದಲ್ಲಿ ಓದುತ್ತಿದ್ದೆ. ಬೇಡವೆಂದ ಕೂಡಲೆ ಬಿಟ್ಟು ಮೊದಲ ಒಂದು ವರ್ಷ ಮನೆಯಲ್ಲೇ ಇರುತ್ತಿದ್ದೆ. ಈಗ ಅವರೆಲ್ಲರ ಇಚ್ಛೆಯಂತೆ ನಾನು ನಡೆಯುವುದಾದರೆ ನಾನು ಈ ಬೆಳಕನ್ನು ಕೂಡ ನೋಡಬಾರದು!"

"ಇದರಲ್ಲಿ ಇಬ್ಬರೂ ಮಣಿಯಬೇಕು. ಈ ಹಟದಲ್ಲಿ ಸೌಖ್ಯವಿಲ್ಲ. ಇಬ್ಬರೂ ಮಣಿದು ಗೆಲ್ಲಬೇಕು."

"ನಾನೆಲ್ಲಿ ಇಲ್ಲವೆನ್ನುತ್ತೇನೆ? ನಾನು ಮಣಿದು ಮಣ್ಣು ಮುಕ್ಕುವಂತಾಗಿದ್ದೇನೆ!"

"ಈಗ ಕಾಲೇಜಿಗೆ ಹೋಗಲೇಬೇಕೆಂಬ ಹಟವೇಕೆ?"

"ಹೋಗದೆ ಏನು ಮಾಡಲಿ? ಈಗ ಹದಿನೆಂಟು ತಿಂಗಳು ನಾನು ಸಹಿಸಿದ ಹಿಂಸೆಯ ಕಲ್ಪನೆ ನಿಮಗಿದ್ದಿದ್ದರೆ ಈ ಮಾತನ್ನು ನೀವು ಕೇಳುತ್ತಿದ್ದಿಲ್ಲ. ಇವರ ಮನೆಯಲ್ಲಿ ನನಗೆ ಉಳಿಗಾಲವಿಲ್ಲವೆಂಬುದನ್ನು ತಿಳಿದುಕೊಂಡಿದ್ದೇನೆ. ಇಂದಿಲ್ಲ ನಾಳೆ ನನ್ನ ಭವಿಷ್ಯದ ಯೋಚನೆಯನ್ನು ನಾನು ಮಾಡಲೇ ಬೇಕಾಗಿದೆ. ನಾನು ಕಾಲೇಜು ಬಿಟ್ಟುಬಿಡುವುದು ಸಾಧ್ಯವೇ ಇಲ್ಲ."

"ಈ ಹಟದಿಂದಲೇ ಇದ್ದುಬಿದ್ದ ಆಸೆಗೆ ಯಾಕೆ ಎರವಾಗುತ್ತೀರಿ?"

"ನನಗೆ ಆಸೆ ಉಳಿದೇ ಇಲ್ಲ. ನಾನೇನಾದರೂ ಆಸೆಯನ್ನಿಟ್ಟುಕೊಳ್ಳಬಹುದಾದರೆ ನನ್ನ ನಾದಿನಿಯ ಕಾಲುಕಸವಾಗಿರಬೇಕು, ಭಾವ ಭಾಸ್ಕರರಾಯನಿಗೆ...."

"ಇದರಲ್ಲಿ ಭಾಸ್ಕರರಾಯನದೇನು ಸಂಬಂಧ?"

"ಅವನ ಮಾತೆತ್ತಬೇಡಿರಿ ನನ್ನೆದುರು! ನರಪಶು...."

"ಏನಂತೆ?"

"ಮೂರು ವರ್ಷ ತನ್ನ ಹೆಂಡತಿಯನ್ನು ಗೋಳಾಡಿಸಿ ಸಾಯಹೊಡೆದ. ಈಗ ನನ್ನ ಬೆನ್ನು ಕಾಯುತ್ತಿದ್ದಾನೆ. ನಾನು ತನಗೆ ತನ್ನ ತಮ್ಮನ ಹೆಂಡತಿಯೆಂಬುದನ್ನೂ ಮರೆಯುತ್ತಿದ್ದಾನೆ....ಒಂದು ವೇಳೆ ನಾನು ಕಾಲೇಜನ್ನು ಬಿಡಲೂ ಒಪ್ಪಬಹುದು. ಆದರೆ ಆ ಪಿಶಾಚಿ ಇರುವಲ್ಲಿ ನಾನಿದ್ದು ನನ್ನ ಮಾನ ಕಾಯ್ದುಕೊಳ್ಳುವುದು ಸಾಧ್ಯವಿಲ್ಲ!"

"ಆನಂದರಾಯರಿಗೆ ಈ ವಿಷಯ ಗೊತ್ತಿಲ್ಲವೆ?"

"ಅದು ಹೇಗೆ ಗೊತ್ತಾಗಬೇಕು? ಎಷ್ಟಾದರೂ ಅಣ್ಣ! ಮೇಲಾಗಿ

ಭಾವ ತಮ್ಮ ವಿರುದ್ಧ ಯಾರಾದರೂ ಮಾತಾಡಿಯಾರೆಂದು ನನ್ನ ವಿರುದ್ಧ ವಾಗಿಯೇ ಗುಲ್ಲನ್ನೆಬ್ಬಿಸಿದ್ದಾರೆ."

"ಇದೆಲ್ಲ ಆರಂಭವಾದದ್ದಾದರೂ ಹೇಗೆ?"

"ಮದುವೆಯಾಗಿ ಸುಮಾರು ಆರು ತಿಂಗಳೇನೋ ಸುಖವಾಗಿದ್ದೆವು. ಮುಂದೆ ನಿಧಾನವಾಗಿ ಭಾವ ತನ್ನ ಆಟ ಹೂಡಿದ. ನನ್ನ ಚೆಲುವೇ ನನಗೆ ಮುಳುವಾಗಿದೆ. ಎಲ್ಲಿಯಾದರೂ ಹೊರಟಾಗ ಹತ್ತು ಜನರು ನನ್ನ ಕಡೆಗೆ ನೋಡಿದರೆ ನಾನೇನು ಮಾಡಬಹುದು? ಯಾರಾದರೂ ಕಾಲೇಜಿನಲ್ಲಿಯ ಗುರುತಿನವರು ಸಿಕ್ಕರೆ ಅವರ ಕೂಡ ನಾನು ಮಾತಾಡಿದ ಕೂಡಲೆ ನಾನು ತಪ್ಪು ದಾರಿಯನ್ನೇ ಹಿಡಿದೆನೆಂದು ಯಾಕೆ ಸಂಶಯ ಪಡಬೇಕು? ಮನೆಯ ಮೂಲೆಯಲ್ಲಿ ಮುದ್ದೆಯಾಗಿ ಬಿದ್ದುಕೊಂಡಿರಬೇಕಾದ ಸ್ವಭಾವ ನನ್ನದಲ್ಲ. ನಾಲ್ಕು ಜನರಲ್ಲಿ ಬದುಕಬೇಕೆಂಬ ಆಸೆ ಇದೆ ನನಗೆ."

"ಅವರ ಸಂಶಯ ಸುಳ್ಳೆಂದು ತೋರಿಸುವ ಮಟ್ಟಿಗಾದರೂ ನೀವು ಸ್ವಲ್ಪ ತಡೆಯಬಾರದೇಕೆ?"

"ಅವರ ಸಂಶಯದಿಂದ ನನಗೆ ಸಂತಾಪವಾಗಿ ಇತ್ತೀಚೆಗೆ ಬೇಕೆಂದು ಅವರಿಗೆ ವಿರುದ್ಧವಾಗಿ ವರ್ತಿಸುತ್ತಿದ್ದೇನೆ."

"ಅದು ತಪ್ಪು!"

"ತಪ್ಪಿರಬಹುದು. ದುಷ್ಟತನಕ್ಕೆ ಪ್ರತಿಯಾಗಿ ದುಷ್ಟತನ!"

"ಭಾವ–ನಾದಿನಿಯರ ಮಾತು ಹೋಗಲಿ, ಆನಂದರಾಯರ ಮನಸ್ಸನ್ನಾದರೂ ತಿರುಗಿಸಿಕೊಳ್ಳಲು ಯತ್ನಮಾಡಬಹುದಲ್ಲ?"

"ಅವರು ಅವರ ಅಣ್ಣನ ತಮ್ಮ!"

"ಆದರೆ ಆನಂದರಾಯರ ಮನಸ್ಸನ್ನೊಪ್ಪಿಸಲಿಕ್ಕೆ ನೀವು ಯತ್ನ ಮಾಡದಿದ್ದರೆ ನನಗಂತೂ ಇದರಲ್ಲಿ ಬೇರೆ ದಾರಿಯೇ ಕಾಣುವುದಿಲ್ಲ."

"ಹೌದು. ನನಗೂ ಗೊತ್ತು. ಆದರೆ ಅದು ಹೇಗೆ ಸಾಧ್ಯ ಎಂಬುದೇ ಬಗೆಹರಿಯದಾಗಿದೆ. ಒಬ್ಬರು ಪೂರ್ವವೆಂದರೆ ಇನ್ನೊಬ್ಬರು ಪಶ್ಚಿಮ...."

"ಅಂಥ ಯಾವ ದೊಡ್ಡ ಮತಭೇದವಿರಬಹುದು ಗಂಡಹೆಂಡಿರಲ್ಲಿ? ಏನೋ ಆಗೀಗ ಮಾತಿಗೆ ಮಾತು ಬೆಳೆದಿರಬಹುದು. ನನ್ನ ಮಾತು ಕೇಳುವುದಾದರೆ ನೀವು ಸ್ವಲ್ಪ ತಗ್ಗಿ ನಡೆದರೆ ಎಲ್ಲವೂ ಸರಿಯಾದೀತು. ಎಷ್ಟಾದರೂ

ಗಂಡಹೆಂಡಿರ ಜಗಳ! ಅದೇನೋ ಶಾಸ್ತ್ರ ಹೇಳುತ್ತಾರಲ್ಲ...."

"ಶಾಸ್ತ್ರ, ಬರೀ ಶಾಸ್ತ್ರ!"

"ಶಾಸ್ತ್ರದ ಮಾತು ಹೋಗಲಿ. ಆನಂದರಾಯರ ಕೂಡ ನಾನು ಈ ವಿಚಾರ ಮಾತಾಡುತ್ತೇನೆ."

"ಎರಡನೆಯವರ ಮಾತಿನಲ್ಲಿ ಅವರಿಗೆ ಏನಾದರೂ ಆದರ-ವಿಶ್ವಾಸ ಗಳಿದ್ದರೆ ನೀವು ಮಾಡುವ ಪ್ರಯತ್ನಕ್ಕೆ ಏನಾದರೂ ಬೆಲೆ. ಅವೇ ಇಲ್ಲ ಮುಖ್ಯ, ಅವರಲ್ಲಿ."

"ಅವರೊಡನೆ ನೀವು ಎಲ್ಲ ಮಾತನ್ನೂ ಮುಗಿಸಿದಂತೆಯೆ ಮಾತಾಡು ತ್ತೀರಲ್ಲ?"

"ಮಾತಿನಿಂದ ಮುಗಿಸಿರದಿದ್ದರೂ ಮಾತು ಮುಗಿದಂತೆಯೆ!"

"ನಿಮ್ಮ ಮಾತು ಅರ್ಥವೇ ಆಗುವುದಿಲ್ಲ ನನಗೆ."

"ಮಾತಾಡಿ ಏನೂ ಅರ್ಥವಿಲ್ಲ. ನಿಜವಾಗಿಯೂ ಇಷ್ಟು ಜನ ಮಾತಾಡಿ ಕೊಳ್ಳುತ್ತಾರೆ ನಮ್ಮ ವಿಷಯ! ನೀವೇ ಹೇಳಿದಿರಿ, ನೀವೂ ಕೇಳಿದ್ದೀರೆಂದು. ನನಗೂ ಗೊತ್ತು. ಆದರೆ ಎಲ್ಲ ಮಾತಿನಲ್ಲಿಯೂ ದೋಷ ನನ್ನ ಪಾಲಿಗೆ. ಅಂಥ ಒಳ್ಳೆಯವರಿಗೆ ನನ್ನಂಥವಳು ಗಂಟುಬಿದ್ದು ಅವರ ಮನೆ ಮುರಿದೆನಂತೆ. ತಾವು, ತಮ್ಮವರು ಕೂಡಿಕೊಂಡು ಮೊದಲುಮಾಡಿದ ಅಪಪ್ರಚಾರ ಇಂದು ನಿಜವಾಗಿಯೆ ಇದ್ದ ಮಾತು ಎಂದು ನಂಬುವಂತಾಗಿದ್ದಾರೆ."

"ನಿಮ್ಮ ವಿರುದ್ಧ ಅವರು ಅಪಪ್ರಚಾರ ಮಾಡಿದರೆಂಬುದನ್ನು ಒಪ್ಪೋಣ. ಆದರೆ ನೀವು ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತನ್ನು ನಾನು ಕೇಳುತ್ತೇನೆ. ಅವರು ಈ ಅಪಪ್ರಚಾರವನ್ನು ಮಾಡಲು ನಿಷ್ಕಾರಣ ವಾಗಿಯೆ ಪ್ರಾರಂಭ ಮಾಡಿರಲಿಕ್ಕಿಲ್ಲವಲ್ಲ? ನಿಮ್ಮ ಮೇಲೆ ನಾನು ಯಾವ ದೋಷದ ಆರೋಪಣೆಯನ್ನೂ ಮಾಡುತ್ತಿಲ್ಲವೆಂದು ದಯಮಾಡಿ ತಿಳಿಯಿರಿ."

ಮೋಹಿನಿ ಸುಮ್ಮನಾದಳು. ಮುಖವನ್ನು ಇನ್ನೊಂದು ಕಡೆಗೆ ತಿರು ವಿದಳು. ಈ ಪ್ರಶ್ನೆಯನ್ನು ಇಷ್ಟು ಸ್ಪಷ್ಟವಾಗಿ ಕೇಳಬಾರದಿತ್ತು ಎನಿಸಿತು ವಸಂತನಿಗೆ. ಏನೋ ಮಾತಿನ ಭರದಲ್ಲಿ ಬಂದಿತು. ಆದರೆ ಮರುಕ್ಷಣ ದಲ್ಲಿಯೇ ಅಂದುಕೊಂಡ: 'ತಿಳಿಯಬೇಕಾದ ವಿಷಯವು ತಿಳಿಯದಿದ್ದರೆ

ಈ ವಿಷಯದಲ್ಲಿ ಬಾಯಿಹಾಕಿದ್ದೂ ವ್ಯರ್ಥ. ಬಾಯಿಹಾಕಿದ್ದಂತೂ ಆಗಿದೆ' ಎಂದು. ಮೋಹಿನಿಗೆ ಸಮಾಧಾನದ ದನಿಯಲ್ಲಿ ಹೇಳಿದ:

"ನಾನು ಹೇಳಿದೆನಲ್ಲ ಮೊದಲೇ. ನೀವು ತಪ್ಪು ತಿಳಿಯಬಾರದು. ನಿಮ್ಮ ಪ್ರಶ್ನೆಯನ್ನು ನನ್ನ ಮುಂದೆ ಬಿಚ್ಚಿ ಇಡಬೇಕೆಂದೇ ಈ ಮಾತನ್ನು ನನ್ನೆದುರು ನೀವು ಎತ್ತಿದ್ದೀರಿ ಎಂದು ನಾನು ತಿಳಿದಿದ್ದೇನೆ."

ವಸಂತನ ಈ ಪ್ರಶ್ನೆಗೆ ಉತ್ತರವೇನು ಎಂಬುದಕ್ಕೆ ಮೋಹಿನಿ ಸುಮ್ಮನಾಗಿರಲಿಲ್ಲ. ಹೃದಯದಲ್ಲಿ ಉತ್ತರ ಸಿದ್ಧವಾಗಿಯೆ ಇತ್ತು. ಆದರೆ ಅದನ್ನು ಹೇಳುವುದು ಹೇಗೆ? ಆನಂದರಾಯ ತನ್ನ ಬಗೆಯಲ್ಲಿ ಸಂಶಯಗೊಳ್ಳುವಂತೆ ಏನನ್ನು ಕೇಳಿದ್ದರೂ ಲಗ್ನವಾದನಂತರದ ಮೊತ್ತಮೊದಲನೆಯ ಏಕಾಂತ ವಾಸದಲ್ಲಿ ಆ ವಿಷಯವನ್ನು ಕುರಿತು ತನ್ನ ಗಂಡ ಕೇಳಿ ತನ್ನನ್ನು ಕೆರಳಿಸಿದ್ದ ನೆಂಬುದನ್ನು ಎಷ್ಟಾದರೂ ಪರಕೀಯನಾದ ವಸಂತನೆದುರು ಹೇಳುವುದು ಹೇಗೆ? ಎಂಬುದು ಮೋಹಿನಿಗೆ ಬಗೆಹರಿಯದಾಗಿತ್ತು. ಅವಳ ಕಣ್ಣೆದುರು ಆ ಮೊದಲ ರಾತ್ರಿಯ ಚಿತ್ರ ಸರಕ್ಕನೆ ಸುಳಿದುಹೋಯಿತು. ಗೃಹಪ್ರವೇಶದ ಕಾಲಕ್ಕೆಯೆ ಎಡವಿ ಹೊಸ್ತಿಲದಲ್ಲಿ ಬಿದ್ದಂತಾಗಿತ್ತು ಅವಳ ಮನಃಸ್ಥಿತಿ, ಆ ದಿವಸ. ಆನಂದರಾಯನ ಮನಸ್ಸನ್ನು ಒಲಿಸಿಕೊಳ್ಳುವುದೆ ವಿವೇಕಮಾರ್ಗ ವಾಗಿದ್ದರೆ ಆ ವಿವೇಕ ಆ ರಾತ್ರಿಯಲ್ಲಿಯೆ ಅವಳ ಸ್ವಭಾವದಲ್ಲಿ ಎದ್ದುನಿಂತು ತನ್ನ ಮಾರ್ಗವನ್ನು ತೋರಿಸಬೇಕಾಗಿತ್ತು. ಆದರೆ ಸಮಯೋಚಿತವಲ್ಲದ ಪತಿಯ ಆ ಪ್ರಶ್ನೆ ತನ್ನಲ್ಲಿಯ ಎಲ್ಲ ವಿವೇಕಕ್ಕೂ ವ್ಯವಹಾರಕ್ಕೂ ಸಂಚಕಾರ ಕೊಟ್ಟು ಸುಖದ ಆಸೆಗೆ ತಿಲಾಂಜಲಿಯನ್ನು ಕೊಟ್ಟಂತಿತ್ತು.

ಮೋಹಿನಿ ಮುಖ ತಗ್ಗಿಸಿಕೊಂಡು ಬಾಯ ಮೇಲೆ ತನ್ನ ಕಿರಿದಾದ ಕರವಸ್ತ್ರವನ್ನು ಹಿಡಿದು ದೀರ್ಘಾಲೋಚನೆಯಲ್ಲಿದ್ದಂತೆ ಇದ್ದಳು. ಆ ಪ್ರಶ್ನೆಗೆ ತಾನು ಆ ರಾತ್ರಿ ಸರಿಯಾಗಿ ಉತ್ತರ ಹೇಳದಿದ್ದುದರಿಂದಲೊ ಅಥವಾ ಆನಂದರಾಯನ ಶರೀರಗತವಾದ ಸ್ವಭಾವಕ್ಕೆ ಸರಿಯಾಗಿಯೊ ಅಂದಿನಿಂದ ಮುಂದಿನ ನಾಲ್ಕಾರು ತಿಂಗಳ ಮಟ್ಟಿಗೆ ಜನರ ತೋರಿಕೆಗಾದರೂ ಎಲ್ಲವೂ ಸುಖವಾಗಿಯೆ ನಡೆದಿದ್ದರೂ ಮೋಹಿನಿಗೆ ಮಾತ್ರ ಒಂದು ವಿಷಯ ಮನ ದಟ್ಟಾಗಿ ಹೋಗಿತ್ತು. ಆನಂದರಾಯ ತನ್ನ ಹತ್ತಿರ ಬಂದಾಗಲೆಲ್ಲ, ಬರು ವಾಗಲೆಲ್ಲ, ಅವನಿಗೆ ಬೇಕಾದುದು ತನ್ನ ಚೆಲುವಾದ ದೇಹ, ಇನ್ನೇನೂ ಅಲ್ಲ,

ಎಂಬ ಕಟುವಾದ ಸತ್ಯ. ಆನಂದರಾಯನಿಗೆ ತನ್ನ ದೇಹ ಇಂದಿಗೂ ಬೇಕಾಗಿತ್ತೆಂಬುದನ್ನು ತಿಳಿದವಳಾಗಿದ್ದಳು. ಈ ವಿಷಯವನ್ನು ನೆನೆದಾಗಲೆಲ್ಲ ಮೋಹಿನಿಯ ಹೃದಯ ಉದ್ವಿಗ್ನತೆಯ ಸಮರಭೂಮಿಯಾಗಿ ಪರಸ್ಪರ ವಿರುದ್ಧ ವಿಚಾರಗಳ ಕಣಜವಾಗುತ್ತಿತ್ತು.

'ಅವನು ನಿನ್ನ ಪತಿ. ನಿನ್ನ ದೇಹದ ಮೇಲೆ ಅವನಿಗೆ ಸ್ವಾಮಿತ್ವವಿದೆ!' ಎಂದು ಒಂದು ಮನಸ್ಸು ಹೇಳಿದಾಗ ಇನ್ನೊಂದು ಮನಸ್ಸು ಸಂತಾಪ ಸಂವೇದನೆಯಲ್ಲಿ ಸಿಡಿದೆದ್ದು ಉತ್ತರ ಹೇಳುತ್ತಿತ್ತು:

'ಇರಬಹುದು. ಈ ಮನಸ್ಸು ಗೆಲ್ಲದೆ ಈ ದೇಹವನ್ನು ಪಡೆಯಬೇಕೆನ್ನುವವ ನನ್ನ ಪತಿಯಲ್ಲ, ನನ್ನೊಡನೆ ವ್ಯಭಿಚಾರ ಮಾಡಬಯಸುವ ಪರಪುರುಷ!'

'ನಿನ್ನ ದೇಹ ಮಣಿದರೆ ಅವನ ಮನಸ್ಸೂ ಮಣಿದೀತು!'

'ಮೊದಲು ಈ ಮನಸ್ಸು ಮಣಿಯಬೇಕು!'

'ಈ ಹಟವೇಕೆ?'

'ಇದು ಹಟವಲ್ಲ, ನಿಸರ್ಗ ನಿಯಮ. ನಾವಿಬ್ಬರೂ ಮದುವೆಯಾಗಿದ್ದೇವೆ. ಆದರೆ ಮನಸ್ಸಿನ ಮದುವೆಯಾಗಬೇಕಾಗಿದೆ. ಕೇವಲ ದೇಹಗಳದ್ದಲ್ಲ!'

'ದೇಹವನ್ನು ಮನಸ್ಸು ಇಂದಿಲ್ಲ ನಾಳೆ ಅನುಸರಿಸಬಹುದು!'

'ನಾಳಿನ ಆಸೆಗಾಗಿ ಇಂದಿನ ವ್ಯಭಿಚಾರಕ್ಕೆ ನಾನು ಸಿದ್ಧಳಿಲ್ಲ!'

'ಇದು ವ್ಯಭಿಚಾರವಲ್ಲ!'

'ಹಾಗೆ ಹೇಳುವುದು ಮೂರ್ಖತನ! ಈ ಮೂರ್ಖತನವನ್ನು ಮುಚ್ಚಿಕೊಳ್ಳಲಿಕ್ಕೆಂದೇ ಮದುವೆಯ ಹೆಸರಿನ ಮುಸುಕು ಬೇಕಾಗುತ್ತದೆ ಸಮಾಜದಲ್ಲಿ!' ಹೀಗೆ ವಿಚಾರಗಳ ಸುಳಿಯಲ್ಲಿ ಸಿಕ್ಕು ತೊಳಲಾಡಿ ತನ್ನ ವರ್ತನೆಗೆ ಆತ್ಮಸಮರ್ಥನೆಯನ್ನು ನೂರಾರು ಬಾರಿ ತಂದುಕೊಂಡವಳು ಈಗಲಾದರೂ ಅದೇ ವಿಚಾರಚಕ್ರದಲ್ಲಿ ಸಿಲುಕಿದ್ದಳು. ಆದರೆ ಇದೆಲ್ಲವನ್ನೂ ವಸಂತನೆದುರು ಹೇಳುವುದು ಹೇಗೆ? ಅವಳ ಹೃದಯದಲ್ಲಿಯ ಭಾವನೆಗಳ ಮನೆತವೇ ಕೆಂಪು ಬಣ್ಣವಾಗಿ ಮೋಹಿನಿಯ ಮುಖವನ್ನು ಆವರಿಸಿತ್ತು.

ಅವಳು ಯಾವ ಮಾತನ್ನೂ ಆಡದಿದ್ದುದರಿಂದ ವಸಂತನಿಗೆ ತೀರ ವ್ಯಥೆಯಾಯಿತು. ತನ್ನ ಮಾತಿನಿಂದ ಅವಳು ವಿಪರೀತ ನೊಂದುಕೊಂಡಿರಬೇಕೆಂದು ಮತ್ತೊಮ್ಮೆ ಅವಳ ಕ್ಷಮೆ ಕೇಳಿಕೊಂಡ. ಆಗ ಮಾತ್ರ ಮೋಹಿನಿ

ಸಾವರಿಸಿಕೊಂಡು ಮುಖ ತಿರುವಿ ಹೇಳಿದಳು :

" ನೀವೇನೂ ನೊಂದುಕೊಳ್ಳುವ ಕಾರಣವಿಲ್ಲ. ನಿಜವಾಗಿಯೂ ನಾನೇ ನಿಮ್ಮ ಕ್ಷಮೆ ಕೇಳಿಕೊಳ್ಳಬೇಕು. ನಿಮಗೆ ವೃಥಾ ಮನಸ್ತಾಪ. ಈ ಎಲ್ಲ ವಿಷಯವನ್ನು ನಿಮ್ಮ ಮುಂದೆ ನಾನು ಆಡಬಾರದಿತ್ತೇನೊ. ಯಾರ ಮುಂದೆ ಹೇಳಿ ಏನು ಪ್ರಯೋಜನ ಎಂದೂ ಅನಿಸುತ್ತದೆ ಒಮ್ಮೊಮ್ಮೆ. ಆದರೂ ತಡೆಯ ಲಾಗಲಿಲ್ಲ, ಎಂದು ಹೇಳಿದೆ. ಮುಖ್ಯ, ದುರ್ದೈವಿ ನಾನು...."

ಎಂದು ತಡೆದಳು. ವಸಂತನಿಗೆ ಬಾಯಿ ಕಟ್ಟಿದಂತಾಗಿತ್ತು. ಅವಳೇ ಮುಂದುವರಿಸಿದಳು : " ನಿಮಗೆ ಕಲ್ಪನೆಯಾಗುವುದು ಸಾಧ್ಯವಿಲ್ಲ. ಯಾರ ಮುಂದೆಯಾದರೂ ನನ್ನ ದುಃಖ ಹೇಳಿಕೊಳ್ಳಲೂ ಸಾಧ್ಯವಿಲ್ಲದಾಗಿದೆ. ಕೇವಲ ನನ್ನವರೇ ಆಗಿರಬೇಕಾದವರು ನನಗೆ ದೂರವಾದಾಗ ಉಳಿದವರು ಯಾರಿದ್ದ ರೇನು, ಇಲ್ಲದಿದ್ದರೇನು ? ಇದ್ದುಬಿದ್ದ ಒಬ್ಬ ತಾಯಿಯ ಎದುರಾದರೂ ದುಃಖವನ್ನು ತೋಡಿಕೊಂಡೇನೆಂದರೆ ಅವಳ ಕಡೆಗೆ ಹೋಗಲಿಕ್ಕೂ ನನಗೆ ಪ್ರತಿಬಂಧ...."

" ಅದು ಯಾಕಂತೆ ? "

" ಯಾಕೆ ಎಂದು ಯಾರು ಕೇಳಬೇಕು ಅವರನ್ನು ? ತಾಯಿಯ ಕಡೆಗೆ ನಾನು ಹೋಗುವುದೇ ಆದರೆ ಅಲ್ಲಿಯೇ ಇದ್ದುಬಿಡಬೇಕಂತೆ. ಅವಳಿಗೊಂದು ಕಾಗದವನ್ನು ಕೂಡ ನಾನು ಬರೆಯಲಾಗದು. ಈಗ ಒಂದೂವರೆ ವರ್ಷ ವಾಯಿತು. ಅವಳ ಮುಖವಂತೂ ಇಲ್ಲವೇ ಇಲ್ಲ. ನನ್ನ ಸಮಾಚಾರವಾದರೂ ಅವಳಿಗೆ ತಿಳಿದಿದೆಯೊ ಇಲ್ಲವೋ ? ಇಂದು ನನ್ನವರೆಂದು ನನಗೆ ಯಾರೂ ಇಲ್ಲ...."

ಮೋಹಿನಿಯ ಕಣ್ಣೊಳಗಿನಿಂದ ನೀರು ಪಳಪಳನೆ ಉದುರಿತು. ಅವಳನ್ನು ಸಮಾಧಾನಪಡಿಸುವುದು ಹೇಗೆ ಎಂಬುದು ವಸಂತನಿಗೆ ತಿಳಿಯದೆ ಹೋಯಿತು. ಅರೆನಿಮಿಷ ಕೂಡ ಯೋಚಿಸದೆ, ಮೇಜಿನ ಅಂಚಿನೊಡನೆ ಆಟವಾಡುತ್ತಿದ್ದ ಮೋಹಿನಿಯ ಎಡಗೈಯ ಬೆರಳುಗಳ ಮೇಲೆ ತಟ್ಟನೆ ತನ್ನ ಕೈಯಿಟ್ಟು ವಸಂತ ಉಸಿರಿದ :

" ನೀವು ಯೋಚಿಸಬೇಡಿರಿ. ನನ್ನಿಂದ ಸಾಧ್ಯವಾದುದನ್ನೆಲ್ಲವನ್ನೂ ನಾನು ಮಾಡುತ್ತೇನೆ " ಎಂದಾಗ ಮೋಹಿನಿ ವಸಂತನ ಮುಖದೆಡೆಗೆ ಕಣ್ಣು ಹೊರಳಿಸಿ

ನೆಟ್ಟ ದೃಷ್ಟಿಯಿಂದ ನೋಡಿದಳು. ಕರುಣೆ ತುಂಬಿ ಸೂಸಿ ಹರಿಯುತ್ತಿದ್ದ ಆ ಕಣ್ಣುಗಳನ್ನು ನೋಡಿದಾಗ ವಸಂತನ ದೇಹಾದ್ಯಂತದಲ್ಲಿಯೂ ಅನುಕಂಪ ವಿದ್ಯುತ್‌ಪ್ರವಾಹವಾಗಿ ಹರಿದು 'ನಿಜವಾಗಿ ನನಗೆ ಸಾಧ್ಯವಿದ್ದುದನ್ನೆಲ್ಲವನ್ನೂ ಮಾಡಬೇಕು' ಎಂದು ಸಂಕಲ್ಪವಾಗಿ ನಿಂತಿತು. ತನ್ನ ಕೈಬೆರಳುಗಳನ್ನು ಮೋಹಿನಿ ಅಲ್ಲಿಂದ ಸರಿಸಿಕೊಳ್ಳದಿದ್ದುದನ್ನು ನೋಡಿ ಅರೆನಿಮಿಷ ವಿಚಿತ್ರ ಭಾವನೆಯೊಂದು ಮನಸ್ಸಿನಲ್ಲಿ ನುಸುಳಿಹೋದಾಗ ವಿವೇಕವೂ ಒಂದು ಎಚ್ಚರದ ಮಾತನ್ನು ಉಸಿರಿತು: 'ಈ ಎಲ್ಲ ಅನುತಾಪ ಸರಿಯಾದದ್ದು. ಆದರೆ ವಿಷಯ ಅಷ್ಟು ಸುಲಭವಾದದ್ದಲ್ಲ! ಎಚ್ಚರ!' ಎಂದು.

ಮೋಹಿನಿ ವಸಂತನಿಂದ ತನ್ನ ದೃಷ್ಟಿಯನ್ನು ತಿರುಗಿಸಲಿಲ್ಲ. ದೈನ್ಯದ ಮೂರ್ತಿಯಾದ ಆ ಮುಖವನ್ನು ನೋಡಿ ವಸಂತನ ಚಿತ್ತ ಚಲಿಸಿತು. ಯಾವುದೊ ಒಂದು ಹಳೆಯ ನೆನಹು ಹೃದಯವನ್ನು ಇರಿದು ಗಾಸಿಮಾಡಿತು. ಮೆತ್ತನೆ ಅವಳ ಕೈಯನ್ನು ಅದುಮಿ ತನ್ನ ಮುಖ ತಿರುವಿದ. ಧೈರ್ಯದಿಂದ ಹೇಳಿದ:

"ನಿಮ್ಮ ಪರಿಸ್ಥಿತಿ ಅರ್ಥವಾಗಿದೆ ನನಗೆ. ಮತ್ತೆ ಅದನ್ನೇ ಹೇಳಿ ಏನು ಪ್ರಯೋಜನ? ನಾನು ಆನಂದರಾಯರನ್ನು ನೋಡಿ ವಿಚಾರಿಸುತ್ತೇನೆ."

"ಅವರ ಕಡೆಗೆ ಹೋಗುತ್ತೀರಾ?"

"ಹುಂ. ಆದರೆ ಅವರು ಎಲ್ಲಿ ಸಿಗಬಹುದು?"

"ಅವರೆಲ್ಲಿಯೊ ದಾದರಿನಲ್ಲಿ ತಮ್ಮ ಯಾವನೊ ಮಿತ್ರನ ಕೋಣೆಯಲ್ಲಿ ಇರುತ್ತಾರಂತೆ."

"ಯಾರು, ನಿಮಗೆ ಗೊತ್ತಿಲ್ಲವೆ?"

"ಇಲ್ಲ!"

"ಹಾಗಾದರೆ...."

"ನೀವು ಅವರ ಆಫೀಸಿಗೆ ಹೋಗಬಹುದಲ್ಲ?"

"ಹುಂ. ಆಫೀಸಿಗೆ ಹೋಗಬಹುದು. ಆದರೆ...."

"ಆದರೆ ಏನು?"

"ಅವರೆದುರು ಈ ವಿಷಯ ಎತ್ತುವುದು ಹೇಗೆ ಎಂದು ಯೋಚಿಸುತ್ತಿದ್ದೆ...."

“ ಹೌದು, ಅಷ್ಟೇನೂ ಸುಲಭವಲ್ಲ....”

“ ಹೇಗೂ ಪ್ರಾರಂಭಮಾಡಬಹುದು, ಅಣ್ಣಿರಿ. ಆದರೆ ನಾನೂ ನೀವೂ ಇಲ್ಲಿ ಕೂಡಿ ಮಾತಾಡಿದ ವಿಷಯ ಅವರಿಗೆ ತಿಳಿದರೆ ಅವರೇನೆಂದುಕೊಳ್ಳುವರೊ ಯಾರು ಬಲ್ಲರು!”

“ ಅದನ್ನೇತಕ್ಕೆ ಹೇಳಬೇಕು ? ”

“ ಇನ್ನಾರಾದರೂ ನೋಡಿ ಅವರಿಗೆ ಹೇಳಿದರೆ ? ”

“ ಯಾರು ನೋಡಿದರೇನಂತೆ ? ”

“ ಓ! ಮತ್ತೇನೂ ಇಲ್ಲ; ಬೆಂಕಿಯಲ್ಲಿ ಎಣ್ಣೆ, ಅಷ್ಟೆ ! ”

“ ಆದರೆ ಅಂಥದೇನು ನಾವು ಇಲ್ಲಿ ಮಾಡಿದ್ದು ? ”

“ ಏನಿಲ್ಲದಿದ್ದರೂ ಜನರಿಗೊಂದು ವಿಷಯ, ಆಡಿಕೊಳ್ಳಲಿಕ್ಕೆ ! ”

“ ದೇವರಿಗೆ ಗೊತ್ತು ! ”

“ ಸಮಾಜದಲ್ಲಿ ದೇವರಿಲ್ಲ, ಮನುಷ್ಯರಿದ್ದಾರೆ. ಮನುಷ್ಯರಿಗೆ ಇಷ್ಟು ಎಳೆ ಸಿಕ್ಕರೆ ಸಾಕು ! ”

“ ಆಗಬಹುದು. ಅದಕ್ಕೆ ನಾನೇನು ಮಾಡಬಹುದು ? ತೋಯಿಸಿ ಕೊಂಡೇ ಇದ್ದೇನೆ. ಇನ್ನೇಕೆ ಮಳೆಯ ಬೆದರಿಕೆ ? ”

“ ತೋಯಿಸಿಕೊಂಡರೂ ತೊಯ್ದ ಬಟ್ಟೆಯಲ್ಲಿಯೇ ಉಳಿಯುವೆ ಅನ್ನ ಬಾರದು, ನೀವು. ಬಟ್ಟೆಯನ್ನು ಬದಲಾಯಿಸಬೇಕು. ಅದಕ್ಕಾದರೂ ಮಳೆಗೆ ಹೆದರಬೇಕು ! ”

“ ಆಗಲಿ, ನೋಡೋಣ.”

“ ಹಾಗಾದರೆ ಹೊರಡೋಣವೆ ? ”

“ ಹುಂ....”

“ ನಾನಾಗಿಯೆ ಆನಂದರಾಯರ ಆಫೀಸಿಗೆ ಹೋಗುವುದಿಲ್ಲ. ದಾದರಿ ನಲ್ಲಿ ನೋಡುವೆ, ಒಂದೆರಡು ದಿನ. ಎಲ್ಲಿಯಾದರೂ ಸಿಕ್ಕಬಹುದು. ಇಲ್ಲ ವಾದರೆ ಹಾಗೂ ಹೀಗೂ ಮಾಡಿ ಎರಡು ಮೂರು ದಿವಸಗಳಲ್ಲಿ ಅವರನ್ನು ಕಾಣುವೆ.”

“ ಹಾಗಾದರೆ ಏನು ನಡೆಯಿತೆಂಬುದು ನನಗೆ ತಿಳಿಯುವುದು ಹೇಗೆ ? ”

“ ಅದಕ್ಕೇನಂತೆ? ಹೇಗೂ ದಿನವೂ ಒಂಬತ್ತರ ರೈಲಿಗೆ ಬಂದೇ

ಬರುತ್ತೀರಿ. ನನಗೆ ಅವರು ಸಿಕ್ಕನಂತರ ನಾನಾಗಿಯೇ ನಿಮಗೆ ತಿಳಿಸುವೆ."

"ಹಾಗೆ ಬೇಡ. ಬೋರಿವಲಿಯ ನಿಲ್ದಾಣದಲ್ಲಿ ನನ್ನನ್ನು ಗುರುತಿಸುವವರು ಬಹಳ ಜನ. ಇಂದೇನೊ ಧೈರ್ಯಮಾಡಿ ನಿಮ್ಮನ್ನು ಮಾತಾಡಿಸಿದೆ; ಆದರೆ ಅಲ್ಲಿ ಯಾರೊಡನೆಯೂ ನಾನು ಮಾತಾಡಿದರೆ ಜನರಿಗೊಂದು ಹೊಸದಾದ ಕಥೆ."

"ಹಾಗಾದರೆ...."

"ನೀವು ಗುರುವಾರ ಸಾಯಂಕಾಲ ದಾದರಿಗೆ ಬರಬಹುದೆ?"

"ಗುರುವಾರ? ಗುರುವಾರ ಆಗಲಿಕ್ಕಿಲ್ಲ. ಏನೋ ಕೆಲಸ...."

"ಬುಧವಾರ?"

"ಆಗಬಹುದು."

"ಎಲ್ಲಿ ಬರುವಿರಿ?"

"ನೀವೇ ಹೇಳಿರಿ."

"ಒಂದನೇ ಪ್ಲಾಟ್‌ಫಾರ್ಮಿನ ಮೇಲೆಯೆ ಕಾಯುವೆ—ಸಾಯಂಕಾಲ ಐದೂವರೆ."

"ಹುಂ...."

"ಖಂಡಿತವಾಗಿಯೂ ಬರುವಿರಲ್ಲವೆ?"

"ಬರುವೆ. ಆದರೆ ಅಷ್ಟರಲ್ಲಿ ನನಗೆ ಆನಂದರಾಯ ಸಿಕ್ಕದಿದ್ದರೆ?"

"ಸಿಗಬಹುದು."

"ಸಿಗಲಿಕ್ಕೂ ಇಲ್ಲ!" ಎಂದು ವಸಂತ ನಕ್ಕ.

"ಸಿಗದಿದ್ದರೂ ಇಲ್ಲ. ನೀವಂತೂ ಬರಬೇಕು!" ಎಂದು ಮೋಹಿನಿ ನಕ್ಕಾಗ ವಸಂತನಿಗೆ ಯೋಚನೆಯಾಯಿತು. ಆದರೆ ಅರೆದೆರೆದ ಅವಳ ಆ ಬಾಯಿ, ಅವಳ ತುಟಿಗಳ ಮೇಲೆ ಕುಣಿಯುತ್ತಿದ್ದ ನಸುನಗು ವಸಂತನನ್ನು ಮೈಮರೆಸಿದವು.

"ಆಲ್ ರಾಯ್ಟ್, ಬರುವೆ. ಆಯಿತೆ?"

ಮೋಹಿನಿ ನಕ್ಕು ತನ್ನ ಸಮಾಧಾನವನ್ನು ತೋರ್ಪಡಿಸಿದಳು. ವಸಂತನ ಆ ಕೊನೆಯ ಒಂದು ಮಾತಿನಲ್ಲಿ ಯಾವ ಮೋಡಿಯಿತ್ತೊ? ಒಂದು ಕ್ಷಣದಲ್ಲಿ ಮೋಹಿನಿಯ ಮುಖವನ್ನಾವರಿಸಿದ ದುಃಖ-ದೈನ್ಯಗಳು ಎಲ್ಲಿಯೋ

ಮಾಯವಾಗಿ ಅಲ್ಲಿ ಒಂದು ಅವರ್ಣನೀಯವಾದ ಪ್ರಸನ್ನತೆ ಕುಣಿಯುತ್ತಿತ್ತು. 'ನನಗೆ ಇಂದಿಗೆ ಇನ್ನೇನೂ ಬೇಡ! ಒಂದು ಹೃದಯದ ಸಹಾನುಭೂತಿಯಾದರೂ ಸಿಕ್ಕಿತಲ್ಲ!' ಎನ್ನುವಂತಿತ್ತು ಅವಳ ಮುಖ. ಇಬ್ಬರೂ ಅಂಗಡಿಯಿಂದ ಹೊರಬಿದ್ದರು. ಎದುರಿಗೆ ಸಾಗರ ಪ್ರಶಾಂತವಾಗಿ, ಸೊಗಸಿನ ಸಾಮ್ರಾಜ್ಯವಾಗಿ ಹಬ್ಬಿತ್ತು. ವಸಂತನ ಮನಸ್ಸಿನಲ್ಲಿ ವಿಚಾರ ಸುಳಿದುಹೋಯಿತು. 'ಸಾಗರ ಇಷ್ಟು ಪ್ರಶಾಂತ ಸೌಂದರ್ಯದಿಂದ ಹಬ್ಬಿದೆ. ಆದರೆ ಅದರ ಪ್ರಶಾಂತತೆಯ ಹಿಂದೆ ಯಾವ ಭೀಕರ ಕೋಲಾಹಲವಿರಬಹುದೊ? ಅದರ ಬುಡವನ್ನು ಹುಡುಕಿ ನೋಡಿದವರಾರು? ಮೋಹಿನಿಯ ಮುಖವಾದರೂ ಅಷ್ಟೇ ಅಲ್ಲವೆ?' ಎಂದು ಅವಳ ಮುಖವನ್ನು ನೋಡಿ ನಸುನಕ್ಕ. ಮೋಹಿನಿಯೆಂದಳು:

"ಏನು?"

"ಏನೂ ಇಲ್ಲ!"

"ಯಾಕೆ, ಹೇಳಕೂಡದೆ?"

"ಹೇಳಬಹುದು!"

"ಹಾಗಾದರೆ ಹೇಳಿರಲ್ಲ."

"ಸಮುದ್ರ ಎಷ್ಟು ಸೊಗಸಾಗಿ ಕಾಣುತ್ತಿದೆಯಲ್ಲವೆ?"

"ಮಾತು ತಿರುಗಿಸುತ್ತಿದ್ದೀರಿ. ನನಗೆ ಅಷ್ಟೂ ಗೊತ್ತಾಗುವುದಿಲ್ಲವೆ?"

"ಇಲ್ಲ, ಅದಕ್ಕಾಗಿಯೆ ನಕ್ಕೆ!"

"ಯಾತಕ್ಕಾಗಿ?"

"ಏನೊ—ಒಂದು ವಿಚಾರ!"

"ಏನದು?"

"ಸೊಗಸಿದ್ದಲ್ಲಿ ಸಂಕಟವೂ ಅನಿವಾರ್ಯವೇನೊ ಎಂದು!"

ಮೋಹಿನಿ ಸುಮ್ಮನಾದಳು. ಒಂದು ತರದ ಅಭಿಮಾನದ ತೆರೆ ಅವಳ ಮುಖದ ಮೇಲೆ ಹಾಯ್ದುಹೋಯಿತು. ಆದರೆ ಅದರ ಹಿಂದಿನಿಂದಲೆ ಒಂದು ಉದ್ವಿಗ್ನತೆ ತನ್ನ ತೆರೆಯನ್ನು ದಾಟಿಸಿತು.

"ಇರಬಹುದು" ಎಂದಳು ಮೋಹಿನಿ.

"ಆದರೆ ಹಾಗೆ ಇರಬಾರದು. ಅಲ್ಲವೆ?"

"ಅದು ನಮ್ಮ ನಿಮ್ಮ ಇಚ್ಛೆ ಮಾತ್ರ!"

"ಹೋಗಲಿ ಬಿಡಿರಿ. ಯೋಚಿಸಿದಷ್ಟೂ ದುಃಖ, ಮರೆತಷ್ಟೂ ಸುಖ!"

ಎಂದು ವಸಂತ ಮಾತು ಮುಗಿಸಬೇಕೆಂದಿದ್ದರೂ ಮತ್ತೆ ಆ ಹಳೆಯ ನೆನಹು ಅವನ ಮನಸ್ಸನ್ನು ಕದಡಿಸಿ ಒಂದರೆಕ್ಷಣ ವಸಂತನನ್ನು ದುಃಖಕ್ಕೀಡು ಮಾಡಿತು. ಅದನ್ನು ಮರೆಯಲೆಂದೇ ವಸಂತ ಕೇಳಿದ:

"ನಾವಿನ್ನು ಬೇರೆ ಬೇರೆಯಾಗಿಯೆ ಹೋಗಬೇಕು. ಸುಮ್ಮನೆ ಜನ ರೆದುರು ಯಾಕೆ? ನೀವು ಚರ್ಚ್‌ಗೇಟಿನಿಂದ ಹೋಗುವಿರಲ್ಲವೆ? ನಾನಿನ್ನು ಈಚೆಗೆ ಸುತ್ತಾಡಿ ಸಾವಕಾಶವಾಗಿ ಹೋಗುತ್ತೇನೆ."

ಮೋಹಿನಿ ಮೌನದಿಂದಲೆ ಸಮ್ಮತಿಯನ್ನು ಸೂಚಿಸಿದಳು. ಆದರೂ ಯಾವುದೊ ಒಂದು ಶಕ್ತಿ ಅವಳನ್ನಲ್ಲಿಯೆ ಹಿಡಿದು ನಿಲ್ಲಿಸಿದಂತ್ತಿತ್ತು. ಕೊನೆಗೆ,

"ಹಾಗಾದರೆ ನಾನು ಹೊರಡಲಾ?" ಎಂದಳು.

"ಹುಂ...."

"ಬುಧವಾರ ಸಾಯಂಕಾಲ! ಆಂ?" ಎಂದು ಕತ್ತನ್ನು ಕೊಂಕಿಸಿ ಕೈ ಮುಂದಕ್ಕೆ ಚಾಚಿದಳು. ವಸಂತ ಅರ್ಧ ಆತುರದಿಂದ, ಅರ್ಧ ಅನುಮಾನ ದಿಂದ ಅವಳ ಕೈ ಕುಲುಕಿದ. ಆದರೆ ಕೈ ಕುಲುಕಿದನಂತರ ಅನುಮಾನ ಮಾಯವಾಯಿತು. 'ನಿಜವಾಗಿಯೂ ಬರುವೆ' ಎಂದು ಕಣ್ಣ ಸನ್ನೆಯಿಂದಲೆ ತಿಳಿಸಿದ.

ಅಂದು ಶನಿವಾರವಾದ್ದರಿಂದ ವಸಂತ ಬೋರಿವಲಿಗೆ ಸಾಯಂಕಾಲ ತಿರುಗಿ ಹೋಗಬೇಕಾಗಿರಲಿಲ್ಲ. ಸಾಮಾನ್ಯವಾಗಿ ಪ್ರತಿ ಶನಿವಾರ ರಾತ್ರಿ ಯನ್ನು ಅವನು ದಾದರಿನಲ್ಲಿಯೆ ಯಾರೊಬ್ಬ ಮಿತ್ರನ ಮನೆಯಲ್ಲಿಯೆ ಕಳೆ ಯುತ್ತಿದ್ದ. ದಾದರಿಗೆ ಹೋಗುವುದೆಂದಮೇಲೆ ಇಷ್ಟು ಬೇಗವಾದರೂ ಹೋಗಿ ಮಾಡುವುದೇನೆಂದು ರಿಕ್ಲೆಮೇಶನ್ ಕಟ್ಟೆಯ ಗುಂಟ ಹೆಜ್ಜೆಹಾಕ ಹತ್ತಿದ, ನಿಧಾನವಾಗಿ ಚರ್ನಿರೋಡಿನಲ್ಲಿ ರೈಲು ಹತ್ತಿದರಾಯಿತೆಂದು. ಕಾಲುಗಳು ಹೆಜ್ಜೆಹಾಕುತ್ತಿದ್ದುದೇನೊ ನಿಜ. ಆದರೆ ಮನಸ್ಸು ಮಾತ್ರ ಎಲ್ಲೆಲ್ಲಿಯೊ ಅಲೆದಾಡುತ್ತಿತ್ತು. ತನ್ನನ್ನು ಬಿಟ್ಟು ಚರ್ಚ್‌ಗೇಟಿನ ಕಡೆಗೆ ನಡೆದಿದ್ದ ಮೋಹಿನಿಯ ಚಿತ್ರ ಕಣ್ಣೆದುರು ಹಾಯ್ದುಹೋಗುತ್ತಿತ್ತು. ವಿಚಾರಮಾಡಿದಂತೆ ಯಾವುದರ ಅರ್ಥವೇ ಆಗದಂತೆನಿಸುತ್ತಿತ್ತು. ಎಲ್ಲ ವಿಚಾರಗಳನ್ನು ಮೀರಿಸಿ

ಮೆಟ್ಟಿ ನಿಲ್ಲುತ್ತಿತ್ತು, ಮೋಹಿನಿಯ ಆ ಮೋಹನಾಕೃತಿ. 'ಇದು ತಪ್ಪು; ನೀನು ಅವಳ ಜತೆಯಲ್ಲಿ ಇಷ್ಟು ಮಾತನಾಡಬಾರದಾಗಿತ್ತು. ಯಾರ ದುಃಖಕ್ಕೆ ಯಾರು ಹೊಣೆ, ಯಾವ ಪರಿಹಾರ?' ಎಂದು ಒಂದು ಮನಸ್ಸು ಕೇಳಿದಾಗ ಇನ್ನೊಂದು ಮನಸ್ಸು ಹೇಳುತ್ತಿತ್ತು: 'ಯಾರ ದುಃಖಕ್ಕೆ ಯಾರು ಹೊಣೆ ಎಂದು ಕೇಳುವವರು ಹೆಚ್ಚಾದ್ದರಿಂದಲೇ ಇಷ್ಟು ದುಃಖವಲ್ಲವೆ ಇಂದು ಪ್ರಪಂಚದಲ್ಲಿ?' ಎಂದು. ಆದರೆ ಒಂದು ಪ್ರಶ್ನೆಗೆ ಮಾತ್ರ ವಸಂತನಿಗೆ ಎಷ್ಟು ಹುಡುಕಿದರೂ ಉತ್ತರ ಸಿಗಲಿಲ್ಲ. 'ಮೋಹಿನಿ ತನ್ನ ಹತ್ತಿರ ಬಂದು ತಾನಾಗಿಯೆ ಯಾಕೆ ಈ ಇತಿಹಾಸವನ್ನು ಬಿಚ್ಚಿರಬಹುದು? ತನ್ನಿಂದ ಸಹಾನುಭೂತಿ ಸಿಕ್ಕೇ ಸಿಗಬಹುದೆಂಬ ಭರವಸೆಯನ್ನು ಮೋಹಿನಿ ಹೇಗೆ ಕಂಡುಹಿಡಿದಿರಬಹುದು?' ಎಂದು. ತಟ್ಟನೆ ಇನ್ನೊಂದು ವಿಚಾರವೂ ಬಂದುಹೋಯಿತು. 'ಯಾರು ಬಲ್ಲರು? ಇವಳು ನಿಜವಾಗಿಯೂ ಒಬ್ಬ ಮೋಹಿನಿಯೇ ಇದ್ದರೆ? ಜನರ ಪಿಸುಮಾತು ನಿಜವೇ ಇದ್ದರೆ?' ಆದರೆ ಮರುಕ್ಷಣವೇ ದೈನ್ಯವನ್ನು ಸೂಸುವ ಅವಳ ಕಣ್ಣುಗಳು 'ಅದು ಸುಳ್ಳು. ಅದು ಸುಳ್ಳು!' ಎಂದು ಸಾರಿದಂತಾಯಿತು.

ವಸಂತ ಹೆಜ್ಜೆಹಾಕುತ್ತಲೆ ಇದ್ದ. ಸುತ್ತಲಿನವರ ಪರಿವೆ ಮಾತ್ರ ಅವನಿಗಿರಲಿಲ್ಲ. ಬಲ ಹೆಜ್ಜೆಯೊಡನೆ ಬುದ್ಧಿ, ಎಡ ಹೆಜ್ಜೆಯೊಡನೆ ಹೃದಯ—ಹೆಜ್ಜೆ ಹೆಜ್ಜೆಗೂ ತಮ್ಮ ಸೆಣಸಾಟವನ್ನು ನಡಸಿದ್ದವು. ಬುದ್ಧಿ ಕಠೋರವಾಗಿ ಪ್ರಶ್ನೆ ಕೇಳುತ್ತಿತ್ತು. ಹೃದಯ ನಯವಾಗಿ, ಸಾವಧಾನವಾಗಿ ಉತ್ತರ ಹೇಳುತ್ತಿತ್ತು.

'ಅವಳು ಎಷ್ಟಾದರೂ ಪರಸ್ತ್ರೀ; ಅವಳ ಗೊಡವೆ ನಿನಗೇಕೆ?'

'ಅವಳು ಪರಸ್ತ್ರೀಯಾಗಿರಬಹುದು, ಆದರೆ ಅವಳು ಕಷ್ಟದಲ್ಲಿದ್ದಾಳೆ; ಅವಳಿಗೆ ಬೇಕಾದ ಸಹಾನುಭೂತಿಯನ್ನು ತೋರಿಸುವುದು ನನ್ನ ಕರ್ತವ್ಯ!'

'ಆ ಕರ್ತವ್ಯದ ಹೊಣೆ ನಿನ್ನದಲ್ಲ. ಸಮಾಜದ ಒಂದು ನಿಯಮಕ್ಕೆ ಸರಿಯಾಗಿ ಆ ಕರ್ತವ್ಯ ಇನ್ನೊಬ್ಬನದಾಗಿದೆ!'

'ಆ ಇನ್ನೊಬ್ಬ ಅದನ್ನು ನಿರಾಕರಿಸುತ್ತಿದ್ದಾನೆ!'

'ಅದು ಒಂದು ಪಕ್ಷದ ಮಾತು!'

'ಇರಬಹುದು.'

'ಹಾಗಾದರೆ ನಿನ್ನ ಸಹಾನುಭೂತಿ ಸ್ವಾರ್ಥಪರವಿಲ್ಲವೆಂದು ಹೇಗೆ ಹೇಳಬಹುದು?'

' ಸ್ವಾರ್ಥಪರವಿಲ್ಲವೆಂದು ದೇವರ ಸಾಕ್ಷಿಯಾಗಿ ಹೇಳಬಲ್ಲೆ ! '

' ದೇವರ ಸಾಕ್ಷಿಯಿಂದ ಸಾಮಾಜಿಕನಿಗೆ ತೃಪ್ತಿಯಿಲ್ಲ.'

' ಅದರಿಂದ ತೃಪ್ತಿಯಿಲ್ಲದಿದ್ದರೆ ಅದರಿಂದ ಅವನಿಗೇ ಕೇಡು.'

' ತತ್ತ್ವದ ಮಾತಿನಲ್ಲಿ ನೀನು ನಿನ್ನ ಸ್ವಾರ್ಥವನ್ನು ಮರೆಮಾಚು ತ್ತಿಲ್ಲವೆ ? '

' ಏನು ನನ್ನ ಸ್ವಾರ್ಥ ? '

' ಮೋಹಿನಿ ಕುರೂಪಿಯಾಗಿದ್ದರೆ ನೀನು ಅವಳ ಜೊತೆಯಲ್ಲಿ ಇಷ್ಟು ಸಮರಸವಾಗಿ ಮಾತಾಡಿ ಸಹಾನುಭೂತಿಯನ್ನು ತೋರಿಸುತ್ತಿದ್ದೆಯಾ ? '

' ಇಲ್ಲವೆಂದು ಹೇಳಲಾರೆ ! ಇಷ್ಟರಮಟ್ಟಿಗೆ ಮುಂದುವರಿಯುತ್ತಿದ್ದೆನೊ ಇಲ್ಲವೊ ಎಂಬುದನ್ನೂ ಹೇಳಲಾರೆ.'

' ನಾನು ಆಪಾದಿಸುತ್ತಿದ್ದ ಸ್ವಾರ್ಥವೆಂದರೆ ಅದೇ ! '

ಹೃದಯ ಒಂದು ಕ್ಷಣ ಸೋಲನ್ನು ಒಪ್ಪಬೇಕಾಯಿತು. ಆದರೆ ತಾನು ಮಾಡಿದ್ದು ತಪ್ಪಲ್ಲವೆಂದು ಆತ್ಮಸಮರ್ಥನೆಗಾಗಿ ಹಾತೊರೆಯುತ್ತಿದ್ದ ವಸಂತನ ಹೃದಯ ಒಂದು ಕ್ಷಣ ಗೊಂದಲದಲ್ಲಿ ಸಿಲುಕಿದ್ದರೂ ಮರುಕ್ಷಣ ತಿರುಗಿ ಪ್ರಶ್ನೆ ಕೇಳುವಂತಾಯಿತು :

' ಹಾಗಾದರೆ ಅವಳ ಮಾತಿಗೆ ನಾನು ಕಿವಿಗೊಡದೆ, ಅವಳ ಪಾಡಿಗೆ ಅವಳನ್ನು ಬಿಟ್ಟಿದ್ದರೆ ಮಾನವನ ದೃಷ್ಟಿಯಿಂದ ನಾನು ಕರ್ತವ್ಯಚ್ಯುತನಾಗು ತ್ತಿರಲಿಲ್ಲವೆ ? ' ಒಳಗಿನಿಂದ ನಿರ್ದಯವಾಗಿ ಉತ್ತರ ಬಂದಿತು :

' ಆ ಕರ್ತವ್ಯ ನಿನ್ನದಲ್ಲ. ಅದನ್ನು ಮಾಡದಿದ್ದಲ್ಲಿ ನಿನಗೆ ಯಾವ ದೋಷವೂ ಇಲ್ಲ ! '

' ನಾನು ಸಹಾನುಭೂತಿ ತೋರಿದರೆ ಅದರಲ್ಲಿ ದೋಷವೇನು ? '

' ನಿನ್ನ ಸಹಾನುಭೂತಿ ಅವಳ ಸ್ವೈರ ವೃತ್ತಿಗೆ ಉತ್ತೇಜನ ! '

' ಅವಳದು ಸ್ವೈರ ವೃತ್ತಿಯೇ ? '

' ನಿನ್ನ–ಅವಳ ದೃಷ್ಟಿಯಿಂದ ಇರಲಿಕ್ಕಿಲ್ಲ ; ಸಮಾಜದ ದೃಷ್ಟಿಯಿಂದ ಹೌದು ! '

' ಸುಖವನ್ನು ಹಾಳುಮಾಡುವ ಸಮಾಜವನ್ನು ಸುಟ್ಟುಬಿಡಬೇಕು ! '

' ಸಮಾಜಬಂಧ ಒಬ್ಬರ ಸುಖಕ್ಕಾಗಿ ಇಲ್ಲ. ಹತ್ತು ಜನರ ಸುಖಕ್ಕಾಗಿ

ಇದೆ! '

ಮತ್ತೆ ಹೃದಯಕ್ಕೆ ಸೋಲು! ಸೋಲನ್ನು ಒಪ್ಪಲಾರದಕ್ಕೆ ಮತ್ತೊಂದು ದಾರಿಯನ್ನು ಹಿಡಿಯಲೆಳಸಿ ಹೇಳಿತು :

' ಮೋಹಿನಿ ಸುಂದರಿ. ನಾನು ಸೌಂದರ್ಯಭಕ್ತ. ಇಂಥ ಚೆಲುವು ಸುಖದಲ್ಲಿಯೆ ಇರಬೇಕೆಂಬುದು ನನ್ನ ಆಸೆ! '

' ನೀನು ಅವಳಿಗೆ ಸುಖದ ದಾರಿಯನ್ನೆ ತೋರಿಸುತ್ತಿದ್ದೀಯೆಂಬ ಆತ್ಮ ವಿಶ್ವಾಸವಿದೆಯೆ ನಿನ್ನಲ್ಲಿ? '

' ಖಂಡಿತವಾಗಿಯೂ ಇದೆ! '

' ನನಗೆ ವಿಶ್ವಾಸವಿಲ್ಲ ' ಎಂದು ಬುದ್ಧಿ ಹಿಂದೆ ಸರಿಯಿತು.

ಹೃದಯಕ್ಕೆ ಆತ್ಮಸಮರ್ಥನೆ ಸಿಕ್ಕಂತಾಯಿತು. ಆದರೆ ಆ ಆತ್ಮಸಮರ್ಥನೆಯಲ್ಲಿ ಗೆಲುವಿರಲಿಲ್ಲ.

ವಸಂತ ಚರ್ನಿರೋಡನ್ನು ಸಮೀಪಿಸಿದ್ದ. ವಿಚಾರಗಳ ಗೊಂದಲದಲ್ಲಿ ವೇಳೆ ತಿಳಿಯದೆ ಸರಿದಿತ್ತು. ಸಂಜೆಯ ಹೊಂಬೆಳಕು ತೆರೆಗಳ ಮೇಲೆ ಕುಣಿದು, ತೋಟದಲ್ಲಿಯ ಗಿಡಗಳಲ್ಲಿ ಅಡಗುತ್ತಿತ್ತು. ಎಲ್ಲಿಯಾದರೂ ಒಂದು ಹತ್ತು ನಿಮಿಷ ಕುಳಿತುಕೊಳ್ಳೋಣವೆಂದು ವಸಂತ ತೋಟದ ಕಡೆಗೆ ತಿರುಗಿದ. ಅವನಿಗೆ ಏಕಾಂತ ಬೇಕಾಗಿತ್ತು. ಕಾಲುಗಳು ದೇಹವನ್ನು ತೋಟದ ಕಡೆಗೆ ಎಳೆದೊಯ್ಯುತ್ತಿದ್ದರೂ ಮನಸ್ಸು ಮೋಹಿನಿಯನ್ನು ಬೆನ್ನಟ್ಟಿತ್ತು. ಈಗ ಆಕೆ ಎಲ್ಲಿರಬಹುದು? ಏನನ್ನು ಯೋಚಿಸುತ್ತಿರಬಹುದು? ತನ್ನ ಮಾತಿನಿಂದ ಅವಳಿಗೆ ಸಮಾಧಾನವಾಗಿರಬಹುದೆ? ಎಂಬ ಹಲವಾರು ಪ್ರಶ್ನೆಗಳ ಕುದುರೆಗಳನ್ನೇರಿ ವಸಂತನ ಹೃದಯ ಕಲ್ಪನೆಯ ಸಾಮ್ರಾಜ್ಯದಲ್ಲಿ ಮುನ್ನುಗ್ಗುತ್ತಿತ್ತು.

ಕಲ್ಪನೆಗೆ ಕಡಿವಾಣವಿಲ್ಲ. ಬಾಳ ಗಳಿಗೆಗಳನ್ನು ರಸನಿಮಿಷಗಳನ್ನಾಗಿ, ವಿಷನಿಮಿಷಗಳನ್ನಾಗಿ ಮಾಡಬಲ್ಲ ಮನುಷ್ಯನಲ್ಲಿಯ ಮಾಯಾಶಕ್ತಿ ಅದು! ಮೋಹಿನಿಯನ್ನು ನೆನೆದಾಗಲೆಲ್ಲ ವಸಂತನ ಹೃದಯ ಗಾಸಿಯಾಗಿ ಹೇಳಲಾರದ ಸಂಕಟಪಡುತ್ತಿತ್ತು. ಹಾಗೆ ನೋಡಿದರೆ ಅವಳು ಸುಖವಾಗಿದ್ದರೇನು, ಹೇಗಿದ್ದರೇನು? ಆದರೆ ಅವಳನ್ನು ನೋಡಿದಾಗಲೆಲ್ಲ ಅವನ ಮನಸ್ಸು ಆಕೆಯ ಚೆಲುವಿಗೆ ಮನಸೋತಿದ್ದರೂ, ಮನಸ್ಸನ್ನು ಅಂಕಿತದಲ್ಲಿಟ್ಟುಕೊಂಡಿದ್ದ ವಸಂತ ಅವಳ ಬಗೆಯಲ್ಲಿ ಯಾವುದೊ ಒಂದು ಬಗೆಯ ಅನಿರ್ವಚನೀಯವಾದ ಆತ್ಮೀಯತೆ

ಯನ್ನು ಒಳಗಿನಿಂದಲೆ ಬೆಳೆಸಿಕೊಂಡು ಬಂದಿದ್ದ. ಅವಳನ್ನು ನೋಡಿದಾಗಲೆಲ್ಲ ಒಂದು ತರದ ಸಮಾಧಾನ ಅವನ ಮನಸ್ಸನ್ನಾವರಿಸುತ್ತಿತ್ತು. ಆದರೆ ಮರು ಕ್ಷಣದಲ್ಲಿ ಏನೋ ಒಂದು ದುಃಖವೂ ಅವನನ್ನು ಕಂಗೆಡಿಸುತ್ತಿತ್ತು. ಅವಳ ಮುಖದಲ್ಲಿ ಏಕಾಂತ ಜೀವನದ ಪಡಿನೆಳಲನ್ನು ಗುರುತಿಸಿದ ವಸಂತನಿಗೆ ತನ್ನ ಏಕಾಂತ ಜೀವನದ ಬಗೆಯಲ್ಲಿಯೂ ಕನಿಕರ ಹುಟ್ಟಿಕೊಳ್ಳುತ್ತಿತ್ತು. ಇಂದು ಮಧ್ಯಾಹ್ನದಲ್ಲಿಯಂತೂ ಅವಳ ಹತ್ತಿರ ಕುಳಿತು ತೀರ ಆತ್ಮೀಯವಾಗಿ ಆಡಿದ ಮಾತುಗಳನ್ನು ನೆನೆದಾಗ ವಸಂತನಿಗೆ ತನ್ನ ಬದುಕಿನ ನೀರವತೆ ಇಮ್ಮಡಿಸಿ ಬಂದಂತಾಗಿತ್ತು. ತನ್ನ ಬದುಕನ್ನೆ ಕರುಣೆಯಿಂದ, ಕನಿಕರದಿಂದ ನೋಡಿ ನಿರುಕಿಸುವ ಮನಃಸ್ಥಿತಿಯಲ್ಲಿದ್ದುದರಿಂದಲೆ ಮೋಹಿನಿಯ ಕಣ್ಣುಗಳು ಬೇಡಿದ ಸಹಾನುಭೂತಿಯನ್ನು ಅವನ ಹೃದಯ ಸೂರೆಯಾಗಿ ಅವಳಿಗೆ ಸುರಿದಿತ್ತು.

ಕಳೆದ ಒಂದೆರಡು ಗಂಟೆಗಳಲ್ಲಿ ನಡೆದ ಸನ್ನಿವೇಶವನ್ನೆ ನೆನೆಯುತ್ತ ವಸಂತ ಹಚ್ಚಗಾಗಿ ಹಬ್ಬಿದ ಹುಲ್ಲುಹಾಸಿಗೆಯ ಮೇಲೆ ಹಾಯಾಗಿ ಒರಗಿದ. ಹೊಂಬೆಳಕನ್ನು ಮುತ್ತಿಟ್ಟ ಉನ್ಮಾದದಲ್ಲಿ ತೇಲಾಡುತ್ತಿದ್ದ ಗಿಡಗಳ ಹಸಿರಿನೊಳಗಿಂದ ಆಕಾಶದ ನಿರಭ್ರ ನೀಲವರ್ಣ ಸೂಸಿಬರುತ್ತಿತ್ತು. ಮೋಹಿನಿಯ ಸಾನ್ನಿಧ್ಯದಲ್ಲಿ ಯಾವ ಗಾರುಡಿಯಿತ್ತೊ! ವಸಂತನಿಗೆ ವಿಚಿತ್ರವೆನಿಸಿತು. ಅವಳನ್ನು ಎಷ್ಟೋ ಬಾರಿ ನೋಡಿದ್ದ. ಆದರೆ ಇಂದು ಮಧ್ಯಾಹ್ನದ ಸನ್ನಿವೇಶವೇ ಬೇರೆಯಾಗಿತ್ತು. ಅವಳು ಕಣ್ಣೆದುರಿನಿಂದ ಹೊರಟುಹೋಗಿದ್ದರೂ ಮನಸ್ಸಿನೆದುರಿನಿಂದ ಹೋಗಿರಲಿಲ್ಲ. ಹೋಗುವುದು ಸಹಜಸಾಧ್ಯವಾಗಿಯೂ ಕಾಣುತ್ತಿರಲಿಲ್ಲ. ಅವಳು ಆಡಿದ ಒಂದೊಂದು ಮಾತನ್ನೂ ನೆನೆದ. ಅವಳ ಕೈಯ ಮೇಲೆ ತಾನು ಕೈ ಇಟ್ಟಾಗಿನ ತನ್ನ ಸ್ಥಿತಿಯನ್ನು ನೆನೆದಾಗ ಮೈ ಜುಮ್ಮೆಂದಿತು. ಕೊನೆಯಲ್ಲಿ, ಅವಳು ಹೊರಡುವಾಗ ಕೈ ಮುಂದೆ ಚಾಚಿ, ಕೊರಳು ಕೊಂಕಿಸಿ, ನಸುನಕ್ಕು 'ನಾನಿನ್ನು ಹೊರಡಲಾ?' ಅಂದಾಗಿನ ಅವಳ ಭಾವಭಂಗಿಯನ್ನು ನೆನೆದು ವಸಂತನ ಮೈಮೇಲೆ ನವಿರೆದ್ದಿತು. 'ಓಹ್! ಅವಳು ನಿಜವಾಗಿಯೂ ಅಪ್ಸರೆ!' ಅಂದುಕೊಂಡ.

ಆದರೆ ಆ ಭಾವೋನ್ಮಾದ ಬಹಳ ಹೊತ್ತು ಉಳಿಯಲಿಲ್ಲ. ಮನಸ್ಸು ನಾಲ್ಕು ವರ್ಷಗಳನ್ನು ಜಾರಿ ಹಿಂದೆ ಓಡಿತು. ಅಂಥದೆ ಒಂದು ಸಾಯಂಕಾಲ. ಮಾಲತಿಯೂ ತನ್ನ ಕೈ ಮುಂದಕ್ಕೆ ಚಾಚಿ 'ನಾನಿನ್ನು ಹೊರಡಲಾ?'

ಎಂದು ಕೇಳಿದ್ದಳು. ಅವಳು ಹೊರಟುಹೋಗುವಾಗ್ಗೆ ಅವಳು ಕಣ್ಣುಮರೆ ಯಾಗುವವರೆಗೂ ತಾನು ನಿಂತಲ್ಲಿಯೆ ನಿಂತು ಅವಳನ್ನು ನೋಡಿದ್ದ. ವಿಧಿ ವಿಚಿತ್ರವಾಗಿ ಕೆಲಸಮಾಡಿತ್ತು. ಅಂದು 'ಹೊರಡಲಾ?' ಎಂದು ಕೇಳಿ ತನ್ನ ಅನುಮತಿಯನ್ನು ಪಡೆದು ಹೊರಟುಹೋದ ಮಾಲತಿಯನ್ನು ವಸಂತ ಮತ್ತೊಮ್ಮೆ ನೋಡಿರಲಿಲ್ಲ! ಮೋಹಿನಿ ಅದೇ ಮಾತನ್ನು ಇಂದು ಕೇಳಿದಾಗಿ ನಿಂದ ನಾಲ್ಕು ವರ್ಷಗಳ ಹಿಂದಿನ ಸುಖದುಃಖಾತಿಶಯದ ಸನ್ನಿವೇಶ ವಸಂತನ ಕಣ್ಣೆದುರು ನಿಲ್ಲುತ್ತಿತ್ತು. ಮೋಹಿನಿಯಲ್ಲಿ ಮಾಲತಿಯನ್ನು ತೋರಿಸುತ್ತಿತ್ತು.

ಆಗ ತಾನಿನ್ನೂ ಕಾಲೇಜಿನಲ್ಲಿ ಓದುತ್ತಿದ್ದ. ಕೊನೆಯ ವರ್ಷ. ನಾಲ್ಕು ವರ್ಷ ಹಾಸ್ಟೆಲಿನಲ್ಲಿ ಇದ್ದರೂ ಅದೇ ಊರಲ್ಲಿದ್ದ ತನ್ನ ತಂದೆಯ ಹಳೆಯ ಗೆಳೆಯ ರಾದ ದೇಶಪಾಂಡೆ ಶಂಕರರಾಯರ ಕಣ್ಣಾರಿಕೆಯಲ್ಲಿಯೆ ತನ್ನ ವಿದ್ಯಾಭ್ಯಾಸ ಸಾಗಿತ್ತು. ಮಾಲತಿ ಶಂಕರರಾಯರ ಮಗಳು. ವಸಂತ ಮಾಲತಿಯ ರಿಬ್ಬರಿಗೂ ಲಗ್ನವಾಗಬಹುದೆಂಬ ಗೆಳೆಯರ ನಲಿಗೆಮಾತಿನಲ್ಲಿಯ ಅಸ್ಪಷ್ಟವಾದ ಬಯಕೆ ವಸಂತ ಕಾಲೇಜಿಗೆ ಬಂದಾಗಿನಿಂದ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತ ಬಂದು, ವಸಂತ ಕೊನೆಯ ಟರ್ಮಿನಲ್ಲಿ ಕಾಲೇಜಿಗೆ ಬಂದಾಗ ಶಂಕರರಾಯರು ತಮ್ಮ ಬಯಕೆಯನ್ನು ಹತ್ತು ರೀತಿಯಲ್ಲಿ ವಸಂತನೆದುರು ಮುಂಡಿಸಿದ್ದರಲ್ಲದೆ, ಅವನ ತಂದೆಯವರಿಗೂ ಬರೆದಿದ್ದರು. ಇಬ್ಬರ ತಾಯಿತಂದೆಗಳಿಂದಲೂ ಯಾವ ಅಭ್ಯಂತರವಿರುವುದು ಸಾಧ್ಯವಿರಲಿಲ್ಲ. ಆಗೀಗ ಶಂಕರರಾಯರ ಮನೆಗೆ ಹೋಗಿಬರುತ್ತಿದ್ದ ವಸಂತ ಮಾಲತಿಯಲ್ಲಿ ಅನುರಕ್ತನೂ ಇದ್ದ. ಹಾಸ್ಟೆಲಿನ ಹತ್ತಿರವೆ ಇದ್ದ ಸರಕಾರಿ ಹೈಸ್ಕೂಲಿನಲ್ಲಿ ಮಾಲತಿ ಓದುತ್ತಿದ್ದುದರಿಂದ ಮಾಲತಿ ಯನ್ನು ಕಾಣಬೇಕಾಗಿದ್ದಲ್ಲಿ ವಸಂತನಿಗೆ ಅವಳ ಮನೆಯ ವರೆಗೆ ಹೋಗುವ ಅಗತ್ಯವೂ ಒಮ್ಮೊಮ್ಮೆ ಬರುತ್ತಿರಲಿಲ್ಲ.

ಪರೀಕ್ಷೆ ಸಮೀಪಿಸುತ್ತಿದ್ದ ಹಾಗೆ ಮಾಲತಿಯನ್ನು ಕಾಣುವ ಬಯಕೆ ವಸಂತನಲ್ಲಿ ಹೆಚ್ಚಾಗಿ ಬೆಳೆಯತೊಡಗಿತ್ತು. ಮಾಲತಿಯ ಪರೀಕ್ಷೆಯಾದರೂ ಹತ್ತಿರದಲ್ಲಿಯೆ ಇತ್ತು. ಆದರೆ ಇಬ್ಬರಿಗೂ ತಮ್ಮ ತಮ್ಮ ಪುಸ್ತಕಗಳಿಗಿಂತ ಒಬ್ಬೊಬ್ಬರ ಸಾನ್ನಿಧ್ಯವೇ ಹೆಚ್ಚಾಗಿ ಸ್ಫೂರ್ತಿದಾಯಕವೆನ್ನಿಸುತ್ತಿತ್ತು. ಪರೀಕ್ಷೆ ಮುಗಿದನಂತರ ಹಾಯಾಗಿ ಸುಮ್ಮನೆ ನಾಲ್ಕಾರು ದಿವಸ ಅಲ್ಲಿಯೆ ಉಳಿಯ ತಕ್ಕದ್ದೆಂದು ವಸಂತ ನಿರ್ಧಾರಮಾಡಿದ್ದ.

ಅಂದು ಸಾಯಂಕಾಲ ಆರು ಗಂಟೆಗೆ ಪರೀಕ್ಷೆಯ ಕೊನೆಯ ಪೇಪರು ಮುಗಿದೊಡನೆ ವಸಂತ ಮಾಲತಿಯ ಮನೆಗೆ ಓಡಿದ್ದ. ಪರೀಕ್ಷೆಯ ಐದಾರು ದಿವಸಗಳಲ್ಲಿ ಅವಳ ಮುಖವನ್ನೂ ಕಾಣದೆ ಕಾತರನಾಗಿದ್ದ. ಅಂದು—ಎಂದೊಮ್ಮೆ ಮುಗಿದೀತೆಂದುಕೊಂಡಿದ್ದ ಪರೀಕ್ಷೆ ಮುಗಿದಾಗ ವಸಂತನ ಮನಸ್ಸು ಗರಿಗೆದರಿ ಗಗನದಲ್ಲಿ ವಿಹರಿಸುವ ಹಕ್ಕಿಯಂತೆ ಹಾರಾಡುತ್ತಿತ್ತು. ಮಾಲತಿಯ ಪರೀಕ್ಷೆ ಮುಗಿದು ಆಗಲೆ ಒಂದು ವಾರವಾಗಿಹೋಗಿತ್ತು. ಅವನ ಪರೀಕ್ಷೆ ಮುಗಿಯುವ ವರೆಗೆ ವಸಂತ ಬರುವಂತಿರಲಿಲ್ಲವಾದ್ದರಿಂದ ಇತ್ತೀಚಿನ ಐದಾರು ದಿವಸ ಅವಳಿಗೂ ತುಂಬ ಬೇಸರವಾಗಿತ್ತು. ಆದ್ದರಿಂದ ಅಂದು ಸಾಯಂಕಾಲ ವಸಂತ ಮನೆಗೆ ಬಂದಾಗ ಇಬ್ಬರ ಆತುರವೂ ಆನಂದವಾಗಿ, ಮುಖದಲ್ಲಿ ನಗೆಮಲ್ಲಿಗೆಯಾಗಿ ನಿಂತಿತ್ತು.

ಹಾಗೆ ನೋಡಿದರೆ ಅಂದಿನ ದಿನ ಮಾಲತಿಯ ತಾಯಿಯೂ ವಸಂತನ ಬರವನ್ನೆ ಇದಿರುನೋಡುತ್ತಿದ್ದರು. ವಸಂತ ಮರಳಿ ಊರಿಗೆ ಹೋಗುವುದರೊಳಗಾಗಿ ಅವನಿಂದ ನಿಶ್ಚಿತವಾದ ಅಭಿಮತವನ್ನು ತೆಗೆದುಕೊಂಡು, ಸಾಧ್ಯವಾದರೆ ಒಂದೆರಡು ತಿಂಗಳಲ್ಲಿಯೆ ಮಂಗಲಕಾರ್ಯವನ್ನು ಮುಗಿಸಿಬಿಡಬೇಕೆಂದಿದ್ದರು. ಅದಕ್ಕೆಂತಲೆ ಇತ್ತೀಚಿನ ಎರಡು ತಿಂಗಳಲ್ಲಿ ಮಾಲತಿಗೆ ವಸಂತನೊಡನೆ ಅಲ್ಲಲ್ಲಿ ಹೋಗಿ ಬರಲಿಕ್ಕಾಗಲಿ ಅಡ್ಡಾಡಲಿಕ್ಕಾಗಲಿ ವಿಶೇಷವಾದ ಪ್ರೋತ್ಸಾಹವನ್ನಲ್ಲದಿದ್ದರೂ ಅನುಮತಿಯನ್ನಾದರೂ ಕೊಟ್ಟೇ ಕೊಡುತ್ತಿದ್ದರು....ಅಂದಿನ ಮಟ್ಟಿಗೆ ವಸಂತ ನಿಶ್ಚಯಿಸಿಕೊಂಡ ಕಾರ್ಯಕ್ರಮವೆಂದರೆ ಮಾಲತಿಯೊಡನೆ ಎಲ್ಲಿಯಾದರೂ ತಿರುಗಾಡಲು ಹೋಗಿ ಕೆಲಕಾಲ ಮನಸೋಕ್ತವಾಗಿ ಅವಳೊಡನೆ ಮಾತಾಡುವುದು. ಮಾಲತಿಯಾದರೂ ಅದನ್ನೇ ನೆನೆದಿದ್ದಳು. ಆದರೆ ಈ ಪ್ರಸ್ತಾಪವನ್ನು ತಾಯಿಯ ಎದುರು ಎತ್ತುವುದು ಹೇಗೆ ಎಂಬುದು ಇಬ್ಬರಿಗೂ ಬಗೆಹರಿಯದಾಗಿತ್ತು. ಆದರೆ ಉಪಹಾರವಾದನಂತರ ಆ ಪ್ರಶ್ನೆ ತಾನಾಗಿಯೆ ಬಗೆಹರಿಯಿತು. ಅಕಲ್ಪಿತವಾಗಿ ಮಾಲತಿಯ ತಾಯಿಯೇ ಹೇಳಿಬಿಟ್ಟರು, ಬೇಕಾದರೆ ಅವರಿಬ್ಬರೂ ಎಲ್ಲಿಯಾದರೂ ಸುತ್ತಾಡಿಕೊಂಡು ಬರಬಹುದೆಂದು. ಒಂದು ಕಣ್ಣಿಗಾಗಿ ಪ್ರಾರ್ಥಿಸಿದ ಕುರುಡನಿಗೆ ಎರಡೂ ಕಣ್ಣು ದೊರೆತಂತಾಗಿತ್ತು, ವಸಂತನ ಮನಃಸ್ಥಿತಿ.

ಮಾಲತಿ ವಸಂತನೊಡನೆ ಮನೆಯಿಂದ ಹೊರಬಿದ್ದಾಗ ಸೂರ್ಯಾಸ್ತ ಸಮಯದ ಹೊನ್ನ ಬೆಳಕು ಮೃದುವಾಗಿ ಅಲೆದಾಡುತ್ತಿದ್ದ ಅವಳ ಮುಂಗುರುಳು

ಗಳಿಗೆ ಅವರ್ಣನೀಯವಾದ ಕಾಂತಿಯನ್ನು ಕೊಟ್ಟಿತ್ತು. ಗೇಟಿನಿಂದ ಹೊರಬಂದ ಕೂಡಲೇ ಮಾಲತಿ ಕೇಳಿದ್ದಳು :

‘ ಹೇಗಾದವು ಪೇಪರುಗಳು ? ’

‘ ಸಾಧಾರಣವಾಗಿಯೆ.’

‘ ಇಂದು ಯಾವ ವಿಷಯವಿದ್ದಿತು ? ’

‘ ಅರ್ಥಶಾಸ್ತ್ರ.’

‘ ಓ ! ನಿಮ್ಮ ವ್ಯರ್ಥಶಾಸ್ತ್ರ ! ’

‘ ವ್ಯರ್ಥಶಾಸ್ತ್ರ ನಿನ್ನದು, ನನ್ನದಲ್ಲ ! ’

ಮಾಲತಿಗೆ ಸಂಸ್ಕೃತದಲ್ಲಿ ಪ್ರೀತಿ. ಎಷ್ಟೋ ಬಾರಿ ವಸಂತನ ಅಭ್ಯಾಸ ವಿಷಯವಾದ ಅರ್ಥಶಾಸ್ತ್ರವನ್ನು ಮಾಲತಿ ವ್ಯರ್ಥಶಾಸ್ತ್ರವೆಂದು ಚೇಷ್ಟೆಮಾಡುತ್ತಿದ್ದಂತೆ ವಸಂತ ಅವಳ ಸಂಸ್ಕೃತವನ್ನೂ ವ್ಯರ್ಥಶಾಸ್ತ್ರವೆಂದು ಟೀಕಿಸುತ್ತಿದ್ದ.

‘ ಓ, ನಿಮಗೆ ಗೊತ್ತಿಲ್ಲ. ಸುಮ್ಮನೆ ಜಗಳವೇಕೆ ? ನಿಮ್ಮದು ಅರ್ಥದ ಶಾಸ್ತ್ರ, ನನ್ನದು ಶಾಸ್ತ್ರದ ಅರ್ಥ ! ಅಷ್ಟೆ ! ’

‘ ಎರಡರಲ್ಲೂ ‘ ಅರ್ಥ ’ವಿಲ್ಲ. ಅದೇ ನಿಜ, ಅಲ್ಲವೆ ? ’

ಎಂದು ವಸಂತ ಕೇಳಿದಾಗ ಇಬ್ಬರೂ ಮನಸಾರೆ ನಕ್ಕಿದ್ದರು ಮಾಲತಿ ಕೇಳಿದ್ದಳು :

‘ ಅದು ಹೇಗೂ ಇರಲಿ. ಒಟ್ಟಿನಲ್ಲಿ ಪರೀಕ್ಷೆ ಹೇಗಾಯಿತು ? ’

‘ ಮಾನವಿಲ್ಲ ! ’

‘ ಅಂದರೆ ಫೇಲೆ ? ’

‘ ಅಂದರೆ ನೀನು ಹುಚ್ಚೀಂತ ಅರ್ಥ ! ಶಾಸ್ತ್ರದ ಅರ್ಥ ಹೇಳುವವಳಿಗೆ ಇಷ್ಟೂ ಅರ್ಥವಾಗಬಾರದೆ ? ’ ಎಂದು ವಸಂತ ನಕ್ಕ.

‘ ಹಾಗಾದರೆ ಮಾನವಿಲ್ಲವೆಂದರೆ ? ’

‘ ಅಂದರೆ—ಆನರ್ಸ್ ಇಲ್ಲ ಅಂತ ಅರ್ಥ ! ’

‘ ಹೊ ! ಒಳ್ಳೆ ಚೇಷ್ಟೆ ನಿಮ್ಮದೂ ! ’ ಎಂದು ಮಾಲತಿಯೂ ನಕ್ಕಳು. ನಗು ತಡೆದು ಕೇಳಿದ್ದಳು : ‘ ನಿಜವಾಗಿಯೂ ಫೇಲ್ ಎಂದು ಎಲ್ಲಿ ಹೇಳುವಿರೊ ಎಂದು....’

‘ ಯಾಕೆ, ನಾನು ಫೇಲ್ ಆಗಬಹುದು ಎಂದರೆ ನಿನಗೆ ಗಾಬರಿಯೆ ? ’

'ಹೌದು!'

'ಯಾಕೆ?'

'ಯಾಕೇನು? ಹೋದ ಸಲ ನೀವೇ ಹೇಳಿದಿರಲ್ಲ? ನನ್ನ ಮೂಲಕ ಓದು ಅಷ್ಟು ಚೆನ್ನಾಗಿ ಸಾಗವೊಲ್ಲದೆಂದು!'

'ಹೌದು. ಓದುವಾಗ ಪುಸ್ತಕದಲ್ಲಿ ಎಷ್ಟೋ ಸಾರೆ ಅಕ್ಷರಗಳ ಬದಲು ನಿನ್ನ ಚಿತ್ರವನ್ನೇ ಕಾಣುತ್ತಿದ್ದೆ. ಅಂತೆಯೆ ಹಾಗೆ ಹೇಳಿದ್ದೆ.'

'ಆ ಚಿತ್ರವನ್ನು ಹೊಡೆದೋಡಿಸಬೇಕಾಗಿತ್ತು.'

'ಸಾವಿರ ಬಾರಿ ಹೊಡೆದೋಡಿಸಿದೆ!'

'ಓ! ಆದರೂ ಅದು ಅಲ್ಲಿಂದ ಓಡಲಿಲ್ಲವೆ?'

'ಹಟಮಾರಿ! ಎರಡುಸಾವಿರ ಬಾರಿ ತಿರುಗಿ ಬಂದಿತು ಮತ್ತೆ!'

'ಬಹಳ ಕೆಟ್ಟದು ಅಲ್ಲವೆ, ಅದು?'

'ನಿನ್ನಷ್ಟು ಮಾತ್ರ!'

'ಹುಚ್ಚು ನಿಮಗೆ!'

'ಇಲ್ಲವೆಂದು ನಾನೆಲ್ಲಿ ಹೇಳುತ್ತಿದ್ದೇನೆ!'

ಎಂದಾಗ ಇಬ್ಬರೂ ಮನಃಪೂರ್ವಕವಾಗಿ ನಕ್ಕಿದ್ದರು. ಮಾಲತಿಯ ಮುಖದಲ್ಲಿ ಅಭಿಮಾನ, ವಸಂತನ ಮುಖದಲ್ಲಿ ಹರ್ಷ ತಾಂಡವವಾಡುತ್ತಿದ್ದವು. ಮನೆಯಿಂದ ದೂರವಾಗಿದ್ದ ರೈಲುನಿಲ್ದಾಣವನ್ನು ಇಬ್ಬರೂ ಆಗಲೆ ಸಮೀಪಿಸಿದ್ದರು. ವಸಂತ ಕೇಳಿದ್ದ:

'ಈಗ ಯಾವ ಊರಿಗೆ ನಾವು ಹೊರಟದ್ದು?'

'ಊರಿಗೆ?....'

'ಹುಂ. ಮತ್ತೆ ಸ್ಟೇಶನ್ನಿಗೆ ಬಂದುಬಿಟ್ಟಿದ್ದೇವಲ್ಲ!'

'ಸ್ಟೇಶನ್ನಿಗೆ ಬಂದವರೆಲ್ಲ ಊರಿಗೆ ಹೋಗಲೇಬೇಕೇನು?'

'ಊರಿಗೆ ತಾವು ಹೋಗದಿದ್ದರೆ ಇನ್ನೊಬ್ಬರನ್ನಾದರೂ ಕಳಿಸಬೇಕು!'

'ಸುಮ್ಮನೆಯೂ ಬರಬಹುದು!'

'ಕೆಲಸವಿಲ್ಲದೆಯೆ?'

'ಇನ್ನೇನಾದರೂ ಕೆಲಸವಿರಬಹುದು!'

'ಹೌದು. ಕೆಲಸವಿಲ್ಲದೆ ಸ್ಟೇಶನ್ನಿಗೆ ಬರಬಹುದು, ಅಲ್ಲವೆ?'

‘ ಯಾತಕ್ಕೆ ? ’

‘ ಕಾಲೇಜಿನ ಹುಡುಗರು ಸ್ಟೇಶನ್ನಿಗೆ ಬರುತ್ತಾರೆ, ಯಾತಕ್ಕೆ ಗೊತ್ತೆ ? ’

‘ ನೀವೂ ಈಗ ಅದಕ್ಕಾಗಿಯೆ ಬಂದಿದ್ದೀರೇನು ? ’

‘ ಅದಕ್ಕಾಗಿ ನಾನು ಬರಬೇಕಾಗಿಲ್ಲ ! ’

‘ ಯಾಕೆ ? ನೀವೂ ಕಾಲೇಜಿನಲ್ಲಿದ್ದೀರಿ ! ’

‘ ಕಾಲೇಜಿನಲ್ಲಿದ್ದರೂ ಸ್ಟೇಶನ್ನಿಗೆ ಬರಬೇಕಾಗಿಲ್ಲ ; ಸ್ಟೇಶನ್ನಿನ ಹತ್ತಿರದ ಒಂದು ಬಂಗಲೆಗೆ ಬಂದರೆ ಸಾಕು ! ’

ಎಂದು ಮಾಲತಿಯನ್ನು ನೋಡಿದಾಗ ಮಾಲತಿಯೂ ಮಾತಿನ ಅರ್ಥ ವನ್ನು ಯಾವಾಗಲೊ ಗ್ರಹಿಸಿದ್ದಳೆಂಬುದು ವಸಂತನಿಗೆ ತಿಳಿಯಿತು. ಮಾತಿನ ಭರದಲ್ಲಿ ತಾವು ಹೋಗುವುದೆಲ್ಲಿಗೆ ಎಂಬ ಪ್ರಶ್ನೆ ಮಾತ್ರ ಹಾಗೆಯೆ ಉಳಿಯಿತು. ಆದರೆ ರೈಲಿನ ಹಳಿಗಳ ಗುಂಟ ದಾರಿಯನ್ನು ತುಳಿಯುತ್ತಿದ್ದ ಅವರಿಬ್ಬರ ಕಾಲುಗಳು ಆ ಪ್ರಶ್ನೆಯನ್ನು ತಾವಾಗಿಯೆ ಬಿಡಿಸಿಕೊಂಡಿದ್ದವು.

ಆಗಲೆ ಇಬ್ಬರೂ ರೈಲ್ವೆ ಕೆಬಿನ್ ದಾಟಿ ಬಂದಿದ್ದರು. ಅಲ್ಲಿಂದ ರೈಲುದಾರಿ ಇಳಿಜಾರಿನ ಗುಂಟ ಸಲೀಲವಾಗಿ ದೊಡ್ಡದೊಂದು ಸುತ್ತನ್ನು ಸುತ್ತಿ ಬಲಬದಿಯ ಕೊಳ್ಳದ ಮಡಿಲಲ್ಲಿ ಮಾಯವಾಗಿತ್ತು—ಬದುಕಿನ ದಾರಿ ಅವ್ಯಕ್ತ ಭವಿಷ್ಯದಲ್ಲಿ ಮಾಯವಾದಂತೆ ! ಮಾಲತಿಯೆಂದಳು :

‘ ಇಲ್ಲಿಯೇ ಎಲ್ಲಾದರೂ ಕುಳಿತುಕ್ಕೊಳ್ಳೋಣ, ಕತ್ತಲಾಗುತ್ತ ಬಂತು.’

‘ ಕತ್ತಲಾದರೆ ಈಗ ಬೆಳದಿಂಗಳು ಬೆಳಗುವುದು ! ”

‘ ಈ ಕಲ್ಲುದಾರಿ ಬೇರೆ....’

‘ ಹಾಗಾದರೆ ಈ ದಿನ್ನೆಯ ಮೇಲೆ ಹೋಗೋಣ.”

‘ ಹುಂ....’

ಇಬ್ಬರೂ ಎಡಬದಿಯ ದಿನ್ನೆಯ ಮೇಲ್ಗಡೆ ಹೋಗಿ ಕುಳಿತರು. ಸುತ್ತಲು ಯಾರೂ ಕಾಣುತ್ತಿರಲಿಲ್ಲ. ಯಾರಿರಲಿಲ್ಲವೆಂದರೂ ದೂರದ ಸಿಗ್ನಲ್ ಮೇಲೆ ದೀಪ ಹಚ್ಚಿ ತಿರುಗಿ ಬರುತ್ತಿದ್ದ ಪೋರ್ಟರನೊಬ್ಬ ಕಾಣಿಸುತ್ತಿದ್ದ. ಒಂದೆರಡು ನಿಮಿಷಗಳಲ್ಲಿ ಅವನೂ ದಾಟಿಹೋದ.

ವಸಂತನ ಬದಿಯಲ್ಲಿಯೆ ಮಾಲತಿ ಕುಳಿತಿದ್ದಳು. ಮನೆಯಿಂದ ಹೊರಡು ವಾಗ ಮುಡಿಯ ಮೇಲೇರಿಸಿದ ಮಾಲೆಯಲ್ಲಿಯ ಮೊಗ್ಗುಗಳು ಅದೇ ಅರಳಿ

ಮಲ್ಲಿಗೆಗಳಾಗಹತ್ತಿದ್ದವು. ಆಗೀಗ ಗಾಳಿ ಸೂಸಿ ಬಂದಾಗ ಅವುಗಳ ಪರಿಮಳ ವಸಂತನನ್ನು ಉನ್ಮಾದಕವಾಗಿ ಮುತ್ತುತ್ತಿತ್ತು. ವಸಂತನಿಗೆ ಎನಿಸಿತು— ಮೊಗ್ಗುಗಳು ಅರಳಿ ಮಲ್ಲಿಗೆಗಳಾಗುತ್ತಿರುವಂತೆ ಮಾಲತಿಯೂ ಮಲ್ಲಿಗೆ ಯಂತಾಗುತ್ತಿಲ್ಲವೆ? ಅವಳ ಅಂಗಾಂಗಗಳೂ ಆ ನವಚೇತನಕ್ಕೆ ಸಾಕ್ಷಿಯಾಗಿ, ನೋಡುವ ಕಣ್ಣಿಗೊಂದು ಕನಸಾಗಿ, ಹೃದಯದಲ್ಲಿ ಉನ್ಮಾದಕ್ಕೆ ಕಾರಣವಾಗು ತ್ತಿಲ್ಲವೆ? ಎಂದು. ಇನ್ನಷ್ಟು ಅವಳ ಹತ್ತಿರಕ್ಕೆ ಸರಿದು ವಸಂತ ಉಸಿರಿದ:

'ಮಾಲತಿ!'

'ಏನು?'

ವಸಂತ ಸುಮ್ಮನಾದ. ಅವನ ಭಾವ ಅವಳಿಗೆ ತಿಳಿಯದಿರಲಿಲ್ಲ. ತನ್ನ ಹೆಸರನ್ನು ಆತ ಉಚ್ಚರಿಸಿದ ದನಿಯಲ್ಲಿ ಮಾಲತಿ ವಸಂತನ ಕಾತರತೆಯನ್ನು ಗುರುತಿಸಿದ್ದಳು.

'ಏನು ಯೋಚಿಸುತ್ತಿದ್ದೀರಿ?'

'ಏನೊ, ಒಂದು ವಿಚಿತ್ರ ವಿಚಾರ!'

'ಏನದು?'

'ನಾನು ಈ ಸಾರೆ ಪರೀಕ್ಷೆಯಲ್ಲಿ ಪಾಸಾಗದಿದ್ದರೆ ಒಳ್ಳೆಯದು ಎಂದು!'

'ಪಾಸಾಗದಿದ್ದರೆ ಒಳ್ಳೆಯದೆ! ಇದೇನು ಹುಚ್ಚು?'

'ಇದು ಹುಚ್ಚಲ್ಲ, ಹುಚ್ಚಿನ ಪರಿಣಾಮ!'

'ಕೊನೆಯ ವರೆಗೂ ಕಾಲೇಜಿನಲ್ಲಿಯೆ ಇರಬೇಕೆಂದೆ ನಿಮ್ಮ ವಿಚಾರ?'

'ಕಾಲೇಜಿನಲ್ಲಲ್ಲದಿದ್ದರೂ ಇಲ್ಲಿಯೆ ಇರಬೇಕೆಂಬ ಆಸೆ!'

ಮಾಲತಿ ತುಸು ನಾಚಿದಳು. ಒಂದರೆನಿಮಿಷ ತಡೆದು ಕೇಳಿದಳು:

'ಈ ಊರಲ್ಲಿಯೆ ಇರಬೇಕಾದರೆ ಪಾಸಾದರೂ ಇರಬಹುದಲ್ಲ?'

'ಪಾಸಾದರೆ ಕಾಲೇಜು ಮುಗಿಯಿತು!'

'ಅದೇಕೆ? ಎಂ.ಎ.ಗೆ ಓದಬಹುದು.'

'ಎಂ.ಎ.ಗೆ? ನನ್ನ ಕೈಯಿಂದಾಗದು!'

'ಯಾಕೆ? ಓದು ಎಂದರೆ ಅಷ್ಟು ಬೇಸರವಾಗಿದೆಯೆ?'

'ಓದು ಬೇಸರವಾಗಿಲ್ಲ. ಪರೀಕ್ಷೆ ಬೇಸರವಾಗಿದೆ. ಏನಾದರೂ ಇದೇ ಕೊನೆಯದು. ಪರೀಕ್ಷೆಗಾಗಿ ಓದುವುದೆಂದರೆ ಕೂಲಿ ಕೆಲಸ ಮಾಡಿದಂತೆ!'

' ಹಾಗಾದರೆ ಏನು ಮಾಡುವಿರಿ ? '

' ಅದೇ—ನನ್ನ ಯೋಚನೆ ! '

' ಏನಾದರೂ ಆಗಲಿ, ಪರೀಕ್ಷೆಯಲ್ಲಿ ಏಟು ತಿನ್ನುವುದು ಬೇಡ ! '

' ಯಾಕೆ ? '

' ಎಂಥ ಅವಮಾನ ನಾಲ್ಕು ಜನರಲ್ಲಿ ? '

' ಹಾಗಾದರೆ ಪಾಸಾಗಿ ನಾನಿಲ್ಲಿಂದ ಹೊರಟು ಹೋಗಿಬಿಡಲೊ ? '

' ಪಾಸಾಗಿ ಹೊರಟು ಬಂದುಬಿಡಿರಿ ! '

ಅವಳ ಹತ್ತಿರಕ್ಕೆ ಸರಿದು ಅವಳ ಬಲಗೈ ಬೆರಳುಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ವಸಂತ ಹೇಳಿದ :

' ನನ್ನ ಯೋಚನೆ ಬೇರೆಯಾಗಿದೆ ! '

' ಏನದು ? '

' ನಾನು ಹೊರಟು ಬಂದುಬಿಡುವುದಕ್ಕಿಂತ ನೀನೇ ಬಂದುಬಿಡಬೇಕು ! '

' ಎಲ್ಲಿಗೆ—ನಿಮ್ಮೂರಿಗೆ ? '

ಮಾಲತಿ ತಡೆದಳು. ವಸಂತನ ಹೃದಯದಲ್ಲಿ ಆತುರ ಉಕ್ಕಿಬರುತ್ತಿತ್ತು. ಅವಳ ಕೈಯನ್ನು ಮೆತ್ತಗೆ ಅದುಮಿ ಉಸುರಿದ :

' ಯಾಕೆ, ಅನುಮಾನವೇ ಮಾಲತಿ ? '

' ಅನುಮಾನವಿಲ್ಲ. ಆಸೆಯಿದೆ, ಆದರೆ....'

' ಆದರೆ ಏನು ? '

' ನೀವು ಕರೆದುಕೊಂಡುಹೋಗಬೇಕು ! '

ಎಂದು ಅರ್ಧ ನಾಚಿ, ಅರ್ಧ ನಕ್ಕು ಹೇಳಿದಾಗ ಅವಳ ಮಾತಿನ ಹಿಂದೆ ಅಡಗಿದ ಅರ್ಥ ವಸಂತನಿಗೆ ಹೊಳೆಯಿತು. ಅವನ ಆಸೆ ಫಲಿಸಿತು. ' ನಾನು ನಿಮಗೆ ಒಪ್ಪಿಗೆಯೆ ? ' ಎನ್ನುವಂತೆ ಅವಳ ದೃಷ್ಟಿ ವಸಂತನ ಮುಖವನ್ನು ಹುಡುಕುತ್ತಿತ್ತು. ವಸಂತ ತೀರ ಉತ್ಸಾಹಿತನಾಗಿ ಆನಂದಾತಿಶಯದಲ್ಲಿ ಮಾಲತಿಯನ್ನು ತನ್ನ ಹತ್ತಿರಕ್ಕೆಳೆದುಕೊಂಡು ಕೇಳಿದ :

' ನೀನು ನನ್ನವಳಲ್ಲವೆ, ಮಾಲತಿ ? '

'............'

' ಆಂ ? ಹೇಳು, ಮಾಲತಿ. ನೀನು ನನ್ನವಳಲ್ಲವೆ ? '

ಮಾಲತಿ ಮೌನದಿಂದಲೆ ಸಮ್ಮತಿಯನ್ನು ಸೂಚಿಸಿದಳು. ಪೂರ್ವದಿಕ್ಕಿನಲ್ಲಿ ಮೂರು ಮೇಲೆಯೆ ಬೆಳಗುತ್ತಿದ್ದ ಚಂದ್ರನ ಬೆಳುದಿಂಗಳಲ್ಲಿ ಮಾಲತಿಯ ಮುಖ ಅದ್ವಿತೀಯವಾಗಿ ಕಾಣುತ್ತಿತ್ತು. ಮುಡಿಯ ಮೇಲಿನ ಮಲ್ಲಿಗೆಗಳು ಸಂಪೂರ್ಣವಾಗಿ ಅರಳಿದ್ದವು. ವಸಂತ ಅವುಗಳನ್ನು ಅಲ್ಲಿಯೆ ಮುಗಿಸಿದ.

ತಿರುಗಿ ಬರುವಾಗ ದಾರಿಯಲ್ಲಿ ಮಾಲತಿ ಕೇಳಿದ್ದಳು :

' ನಾಳೆ ಸಾಯಂಕಾಲ ಮತ್ತೆ ಈ ಕಡೆ ಬರೋಣವೆ ? '

' ನಾಳೆ ನಾನು ಊರಿಗೆ ಹೋಗಬೇಕು.'

' ನಾಳೆಯೆ ? ಪರೀಕ್ಷೆಯಾದನಂತರ ಐದಾರು ದಿವಸ ಇರುತ್ತೇನೆಂದು ಹೇಳಿದ್ದಿರಲ್ಲ ? '

' ಹೌದು, ಹೇಳಿದ್ದೆ. ಆದರೆ ತಂದೆಯವರಿಂದ ನಿನ್ನೆ ಕಾಗದ ಬಂದಿದೆ. ತಾಯಿಗೆ ಏನೊ ಅಸ್ವಸ್ಥವಂತೆ.'

' ಏನಾಗಿದೆ ? '

' ಏನೊ, ಜ್ವರವಂತೆ. ವಿಶೇಷವೇನಿರಲಿಕ್ಕಿಲ್ಲ. ಅವಳು ಯಾವಾಗಲೂ ಅಷ್ಟೆ. ಮೊದಲಿನಿಂದಲೂ ತುಸು ಅಶಕ್ತ.'

' ನಾಳೆ ನೀವು ಹೋಗಲೇಬೇಕೆ ? '

' ಹೌದು, ಮಾಲತಿ—ಮನಸ್ಸು ತಡೆಯದು.'

' ಹ್ಯಾಗಾದರೆ....'

' ಹೋಗಿ ನೋಡಿಕೊಂಡಮೇಲೆ ಮತ್ತೊಮ್ಮೆ ಬಂದು ಹೋಗಬೇಕೆಂದಿದ್ದೇನೆ.'

' ಮುಂದಿನ ವಾರದಲ್ಲಿ ಬರುವಿರಾ ? '

' ಈಗ ಹೇಗೆ ಹೇಳಲಿ ? ಸಾಧ್ಯವಾದಷ್ಟು ಬೇಗನೆ ಬರುವೆ. ಆದರೆ ಅಷ್ಟರಲ್ಲಿ ನೀನು ಎಲ್ಲವನ್ನೂ ಗೊತ್ತುಪಡಿಸಿರಬೇಕು....ಅಂ ? '

' ಗೊತ್ತೇನು ಪಡಿಸುವುದು ? '

' ಮನೆಯಲ್ಲಿ ಹೇಳಬೇಡವೆ ? '

' ಏನನ್ನು ? '

' ಚೇಷ್ಟೆ ಮಾಡುತ್ತಿದ್ದೀಯಾ, ಮಾಲತಿ ? '

ಕಿಲಕಿಲನೆ ನಕ್ಕು ಮಾಲತಿ ಕೇಳಿದಳು :

' ಅದು ಸರಿ. ಆದರೆ ಹೇಳುವುದು ಹೇಗೆ ? '

' ನೀನು ಹೇಳುವುದು ಬೇಡ ! '

' ಹಾಗಾದರೆ ಅವರಿಗೆ ತಿಳಿಯುವುದೆಂತು ? '

' ಎಲ್ಲವೂ ಅವರಿಗೆ ತಿಳಿದೇ ಇದೆ ! '

' ಹಾಗಾದರೆ ನಾನು ಮಾಡಬೇಕಾದದ್ದೇನು ? '

' ಅವರು ನಿನ್ನನ್ನು ಕೇಳುವಂತೆ ಮಾಡಬೇಕು ; ಕೇಳಿದಾಗ ಸುಮ್ಮನಿದ್ದು ಬಿಡಬೇಕು. ಅಷ್ಟೆ ! '

' ಒಳ್ಳೇ ಜಾಣರು ನೀವು ! '

ಎಂದಾಗ ಮಾಲತಿಯ ಮನೆಯ ಹತ್ತಿರದ ಕವಲು ದಾರಿಗೆ ಬಂದು ತಲಪಿದ್ದರು. ವಸಂತ ಅಲ್ಲಿಂದ ಬೇರೆಯಾಗಿ ಹೋಗಬೇಕು. ಇಬ್ಬರೂ ನಿಂತು ಬಿಟ್ಟರು. ಬಾಯಿ ತಬ್ಬಿದಂತಾಗಿತ್ತು. ಕೊನೆಗೆ ವಸಂತ ಕೇಳಿದ :

' ನಾನು ಹೊರಟುಹೋದನಂತರ ಪತ್ರ ಬರೆಯುವೆಯಾ, ಮಾಲತಿ ? '

' ಬರೆಯುವುದಿಲ್ಲ, ಬರೆಯಿಸುವೆ ! '

' ಬರೆಯಿಸುವುದಿರಲಿ, ನೀನೂ ಬರೆಯಬೇಕು ' ಎಂದು ಅವಳ ಕೈಯನ್ನೆತ್ತಿಕೊಂಡು ' ನೀನು ಬರೆಯಲೇಬೇಕು ' ಎಂದು ಒತ್ತಾಯಪಡಿಸಿದ್ದ.

' ಹಾಗಾದರೆ ನಾನಿನ್ನು ಹೊರಡಲಾ ? ' ಎಂದಳು ಮಾಲತಿ. ಅವಳಿಂದ ದೂರವಾಗಿರುವ ದುಃಖ ತೀವ್ರವಾಗಿ ವಸಂತನನ್ನು ಆವರಿಸಿತು. ದೀನನಾಗಿ ಮುಖದಿಂದಲೆ ಸಮ್ಮತಿಸಿದ. ಒಂದೆರಡು ನಿಮಿಷ ತಡೆದು ವಸಂತನ ಕೈಯಿಂದ ತನ್ನ ಬೆರಳುಗಳನ್ನು ಬಿಡಿಸಿಕೊಂಡು ಹೊರಟಳು. ವಸಂತ ನಿಂತಲ್ಲಿಯೆ ನಿಂತಿದ್ದ. ಗೇಟಿನ ಚಿಕ್ಕ ಬಾಗಿಲನ್ನು ತೆರೆದು ಮಾಲತಿ ಒಳಗೆ ಹೋಗುವಾಗ ಮತ್ತೊಮ್ಮೆ ತಿರುಗಿ ನೋಡಿದ್ದಳು. ಮಾಲತಿ ವಸಂತನ ಕಣ್ಣುಮರೆಯಾಗಿದ್ದಳು.

ಊರಿಗೆ ಬಂದಾಗ ತಾಯಿಯ ದೇಹಸ್ಥಿತಿ ಆಶಾದಾಯಕವಾಗಿ ಕಾಣಲಿಲ್ಲ. ತಾಯಿಯನ್ನೆಲ್ಲಿ ಕಳೆದುಕೊಳ್ಳಬಹುದೊ ಎಂಬ ಭಯದಲ್ಲಿ ಮಾಲತಿ ಕೆಲವು ದಿವಸ ಮನಸ್ಸಿನಿಂದ ಹೆಚ್ಚುಕಡಿಮೆ ಮರೆಯಾಗಿದ್ದಳು. ಮರುವಾರ ಬರುತ್ತೇನೆಂದು ಹೇಳಿದ್ದರೂ ಮರುವಾರವಾದರೂ ಮನೆಯನ್ನು ಬಿಡುವುದು ಸಾಧ್ಯವಾಗಿ ಕಾಣಲಿಲ್ಲ. ಆಗೀಗ ಮಾಲತಿಗಾಗಿ ಹೃದಯ ಮೊರೆಯಿಡುತ್ತಿತ್ತು. ಒಂದು ದಿನ ರಾತ್ರಿ ಅಕಸ್ಮಾತ್ತಾಗಿ ತಾಯಿ ಹೋಗಿಬಿಟ್ಟಳು. ಮಾರನೆಯ ದಿನ ಬರಸಿಡಿಲಿ

ನಂತೆ ಶಂಕರರಾಂಸರಿಂದ ಸಮಾಚಾರ ಬಂದಿತು—ಏಳು ದಿನಗಳಿಂದ ವಿಷಮ ಜ್ವರದಿಂದ ಮಲಗಿದ್ದ ಮಾಲತಿ ಕೈಬಿಟ್ಟಳೆಂದು. ವಸಂತ ದುಃಖದಿಂದ ಹುಚ್ಚನಂತಾದ........

ಆ ದುಃಖವನ್ನು ನೆನೆಯುತ್ತಿರುವಾಗಲೆ ಎದೆ ಉಮ್ಮಳಿಸಿ ಬಂದಂತಾಗಿ ಕಣ್ಣು ತೆರೆದು ನೋಡುತ್ತಾನೆ, ಸುತ್ತಲೂ ಕತ್ತಲಾಗಿ ಹೋಗಿದೆ! ಜನರು ಒಬ್ಬೊಬ್ಬರಾಗಿ ಹೊರಡುವುದರಲ್ಲಿದ್ದಾರೆ. ಬದಿಯ ಬೀದಿಯಲ್ಲಿಯ ದಾರಿದೀಪ ಗಳಿಂದ ಗ್ಯಾಸ್ ಬೆಳಕು ಸೂಸಿ ಬರುತ್ತಿತ್ತು. ಎದ್ದು ಕುಳಿತು, ಕಣ್ಣು ಉಜ್ಜಿ ಕೊಂಡ. ಗತಕಾಲದ ಸ್ಮೃತಿಚಿತ್ರ ಹೃದಯವನ್ನು ಇರಿಯುತ್ತಿತ್ತು. 'ಹತ ಭಾಗ್ಯ ನಾನೊಬ್ಬ!' ಎಂದುಕೊಂಡ. ಸುತ್ತಲಿನ ಶಾಂತತೆ ಅವನ ಜೀವನದ ಏಕಾಂತತೆಯ ಪಡಿನೆಳಲೆಂಬಂತೆ ಹಬ್ಬಿತ್ತು. ತಂದೆಯಿರುವವರೆಗೆ ತಾಯಿ ಹೋದ ದುಃಖವನ್ನು ಕೆಲಮಟ್ಟಿಗಾದರೂ ಮರೆಯುವುದು ಸಾಧ್ಯವೆನಿಸುತ್ತಿತ್ತು. ಮೂರು ವರ್ಷಗಳ ಹಿಂದೆ ಅವರೂ ಹೋಗಿಬಿಟ್ಟರು. ರಾಯಚೂರಿನಲ್ಲಿ ತನ್ನ ಗಂಡ–ಮಕ್ಕಳೊಂದಿಗೆ ಇರುತ್ತಿದ್ದ ಅಕ್ಕನ ಹೊರತಾಗಿ ತನಗೆ ಯಾರೂ ಉಳಿದಿರ ಲಿಲ್ಲವೆಂಬುದನ್ನು ನೆನೆದಾಗಲೆಲ್ಲ ವಸಂತ ದುಃಖದಲ್ಲಿ ಬೆಂದುಹೋಗುತ್ತಿದ್ದ. ತಂದೆಯವರ ಆಸ್ತಿಯೂ ಸುಮಾರಾಗಿ ಇತ್ತು, ನಗದೂ ಇತ್ತು. ಆದರೆ ಊರಲ್ಲಿ ಕುಳಿತಾದರೂ ಮಾಡುವುದೇನೆಂದೂ ಏನಾದರೂ ಮನಸ್ಸಿಗೆ ಬಂದುದನ್ನು ಓದಬಹುದೆಂದೂ ತಂದೆ ಹೋದನಂತರ ವಸಂತ ಮುಂಬಯಿಯನ್ನು ಸೇರಿದ್ದ. ಏಕಾಂತವನ್ನೆ ಬಯಸುತ್ತಿದ್ದ ಅವನ ಹೃದಯ ಮುಂಬಯಿಯ ಗದ್ದಲ ಅವಸರ ಅಶಾಂತಿಗಳಿಂದ ದೂರವಾಗಿದ್ದ ಬೋರಿವಲಿಯ ವರೆಗೆ ಅವನನ್ನು ಕರೆ ದೊಯ್ದಿತ್ತು. ಸುಮ್ಮನೆ ಕುಳಿತಾದರೂ ಇದ್ದ ಆಸ್ತಿಯನ್ನು ಏಕೆ ವ್ಯಯಿಸ ಬೇಕೆಂಬ ವಿಚಾರದಿಂದ ಸೆಕ್ರೆಟೆರಿಯೆಟ್‌ನಲ್ಲಿ ಕೆಲಸವನ್ನು ಹಿಡಿದಿದ್ದ. ಕಳೆದ ಮೂರು ವರ್ಷಗಳಲ್ಲಿ ಕೆಲಸದಲ್ಲಿಯಾದರೂ ಮೇಲೇರಿ ಒಳ್ಳೆ ಸಂಬಳವನ್ನು ಗಳಿಸುತ್ತಿದ್ದ. ಆದರೆ ಯಾವುದರಲ್ಲಿಯೂ ಆತನಿಗೆ ಉತ್ಸಾಹವಿರಲಿಲ್ಲ.

ಚೆಲುವನ್ನು ಕಂಡಾಗಲೆಲ್ಲ ಮಾಲತಿಯ ಮೂರ್ತಿ ಕಣ್ಣೆದುರು ನಿಲ್ಲುತ್ತಿತ್ತು. ಆದರೆ ಮೂರು ವರ್ಷಗಳ ಅನುಭವ ದುಃಖದ ತೀವ್ರತೆಯನ್ನು ಎಷ್ಟೋ ಪಾಲು ಕಡಿಮೆ ಮಾಡಿತ್ತು. ಹಳೆಯ ದುಃಖಪರಂಪರೆ ವಸಂತನನ್ನು ಮೃದುಹೃದಯ ನನ್ನಾಗಿ ಮಾಡಿತ್ತು. ಇನ್ನೊಬ್ಬರ ದುಃಖವನ್ನು ತನ್ನದಾಗಿ ಮಾಡಿಕೊಂಡು,

ಸಾಧ್ಯವಿದ್ದಾಗಲೆಲ್ಲ ಅವರಿಗೆ ಸಹಾನುಭೂತಿಯನ್ನೂ ಸಹಾಯವನ್ನೂ ಒದಗಿಸು ವುದು ವಸಂತನಿಗೆ ಸ್ವಭಾವಗತವಾಗಿಬಿಟ್ಟಿತ್ತು. ಏಕಾಕಿಯಾದ ಆತನ ಹೃದಯ ಸುತ್ತಲಿನ ಪ್ರಪಂಚದಿಂದ ಸಹಾನುಭೂತಿಯನ್ನು ಬೇಡುತ್ತಿತ್ತು. ಆದ್ದರಿಂದಲೆ ತನಗೆ ಬೇಕಾಗಿ ಸಿಗದಿದ್ದುದರ ಬೆಲೆ ಏನೆಂಬುದನ್ನರಿತವನಾಗಿದ್ದ. ಕಳೆದ ವರ್ಷಾರುತಿಂಗಳಲ್ಲಿ ಮೋಹಿನಿಯ ಮುಖದಲ್ಲಿ ಗುಪ್ತ ದುಃಖದ ಛಾಯೆಯನ್ನು ಗುರುತಿಸಿದ್ದ. ಅವಳನ್ನು ಕಂಡಾಗಲೆಲ್ಲ ಅವನ ಹೃದಯದಲ್ಲಿ ಸಹಾನುಭೂತಿ ಸೆಲೆಯೊಡೆಯುತ್ತಿತ್ತು.

ಚರ್ನಿರೋಡ್ ತೋಟದಿಂದ ಎದ್ದು ನಿಲ್ದಾಣದಲ್ಲಿ ಬಂದಾಗ ವೇಳೆ ಏಳೂವರೆಯಾಗಿ ಹೋಗಿತ್ತು. ರೈಲಿನಲ್ಲಿ ಜನರ ಗದ್ದಲವೇನೂ ಕಡಿಮೆ ಯಾಗಿರಲಿಲ್ಲ. ದಾದರ್ ನಿಲ್ದಾಣದಲ್ಲಿಯ ಗೇಟಿನ ಗದ್ದಲದೊಳಗಿಂದ ಧುಮುಕಿ ಬರಬೇಕಾದರೆ ಮನುಷ್ಯ ಜಟ್ಟಿಯಾಗಿರಬೇಕು. ಇಲ್ಲವಾದರೆ, ಭೂಪ್ರಳಯವಾದರೂ ನಿರಾತಂಕವಾಗಿ ನೋಡುತ್ತ ನಿಲ್ಲಬಲ್ಲೆನೆನ್ನುವ ಸ್ಥೈರಣೆ ಯುಳ್ಳವನಾಗಿರಬೇಕು. ವಸಂತ ಜಟ್ಟಿಯಾಗಿರದ್ದರಿಂದ ಗದ್ದಲದ ತೆರೆ ಇಳಿ ಯುವ ವರೆಗೆ ಕಾಯ್ದ. ಹೊರಟುಹೋಗುವವರ ಗದ್ದಲ ಮುಗಿಯುವಷ್ಟರಲ್ಲಿ ಒಳಗೆ ಬರುವವರ ಗದ್ದಲ. ಅಷ್ಟರಲ್ಲಿ ಇನ್ನೊಂದು ಲೋಕಲ್ ಬರುವುದು. ಅಂತೂ ಒಮ್ಮೆ ಹೊರಗೆ ಬರುವಷ್ಟರಲ್ಲಿ ಎದುರಿಗಿನ ಚಹದ ಅಂಗಡಿಯೊಳಗಿನಿಂದ ಭಾಸ್ಕರರಾಯ ಬರುತ್ತಿದ್ದುದನ್ನು ನೋಡಿದ. ಅವನನ್ನೇನು ಮಾತನಾಡಿ ಸುವುದು ? ಎಂದು, ಒಂದು ಕ್ಷಣ ವಸಂತ ಅಂದುಕೊಂಡು, ಅವನನ್ನು ಸಹಜ ವಾಗಿಯೆ ತಪ್ಪಿಸಬಹುದಾಗಿದ್ದರೂ ಮರುಕ್ಷಣ ಸಹಜವಾಗಿಯೆ ವಿಚಾರ ಹೊಳೆ ಯಿತು. ಸಾಧ್ಯವಾದರೆ ಅವನಿಂದ ಆನಂದ ಇರುವುದೆಲ್ಲಿ ಎಂಬುದನ್ನು ಗೊತ್ತು ಹಿಡಿಯಬಹುದು, ಎಂದು. ಆದ್ದರಿಂದ ಮೋಹಿನಿಯ ಮಾತಿನ ಮೇಲಿನಿಂದ ಅವನ ಬಗೆಯಲ್ಲಿ ಜಿಗುಪ್ಸೆ ಹಬ್ಬಿಕೊಂಡಿದ್ದರೂ ಅದನ್ನು ಆದಷ್ಟು ಹತ್ತಿಕ್ಕಿ ನೇರವಾಗಿ ಅವನೆದುರಿಗೆ ಹೋದ.

" ಹೆಲ್ಲೊ, ವಸಂತರಾವ್, ನೀವು ಇನ್ನೂ ಇಲ್ಲಿಯೇ ಹೇಗೆ ? " ಎಂದು ಅವನೇ ಮೊದಲುಮಾಡಿದ.

" ಇಲ್ಲಿಯೆ ಫ್ರೆಂಡ್ಸ್ ಕಡೆಗೆ ಹೋಗಬೇಕಾಗಿತ್ತು...."

" ಅಂದರೆ— ನೀವು ಆಫೀಸಿನಿಂದ ಈಗ ಬಂದಿರಾ ? "

" ಹೌದು ! "

" ಹಾಗಾದರೆ ಬೋರಿವಲಿಗೆ ಬರುವುದಿಲ್ಲವೆ ಈ ಹೊತ್ತು ? "

" ನೋಡಬೇಕು, ಒಬ್ಬರಲ್ಲಿ ಊಟಕ್ಕೆ ಹೋಗಬೇಕು. ಬಹಳೇ ತಡ ವಾಗದಿದ್ದರೆ ರಾತ್ರಿ ಹೋಗುತ್ತೇನೆ. ಇಲ್ಲವಾದರೆ ನಾಳೆ........ಮತ್ತೇನು ಸಮಾಚಾರ, ಎಲ್ಲ ಸರಿಯಷ್ಟೆ ? "

" ಏನು ಸರಿಯೋ ಅಲ್ಲವೊ ? ಏನೋ ನಡೆದಿದೆ ಆಯ್ತು."

" ಏನೋ ಬಹಳ ಬೇಸರದಲ್ಲಿದ್ದೀರಲ್ಲಾ ? "

" ಬೇಸರವೇನು, ಹಾಳು ಈ ಹೊಟೇಲು ಊಟ ಮಾಡಿ ಮನುಷ್ಯ ಬದುಕುವುದೇ ಕಷ್ಟ ! "

" ಹೊಟೇಲೂಟವೇಕೆ, ಭಾಸ್ಕರರಾವ್, ನೀವು ಮನೆಯಲ್ಲಿ ಊಟ ಮಾಡುವುದಿಲ್ಲವೆ ? "

" ಮಾಡುತ್ತಿದ್ದೆ. ಆದರೆ ಅದೇನೂ ಅಷ್ಟು ಸರಿಹೋಗಲಿಲ್ಲ. ಮೇಲಾಗಿ, ನಮ್ಮ ಭಾರ ಯಾತಕ್ಕೆ ಸುಮ್ಮನೆ ಎರಡನೆಯವರ ಮೇಲೆ? ಎಷ್ಟಾದರೂ ಬೀಗರು ಅವರು. ಅವರವರ ಸಂಸಾರ ಅವರಿಗೆ...."

" ಅಂದರೆ, ನೀವು ಈಗ ಅಲ್ಲಿ ಇರುವುದೇ ಇಲ್ಲವೇನು ? "

" ಒಮ್ಮೆ ಹಾಗೆ ಒಮ್ಮೆ ಹೀಗೆ ಹೋಗಿ ಬಂದಿರುತ್ತೇನೆ. ಆದರೆ ಈಗ ಒಂದೆರಡು ತಿಂಗಳಿಂದ ಬೇರೆ ಕೋಣೆಯನ್ನು ಹಿಡಿದುಕೊಂಡಿದ್ದೇನೆ."

" ಎಲ್ಲಿ ? "

" ಅಲ್ಲಿಯೆ—ಸಮೀಪದಲ್ಲಿಯೆ ಇದೆ. ಸಿನೀಮಾಗೃಹವನ್ನು ನೋಡಿ ದ್ದೀರಲ್ಲ—ಅದರಾಚೆ ಎರಡನೆ ಬಂಗಲೆಯಲ್ಲಿ. ಬನ್ನಿರಲ್ಲ ಒಮ್ಮೆ, ಯಾವಾಗ ಲಾದರೂ ಸಂಜೆಯ ಕಡೆಗೆ...."

ಮಾತು ಎಲ್ಲಿಯೊ ಸಾಗಿತೆಂದು ವಸಂತನಿಗನಿಸತೊಡಗಿತು. ಆದರೆ ಅಷ್ಟರಲ್ಲಿ ಭಾಸ್ಕರರಾಯನೆ ಏನನ್ನೊ ನೆನೆದವನಂತೆ ಮಾತು ಮುಂದುವರಿಸಿದ :

" ಮೊನ್ನೆ ರಾತ್ರಿ ನೀವು ಭೆಟ್ಟಿಯಾಗಿದ್ದಿರಿ. ಆಗ ನನ್ನದೇನೊ ತಪ್ಪು ಕಲ್ಪನೆಯಾಗಿದ್ದಿತು. ಆನಂದನಿಗೆ ಬರಹೇಳಿದವರು ನೀವಲ್ಲವೆಂದು ನನಗೆ ಗೊತ್ತಾಗಲಿಲ್ಲ."

" ಹೋ! ಅದೆ? ನನಗೂ ಹಾಗೇ ಅನಿಸಿತು. ಆಯಿತು, ಯಾರಾದ

ರೇನು—ಎಂದು ನಾನು ಸುಮ್ಮನಾದೆ.”

ವಿಷಯ ತಾನಾಗಿಯೆ ಆನಂದ-ಮೋಹಿನಿಯರೆಡೆಗೆ ತಿರುಗಿದ್ದರಿಂದ ವಸಂತನಿಗೂ ತುಸು ಧೈರ್ಯ ಬಂದಂತಾಗಿ ಮಾತನಾಡತೊಡಗಿದ:

“ಈಗ ಎಲ್ಲವೂ ಸರಿಯಾಗಿ ನಡೆದಿದೆಯಷ್ಟೆ?”

“ಥೂಃ! ಅದನ್ನು ಕೇಳಬಾರದು.”

“ಯಾಕೆ? ಮತ್ತೇನು ತೊಂದರೆ?”

“ತೊಂದರೆಯೇನು? ಆಕೆ ಇರುವಲ್ಲೆಲ್ಲ ತೊಂದರೆಯೆ. Useless girl! ಏನು ಮಾಡಿದರೂ ಅಷ್ಟೆ.”

ವಸಂತನಿಗೆ ತನ್ನ ಅಭಿಪ್ರಾಯವನ್ನು ತಿಳಿಯಗೊಡಬೇಕಾಗಿರಲಿಲ್ಲ. ಆದ್ದರಿಂದ ಸುಮ್ಮನಾಗಿಯೆ ಉಳಿದ. ಭಾಸ್ಕರರಾಯ ಮುಂದುವರಿದ:

“ನಿಮ್ಮಂಥ ನಾಲ್ಕು ಜನ ಫ್ರೆಂಡ್ಸ್ ಆನಂದನಿಗೆ ಏನಾದರೂ ಬುದ್ಧಿ ಹೇಳಬೇಕು. ಇಲ್ಲವಾದರೆ, ಸುಮ್ಮನೆ ಆಕೆಯಿಂದ ಹಾಳಾಗುತ್ತಾನೆ.”

ಈಗ ಮಾತ್ರ ವಸಂತನಿಗೆ ತಡೆಯುವುದಾಗಲಿಲ್ಲ. ತುಸು ಬಿಸಿಯಾಗಿಯೆ ಹೇಳಿದ:

“ಈ ವಿಷಯದಲ್ಲಿ ಹೊರಗಿನವರು ಮಾತಾಡುವುದು ಬಹಳ ಕಷ್ಟ, ಭಾಸ್ಕರರಾವ್. ಎಷ್ಟಾದರೂ ಮನೆತನದ ಮಾತು; ಅಲ್ಲದೆ ಮದುವೆಯಾದವಳಿಂದ ದೂರವಾಗಿರು ಎಂದು ಹೇಳುವುದಾದರೂ ಹೇಗೆ? ಏನೋ, ಎಲ್ಲರೂ ಸೇರಿ ಇದ್ದ ಮುರುಕು ಸರಿಪಡಿಸಿಕೊಂಡು ಹೋಗುವುದಕ್ಕೆ ಸಹಾಯ ಮಾಡಬೇಕು—ಎಲ್ಲರೂ.”

“ಓ! ನಿಮಗೆ ಗೊತ್ತಿಲ್ಲ ಆಕೆ, ವಸಂತರಾವ್. ಯಾವ ಮಾನವಂತ ಮನುಷ್ಯನೂ ಒಂದು ಬಿಲ್ಲಿಯ ಬೆಲೆ ಕೊಡಲಾರ ಆಕೆಗೆ.”

“ಇದರಲ್ಲಿ ನಾವೂ ನೀವೂ ಮಾತನಾಡಿ ಏನು ಪ್ರಯೋಜನ? ಆನಂದರಾಯನೇ ಈ ವಿಷಯವನ್ನು ಬಗೆಹರಿಸಬೇಕು.”

“ಆನಂದ is a fool. ಅವಳ ಮುಖ ಅವನಿಗೆ ಮರುಳು ಹಿಡಿಸಿದೆ.”

ವಸಂತ ಮನಸ್ಸಿನಲ್ಲಿಯೆ ಅಂದುಕೊಂಡ: ‘ಯಾರಿಗೆ ಹಿಡಿಸಲಿಕ್ಕಿಲ್ಲ?’ ಎಂದು. ಅವನಂದ:

“ಎಷ್ಟಾದರೂ ಆತನಿಗೆ ಹೆಂಡತಿ....”

"ಹೌದು, ಇದನ್ನು ಆಕೆ ತಿಳಿಯಬೇಡವೆ? ತನಗೊಬ್ಬ ಗಂಡನೆಂಬುವವ ಇದ್ದಾನೆಂಬುದನ್ನಾದರೂ ಆಕೆ ನೆನೆಯುವಳೊ ಇಲ್ಲವೊ?"

"ನಾನೇನು ಹೇಳಬಹುದು, ಭಾಸ್ಕರರಾವ್? ಇಬ್ಬರಲ್ಲಿಯೂ ದೋಷ ಇರಬಹುದು. ಎಷ್ಟಾದರೂ ಆಕೆ ಹೆಣ್ಣುಮಗಳು! ಮನೆಯಲ್ಲಿ ಎಲ್ಲರೂ ನೀಗಿಸಿಕೊಂಡು ಹೋದರೆ ಎಲ್ಲವೂ ಸರಿಯಾಗುವುದು, ಅಲ್ಲವೆ?"

"ಎಲ್ಲರೂ ನೀಗಿಸಿಕೊಂಡು ಹೋಗುವುದೆಂದರೇನು? ನಿಜವಾಗಿ ನೋಡಿದರೆ ಮನೆಯವರಿಗೆ ಎಲ್ಲರಿಗೂ ಸಾಕಾಗಿ ಹೋಗಿದೆ. ಇವರ ಜಗಳಕ್ಕೆ ಬೇಸತ್ತೇ ನಾನು ಬೇರೆಯಾಗಿ ಇರಹತ್ತಿದ್ದೇನೆ."

"ಇರಬಹುದು. ನನ್ನ ಅಭಿಪ್ರಾಯ ಹೀಗೆ. ನಾಲ್ಕು ಜನ ಕೂಡಿ ಒಬ್ಬಳಿಗೆ ಕೆಟ್ಟ ಹೆಸರಿಟ್ಟರೆ ಉಳಿದವರೂ ಹಾಗೆಯೆ ಪ್ರಾರಂಭಮಾಡಿಬಿಡುತ್ತಾರೆ. ಗಂಡಹೆಂಡಿರಿಬ್ಬರನ್ನೂ ಬೇರೆಯಾಗಿ ಬಿಟ್ಟುಬಿಟ್ಟರೆ, ಎಲ್ಲವನ್ನೂ ಅವರು ಸರಿಪಡಿಸಿಕೊಳ್ಳಬಹುದೇನೊ...."

"ನಾವೆಲ್ಲಿ ಬೇಡ ಅಂದದ್ದು? ನೂರು ಬಾರಿ ಆನಂದನಿಗೆ ಹೇಳಿದೆ—ಇದರಲ್ಲಿ ಎರಡನೆಯವರಿಗೆ ಸುಮ್ಮನೆ ದೋಷ ಬೇಡ, ಇಷ್ಟವಿದ್ದರೆ ನೀವಿಬ್ಬರೂ ಬೇರೆಯಾಗಿ ಇದ್ದುಬಿಡಬಹುದು—ಎಂದು."

"ಅದಕ್ಕೆ ಆನಂದರಾಯನ ಒಪ್ಪಿಗೆ ಇಲ್ಲವೆ?"

"ಇಷ್ಟು ದಿವಸ ಕೂಡಿ ಇದ್ದು ಈಗ ಬೇರೆಯಾಗಿ ಮನೆ ಹೂಡುವುದು ಅವನಿಗೆ ಇಷ್ಟವಿಲ್ಲ. ಎಷ್ಟಾದರೂ ಅಕ್ಕನ ಮನೆ! ಮೇಲಾಗಿ, ಇವನಿಗೆ ಬರುವ ಸಂಬಳ ಅವನ ಬಟ್ಟೆಬರೆಗೆ ನಾಲುವಂತಿಲ್ಲ...."

"ಆದರೂ ಒಂದು ಸಲ ಪ್ರಯೋಗ ಎಂದು ಮಾಡಿ ನೋಡಬಹುದಲ್ಲ!"

"ನಿಮಗೆ ಹುಚ್ಚು. ಆನಂದ ಒಂದು ವೇಳೆ ಒಪ್ಪಿದರೂ ಆಕೆಯೊಂದು ಒಪ್ಪಬೇಕಲ್ಲ! ಮುಖ್ಯ, ಮನೆಯನ್ನು ನಂಬಿಕೊಂಡು ಇರುವುದೇ ಆಕೆಗೆ ಬೇಕಿಲ್ಲ. ಹಾದಿಗೆಟ್ಟವಳು!...."

ಅದೇ ಮಾತನ್ನು ಬೆಳಸುವುದರಲ್ಲಿ ವಸಂತನಿಗೆ ಯಾವ ಪ್ರಯೋಜನವೂ ಕಾಣಲಿಲ್ಲ. ಮಾತನ್ನು ಬೇರೆ ಕಡೆ ತಿರುಗಿಸಬೇಕೆನ್ನುವಷ್ಟರಲ್ಲಿ ಭಾಸ್ಕರರಾಯನೆ ಮತ್ತೆ ಮೊದಲುಮಾಡಿದ:

"ಮುಖ್ಯ, ಆಕೆಗೆ ತನ್ನ ಸೌಂದರ್ಯದ ಸೊಕ್ಕು! ನಾಲ್ಕು ಜನರನ್ನು

ತಾನು ಕೈಬೆರಳ ಮೇಲೆ ಕುಣಿಸಬಹುದು—ಎಂಬ ಜಂಭ. ಈಗೊಂದು ನಾಲ್ಕು ದಿನ ಈ ಭಕ್ತರು ಎಲ್ಲವನ್ನೂ ಪೂರೈಸಬಹುದು. ಆದರೆ...."

ವಸಂತನಿಗೆ ಸಹಿಸಲಸಾಧ್ಯವಾಯಿತು. ಭಾಸ್ಕರರಾಯ ತನ್ನ ನಾಲಗೆಯನ್ನು ಇಷ್ಟರಮಟ್ಟಿಗೆ ಸಡಲಿಸಬಾರದಾಗಿತ್ತೆನಿಸಿತು. ಮೋಹಿನಿ ಈತನ ವಿರುದ್ಧ ಮಾಡಿದ ಆಪಾದನೆ ಸುಳ್ಳಿರುವುದು ಸಾಧ್ಯವಿಲ್ಲವೆಂದು ವಸಂತನಿಗೆ ಆ ಕ್ಷಣದಲ್ಲಿ ಮನದಟ್ಟಾಯಿತು. ತನ್ನ ಅತೃಪ್ತ ಕಾಮವಾಸನೆಗೆ ಪ್ರತಿಯಾಗಿ ಈಗ ಈತ ಆಕೆಯನ್ನು ಹಾಳುಮಾಡುವ ಯೋಚನೆಯಲ್ಲಿದ್ದನೆಂದೂ ಊಹಿಸಬಹುದಾಗಿತ್ತು. ವಸಂತನೆಂದ:

" ಇಂಥ ಕೆಟ್ಟ ಮಾತು ಆಡಬಾರದು, ಭಾಸ್ಕರರಾವ್. ಏನಾದರೂ, ಆಕೆ ನಿಮಗೆ ತಮ್ಮನ ಹೆಂಡತಿ."

" ನಿಮಗೇನೊ ನನ್ನ ಮಾತಿನಲ್ಲಿ ಅನುಮಾನವೆಂದು ಕಾಣುತ್ತದೆ. ಎಲ್ಲ ಗೊತ್ತಿದ್ದರೆ ಇದಕ್ಕೂ ಕೆಟ್ಟ ಮಾತುಗಳನ್ನು ನೀವೇ ಹೇಳುತ್ತಿದ್ದಿರಿ."

" ನನಗೇನು ಮಾಡುವುದಿದೆ? ಏನೊ, ಆನಂದ ನನಗೆ ಬೇಕಾದವ, ಸುಮ್ಮನೆ ನಾಲ್ಕು ಜನರಲ್ಲಿ ಈ ಅಪವಾದ ಬೇಡ—ಇಬ್ಬರೂ ಸುಖವಾಗಿರಲಿ, ಎಂದೆ."

" ಬೇಡ ಅಂದವರು ಯಾರು ಇವರಿಗೆ?"

" ಯಾರೇನು? ಎಲ್ಲರೂ ಸೇರಿ ಅವರಿಗೆ ಅನುಕೂಲ ಮಾಡಿಕೊಡಬೇಕು. ಬೇಕಾದರೆ ನಾನು ಆನಂದನೊಡನೆ ಮಾತಾಡಿ ಅವನನ್ನು ಒಪ್ಪಿಸುವೆ."

" ಆಯಿತು! ನಮ್ಮೆಲ್ಲರ ಸರತಿ ಮುಗಿದಿದೆ, ಇನ್ನು ನೀವು.. ."

" ಅದನ್ನು ನೋಡೋಣವಂತೆ. ಆನಂದರಾಯರು ಈಗ ಮನೆಗೇಕೆ ಬರುವುದಿಲ್ಲ?"

" ಅವನು ಈ ಸಲದ ಅವರ Departmental ಪರೀಕ್ಷೆಗಾಗಿ ಓದುತ್ತಿದ್ದಾನೆ. ಮನೆಯಲ್ಲಿ ಆಕೆ ಓದಗೊಡುವುದಿಲ್ಲ. ಆದ್ದರಿಂದ ಪರೀಕ್ಷೆ ಮುಗಿಯುವ ವರೆಗೆ ಎಲ್ಲಿಯಾದರೂ ಗೆಳೆಯರ ಹತ್ತಿರವೇ ಇರುತ್ತೇನೆಂದು ದಾದರಿಗೆ ಬಂದುಬಿಟ್ಟಿದ್ದಾನೆ."

" ದಾದರಿನಲ್ಲಿ—ಎಲ್ಲಿ?"

"ಎಲ್ಲಿ—ನಾನೂ ನೋಡಿಲ್ಲ. ಅಲ್ಲಿಯೆ ಎಲ್ಲಿಯೊ ಶಿವಾಜಿ ಪಾರ್ಕಿನ ಹತ್ತಿರವಂತೆ. ಯಾಕೆ? ನಿಮಗೆ ಅವನನ್ನು ನೋಡಬೇಕಾಗಿತ್ತೇನು?"

"ಇಲ್ಲ, ಸುಮ್ಮನೆ ಕೇಳಿದೆ, ಅಷ್ಟೆ!"

"ಟಾಯಿಮ್ ಎಷ್ಟಾಯಿತು ಈಗ?"

"ಎಂಟೂವರೆ!"

"ಓ! ಬೋರಿವಲಿಗೆ ಲೋಕಲ್ ಇರಬೇಕು ಈಗ. ನಾನೀಗ ಹೊರಡುತ್ತೇನೆ."

"ಅಚ್ಛಾ!"

"ಬನ್ನಿರಿ ಯಾವಾಗಲಾದರೊಮ್ಮೆ, ನನ್ನ ರೂಮಿಗೆ."

"ಓ. ಕೆ."

ಎಂದು ವಸಂತ ತಿರುಗಿದ. ಭಾಸ್ಕರನ ವಿಚಿತ್ರ ಸ್ವಭಾವವನ್ನು ನೆನೆಯುತ್ತ ತನ್ನ ಗೆಳೆಯನಲ್ಲಿಗೆ ನಡೆದ. ವಿಚಿತ್ರ ವಿಚಾರವೊಂದು ಸುಳಿದು ಹೋಯಿತು. ಮೋಹಿನಿ ಮತ್ತು ಭಾಸ್ಕರರಾಯ—ಗಿಳಿ ಮತ್ತು ಗಿಡಗ—ಎಂದುಕೊಂಡ.

ಭಾಸ್ಕರರಾಯ ಗಾಡಿಯ ನೂಕಲಾಟದಲ್ಲಿಯೂ ನುಗ್ಗಿ ಒಳ್ಳೆಯ ಸ್ಥಾನವೊಂದನ್ನಾಕ್ರಮಿಸಿ ಕುಳಿತುಕೊಂಡ. ಎದುರಿನ ಬೆಂಚಿನ ಮೇಲೆ ಯಾರೊ ಇಬ್ಬರು ತರುಣಿಯರು ಕುಳಿತುಕೊಂಡಿದ್ದರು. ಆಗಾಗ ಭಾಸ್ಕರರಾಯ ಕದ್ದು ಕದ್ದು ಅವರನ್ನೇ ನೋಡುತ್ತಿದ್ದ. ಕೈಯಲ್ಲಿದ್ದ ಯಾವುದೊ ಒಂದು ಮಾಸಿಕ ಪತ್ರದ ವಾರ್ಷಿಕ ಅಂಕವನ್ನು ತೆರೆದು ನಡುನಡುವೆ ಓದನ್ನು ನಟಿಸುತ್ತಿದ್ದುದು ಅವನಲ್ಲಿ ಉಳಿದ ವಿವೇಕದ ಅವಶೇಷಕ್ಕೆ ಸಾಕ್ಷಿಯಾದಂತಿತ್ತು. ತೆರೆದಿದ್ದ ಪುಟದ ಮೇಲಿನಕಿಂತ ಎದುರಿಗಿದ್ದ ಇಬ್ಬರು ಹೆಣ್ಣುಮಕ್ಕಳ ಮೇಲೆಯೆ ಆತನ ಲಕ್ಷ್ಯ ಹೆಚ್ಚಾಗಿತ್ತೆಂಬುವನ್ನು ತಿಳಿಯಲಿಕ್ಕೆ ಅರ್ಧ ನಿಮಿಷವೂ ಬೇಕಾಗುತ್ತಿರಲಿಲ್ಲ. ಒಂದೆರಡು ಸ್ಟೇಶನ್ನುಗಳು ದಾಟುವುದರಲ್ಲಿ ಆ ತರುಣಿಯರು ಇಳಿದು ಹೋದರು. ಅವರು ಕಣ್ಣುಮರೆಯಾಗುವವರೆಗೂ ಭಾಸ್ಕರರಾಯ ಅವರನ್ನು ಕಣ್ಣಿನಿಂದ ಹಿಂಬಾಲಿಸಿದ.

ಕೈಯಲ್ಲಿಯ ಪತ್ರಿಕೆಯ ಪುಟಗಳನ್ನು ಮತ್ತೆ ಮಗುಚಿದ. ಒಂದೆಡೆ ಅರೆ ಬೆತ್ತಲೆಯಾದ ಹೆಣ್ಣಿನ ಬಣ್ಣದ ಚಿತ್ರವೊಂದಿತ್ತು. ಭಾಸ್ಕರ ಆ ಚಿತ್ರವನ್ನು

ಎಷ್ಟು ಸಲ ನೋಡಿದ್ದನೊ ! ಆದರೂ ಮತ್ತೆ ಮತ್ತೆ ಅದನ್ನೆ ನೆಟ್ಟದೃಷ್ಟಿಯಿಂದ ನೋಡುತ್ತ ಕುಳಿತ. ಎಡಬಲದವರು ಒಂದು ಸಲ ನೋಡಿ ಮೋರೆ ತಿರುವಿದರು. ಭಾಸ್ಕರರಾಯನಿಗೆ ಮಾತ್ರ ಅದನ್ನು ಎಷ್ಟು ನೋಡಿದರೂ ತೃಪ್ತಿಯಾದಂತೆ ಕಾಣುತ್ತಿರಲಿಲ್ಲ. ಆ ಕ್ಷಣಕ್ಕೆ ಅವನ ಒಳಮನಸ್ಸನ್ನು ಹೊಕ್ಕು ನೋಡಿದ್ದರೆ ಅವನ ನೆಟ್ಟನೋಟದ ಅರ್ಥವಾಗಬಹುದಾಗಿತ್ತು. ಆ ಅರ್ಥ ನಗ್ನಮೂರ್ತಿ ಅವನ ಪಾಲಿಗೆ ಯಾರದೊ ಆಗಿರಲಿಲ್ಲ, ಆ ಮೂರ್ತಿಯಲ್ಲಿ ಆತ ಮೋಹಿನಿಯನ್ನು ಕಾಣುತ್ತಿದ್ದ ! ಕಾಮಾಂಧತೆಯ ಕೊಳಚೆಯಲ್ಲಿ ಕೊಳೆಯುತ್ತಿದ್ದ ಆ ಮನಸ್ಸಿನ ಪ್ರತಿಯೊಂದು ಅಣುವಿನಲ್ಲಿಯೂ ತೊಂಬತ್ತು ಪಾಲು ವಿಷಯವಾಸನೆಯೆ ಇರಬಹುದೆಂದೆನಿಸುವಂತಿತ್ತು ! ಭಾಸ್ಕರ ಆ ಚಿತ್ರವನ್ನು ನೋಡಿಯೆ ನೋಡುತ್ತಿದ್ದ. ಆ ಚಿತ್ರವನ್ನು ನೋಡುತ್ತಿದ್ದಾಗ ಮತ್ತೊಂದು ಚಿತ್ರ ಅವನ ಮನಸ್ಸಿನೆದುರು ಒಂದರೆನಿಮಿಷ ಸುಳಿದುಹೋಯಿತು. ಸುಮಾರು ಒಂದು ತಿಂಗಳ ಹಿಂದೆ ಮೋಹಿನಿ ಸ್ನಾನಗೃಹದಲ್ಲಿದ್ದಾಗ—ಸಮಯ ಸಾಧಿಸಿ ಏನೋ ನೆಪ ತೆಗೆದು—ಭಾಸ್ಕರ ಒಳಗೆ ಹೋಗಿದ್ದ !....

ರೈಲು ಅಂಧೇರಿಯನ್ನು ದಾಟಿ ಕತ್ತಲೆಯಲ್ಲಿ ಮುನ್ನುಗ್ಗುತ್ತಿತ್ತು—ಭಾಸ್ಕರನ ಮನಸ್ಸಿನೋಟದಂತೆಯೆ ಮನಸ್ಸು ಮೋಹಿನಿಯ ರೂಪದ ಸುತ್ತ ಸುಳಿದಾಡುತ್ತಿತ್ತು. ಕಳೆದ ಹತ್ತುಹನ್ನೆರಡು ತಿಂಗಳಿಂದ ನೂರು ರೀತಿಯಲ್ಲಿ ಅವಳನ್ನು ಮನವೊಲಿಸುವುದಕ್ಕಾಗಿ ಮಾಡಿದ ಯತ್ನಗಳೆಲ್ಲವೂ ವಿಫಲವಾಗುವುದಕ್ಕೆ ಸಂತಾಪವೊಂದೆಡೆಯಾದರೆ, ಇನ್ನೊಂದೆಡೆ ಆ ಸಂತಾಪ ಸೇಡಿಗಾಗಿ ಸಮಯ ಸಾಧಿಸಲೆಳಸುತ್ತಿತ್ತು. ಒಂದೆರಡು ಸನ್ನಿವೇಶಗಳಲ್ಲಿ ಮೋಹಿನಿ ಭಾಸ್ಕರರಾಯನ ಮೋರೆಯ ಮೇಲೆ ಹೊಡೆದಂತೆ ಮಾತನಾಡಿದ್ದಳಲ್ಲದೆ ಅವನ ಅಂತರಂಗವನ್ನು ಬಯಲಿಗೆಳೆಯುವುದರಲ್ಲಿಯೂ ಮುಂದಾಗಿದ್ದಳು. ತನ್ನ ಸೋಲಿನ ಅವಮಾನವನ್ನು ಸೇಡಿನಿಂದ ಮರೆಯಬೇಕೆಂತಲೆ ಇತ್ತೀಚೆಗೆ ಹೆಚ್ಚಾಗಿ ಆನಂದ-ಮೋಹಿನಿಯರಲ್ಲಿ ವಿಷಮತೆ ಬೆಳೆಯುವಂತೆ ಹೆಚ್ಚಾಗಿ ಯತ್ನಿಸುತ್ತಿದ್ದ. ಆನಂದ ತನ್ನಲ್ಲಿಟ್ಟ ವಿಶ್ವಾಸವನ್ನು ತನ್ನ ನೀಚ ಮನೋವೃತ್ತಿಯ ಸಾಧನೆಗಾಗಿ ಉಪಯೋಗಿಸಲೆಳಸುತ್ತಿದ್ದ. ಮೋಹಿನಿಯ ಸ್ವಭಾವದಲ್ಲಿಯ ಹಟಮಾರಿತನ ತನ್ನ ಅಪಪ್ರಚಾರದ ಕೆಲಸದಲ್ಲಿ ಸಂಪೂರ್ಣವಾಗಿ ಉಪಯೋಗವಾಗುವುದೆಂಬುದನ್ನು ತಿಳಿಯುವಷ್ಟು ಧೂರ್ತತೆ ಭಾಸ್ಕರನಿಗೆ ಸ್ವಭಾವಸಹಜವಾಗಿತ್ತು.

ವಸಂತನೆದುರು ಹೇಳಿದಂತೆ ಭಾಸ್ಕರ ಬೇರೆಯಾದ ಕೋಣೆಯನ್ನು ಬಾಡಿಗೆಗೆ ಹಿಡಿದದ್ದು ನಿಜವಾದರೂ 'ಇತ್ತೀಚೆಗೆ' ಎಂದು ಹೇಳಿದ್ದು ಮಾತ್ರ ನಿಜವಾಗಿರಲಿಲ್ಲ. ಆನಂದನ ಮದುವೆಯಾದ ಒಂದೆರಡು ತಿಂಗಳಲ್ಲಿಯೆ, ಭಾಸ್ಕರನ ಹೆಂಡತಿ, ಅವನ ಸ್ವೈರವೃತ್ತಿಯ ಫಲವಾಗಿ ಅಂಟಿದ ಬೇನೆಯಿಂದ ಬಳಲಿ ಬಳಲಿ, ಯೋಗ್ಯ ಶುಶ್ರೂಷೆ ಇಲ್ಲದೆ ಪ್ರಾಣ ನೀಗಿದ್ದಳು. ಹೆಂಡತಿ ಕೈಬಿಡುವುದು ಖಂಡಿತವೆಂದೆನಿಸಿದಾಗಿನಿಂದ ತನಗೆ ಅನುಕೂಲವಾಗುವಂತೆ ಭಾಸ್ಕರ ಕೋಣೆಯನ್ನು ಬೇರೆಯಾಗಿ ಬಾಡಿಗೆಗೆ ಹಿಡಿದಿದ್ದ. ಇತ್ತೀಚೆ, ಹೆಚ್ಚಾಗಿ ಆತ ಅಲ್ಲಿಯೆ ಇರುತ್ತಿದ್ದರೂ ಆಗಾಗ ಅಕ್ಕನ ಮನೆಗೆ ಬಂದುಹೋಗುತ್ತಿದ್ದ. ಒಂದೆರಡು ಸಂದರ್ಭಗಳಲ್ಲಿಯ ಆತನ ನಡತೆ ಅವನ ಅಕ್ಕನಂತೆ ಅಕ್ಕನ ಗಂಡನಾದ ನಾರಾಯಣರಾಯರಿಗೂ ಸರಿಬಾರದಿದ್ದುದರಿಂದಲೆ ಆತ ತನ್ನ ಊಟದ ವ್ಯವಸ್ಥೆಯನ್ನು ಬೇರೆಯಾಗಿ ಮಾಡಿಕೊಳ್ಳಬೇಕಾಗಿ ಬಂದಿತ್ತು. ಒಟ್ಟಿನಲ್ಲಿ, ಭಾಸ್ಕರ ಮನೆಯಲ್ಲಿ ಹೆಚ್ಚುಕಡಿಮೆ ಯಾರಿಗೂ ಬೇಕಾದವನಾಗಿರಲಿಲ್ಲ. ಆನಂದ ಮಾತ್ರ ಇದುವರೆಗೆ ಕೆಲವು ವಿಷಯಗಳನ್ನು ಕೇಳಿದ್ದರೂ ಬಹಿರಂಗವಾಗಿ ಹಿರಿಯ ಅಣ್ಣನ ವಿಷಯದಲ್ಲಿ ಯಾವ ಅವಿಶ್ವಾಸವನ್ನೂ ತೋರಿಸುತ್ತಿರಲಿಲ್ಲ. ಇದು ಭಾಸ್ಕರನಿಗೆ ಒಂದು ಅನುಕೂಲವೇ ಆಗುತ್ತಿತ್ತು.

ಬೋರಿವಲಿಯಲ್ಲಿ ಗಾಡಿಯಿಂದಿಳಿಯುತ್ತಲೆ ಭಾಸ್ಕರನ ವಿಚಾರ ವಸಂತನತ್ತ ತಿರುಗಿತು. ವಸಂತನ ವಿಚಾರ ಬಂದ ಕೂಡಲೆ ಮೋಹಿನಿಯ ನೆನಹು ಇಮ್ಮಡಿಸಿ ನೇರವಾಗಿ ತನ್ನ ಕೋಣೆಗೆ ಹೋಗದೆ ಅಕ್ಕನ ಮನೆಯವರೆಗೂ ಹೋಗಿ, ಅನಂತರ ತನ್ನ ಕೋಣೆಗೆ ಹೋಗತಕ್ಕದ್ದೆಂದು ನಿರ್ಧಾರ ಮಾಡಿ, ದಾರಿ ಬದಲಾಯಿಸಿದ. ವಸಂತನ ಮಾತಿನಲ್ಲಿಯ ಸಹಾನುಭೂತಿ ಭಾಸ್ಕರನಿಗೆ ಹಿಡಿಸಿರಲಿಲ್ಲ. ಅಲ್ಲದೆ ತನ್ನ ಮನೋವೃತ್ತಿಗನುಗುಣವಾಗಿ ಒಂದು ಕ್ಷಣ ವಸಂತನ ಸಹಾನುಭೂತಿಯ ಮಾತುಗಳಿಗೆ ವಿಪರೀತ ಅರ್ಥವನ್ನು ಕಲ್ಪಿಸಿಕೊಂಡಿದ್ದ. ಆದರೆ ಅದು ಕ್ಷಣಮಾತ್ರವೆ. ಮನೆಯವರೆಲ್ಲರೂ ನೇರಿ ಮೋಹಿನಿಗೆ ಕೆಟ್ಟ ಹೆಸರನ್ನು ಕೊಟ್ಟಿದ್ದಾರೆಂಬ ವಸಂತನ ಅಭಿಪ್ರಾಯವನ್ನು ಸಹಜವಾಗಿಯೆ ಆತ ನಿರಾಕರಿಸಿದನಲ್ಲದೆ ಹಾಗೆ ಹೇಳಲಿಕ್ಕೆ ವಸಂತನಿಗೆ ಯಾವ ಅಧಿಕಾರ, ಏನು ಸಮರ್ಥನೆ ಎಂದು ಕೇಳಿಕೊಂಡು—ಅವನ ವಿಷಯದಲ್ಲಿ ತುಸು ಕುಪಿತನೂ ಆಗಿದ್ದ. ಆದರೆ ವಸಂತ ಎಷ್ಟಾದರೂ ಪರಕೀಯ. ಅವನೇನೆಂದ

ರೇನಾಗಬೇಕಾಗಿದೆ? ಎಂಬ ವಿಚಾರದಿಂದ ಸಮಾಧಾನವನ್ನು ತಂದುಕೊಂಡಿದ್ದ.

ಭಾಸ್ಕರ ಅಕ್ಕನ ಮನೆಯನ್ನು ಸೇರಿದಾಗ ನಾರಾಯಣರಾಯರು ಎದುರಿಗಿನ ಕೋಣೆಯಲ್ಲಿ ಹಾಸಿಗೆಗೆ ಒರಗಿಕೊಂಡು ವೃತ್ತಪತ್ರವನ್ನು ತಿರುವಿ ಹಾಕುತ್ತಿದ್ದರು. ಆದರೆ ಮನೆಯೊಳಗೆ ಹೋದ ಕೂಡಲೆ ಭಾಸ್ಕರನನ್ನು ಎದುರಿಸಿದ ಶಾಂತತೆ ಅವನನ್ನು ಯಾವುದೊ ಸಂಶಯಕ್ಕೀಡುಮಾಡಿತು. ನಾರಾಯಣರಾಯರ ಮುಖಚರ್ಯೆಯಾದರೂ ಆ ಸಂಶಯಕ್ಕೆ ಪುಷ್ಟಿ ಕೊಡುವಂಥದೇ ಇತ್ತು. ಮನೆಯಲ್ಲಿ ಇಂಥ ಪರಿಸ್ಥಿತಿ ಭಾಸ್ಕರನಿಗೆ ಹೊಸದಲ್ಲವೆನಿಸಿದ್ದರಿಂದ ಆತ ನೇರವಾಗಿ ಅಡಿಗೆಯ ಮನೆಗೆ ಹೊರಟ. ನಡುಮನೆಯಲ್ಲಿ ದೀಪದ ಬೆಳಕನ್ನು ತಪ್ಪಿಸಿ ಒಂದೆಡೆ ಮೋಹಿನಿ ಗೋಡೆಗೆ ಆತುಕೊಂಡು ಕುಳಿತಿದ್ದಳು. ಅಕ್ಕ—ಊಟ, ಉಡಿಗೆ ಮುಗಿದನಂತರ ಕೆಲಸಗಳಲ್ಲಿದ್ದಂತೆ ಕಾಣುತ್ತಿತ್ತು. ಹೊರಗಿನಿಂದ ನಾರಾಯಣರಾಯರ ಕರೆ ಬಂದಿತು:

"ಭಾಸ್ಕರ್...."

"ಬಂದೆ....ಏನು?"

"ಆನಂದ ಸಿಕ್ಕಿದ್ದನೇನು ಇವತ್ತು?"

"ಇಲ್ಲ, ಮೊನ್ನೆ ಭೆಟ್ಟಿಯಾಗಿದ್ದ. ಯಾಕೆ?"

"ಅವನನ್ನು ಈಗಿಂದೀಗ ಇಲ್ಲಿಗೆ ಕರೆದುಕೊಂಡು ಬರಬೇಕಾಗಿದೆ. ನಾನೇ ಇನ್ನು ಹೊರಡಬೇಕೆಂದಿದ್ದೆ...."

"ಯಾಕೆ—ಏನಾಯಿತು?"

"ಆಗುವುದೇನು ಮಣ್ಣು! ನನಗೆ ಸಾಕಾಗಿಹೋಗಿದೆ. ಆತ ಈಗ ಸಧ್ಯ ಬಂದು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗಲಿ. ನನಗೆ ಇನ್ನುಮೇಲೆ ಸಾಧ್ಯವಿಲ್ಲ."

"ಏನು? ಆದದ್ದಾದರೂ ಏನು?"

"ಮುಂಜಾನೆಯಿಂದ ಸಂಜೆಯ ತನಕ ಕೆಲಸ ಮಾಡಿ ಬರಬೇಕು—ಮನೆಗೆ ಬಂದಮೇಲಾದರೂ ಹಾಯಾಗಿ ಸುಮ್ಮನೆ ಕುಳಿತುಕೊಳ್ಳೋಣವೆಂದರೆ—ಇವರ ಕಡಿದಾಟ; ನನಗೆ ಇನ್ನುಮೇಲೆ ತಡೆಯುವುದು ಸಾಧ್ಯವೆ ಇಲ್ಲ. ಇನ್ನು, ಇಲ್ಲಿ ಅವರಾದರೂ ಇರಬೇಕು, ನಾವಾದರೂ ಇರಬೇಕು...."

"ಏನಾಯಿತು? ಆದದ್ದನ್ನಾದರೂ ಹೇಳಬಾರದೆ?"

ಅಷ್ಟರಲ್ಲಿ ಬಾಗಿಲ ಬಳಿಯಲ್ಲಿ ಬಂದು ನಿಂತಿದ್ದ ಅಕ್ಕ ನಡುವೆಯೆ ಬಾಯಿ ಹಾಕಿದಳು :

" ನಿನಗೆ ಗೊತ್ತೇ ಇದೆಯಲ್ಲ. ಆಕೆಯನ್ನು ಮಾತಾಡಿಸುವುದೆ ಮೂರ್ಖ ತನ. ಇಂದು ಸಾಯಂಕಾಲ ಏಳು ಗಂಟೆಗೆ ಮನೆಗೆ ಬಂದಳು! ' ಇಂದು ಶನಿವಾರ. ನಿನ್ನ ಕಾಲೇಜ್ ಬಿಟ್ಟಮೇಲೆ ಮನೆಗೆ ಬರಲಿಕ್ಕೆ ಇಷ್ಟೇಕೆ ತಡವಾ ಯಿತು ? ' ಎಂದು ಸಹಜವಾಗಿ ಕೇಳಿದೆ. ಅದಕ್ಕೆ ಒಂದು ಸಾವಿರ ಮಾತಾಡಿ ದಳು ! "

" ನೀನು ಯಾತಕ್ಕೆ ಕೇಳಲಿಕ್ಕೆ ಹೋಗಿದ್ದಿ ? " ಎಂದು ನಾರಾಯಣ ರಾಯರು ಹೆಂಡತಿಯ ಮೇಲೆ ಹರಿಹಾಯ್ದರು. ಕೇಳಿದ್ದರಲ್ಲಿ ಯಾವ ತಪ್ಪಿರ ಲಿಲ್ಲವೆಂಬುವನ್ನು ಅವರು ತಿಳಿದಿದ್ದರೂ ಕೇಳಿಯಾದಮೇಲೆ ಬೆಳೆದ ಸನ್ನಿವೇಶ ದಿಂದ ಸಂತಪ್ತರಾಗಿದ್ದರೆಂದೇ ಈಗ ಅವರು ಹೆಂಡತಿಯನ್ನು ಗದರಿಸುವುದರ ಲ್ಲಿದ್ದರು.

" ಹೌದು. ನನ್ನದೇ ತಪ್ಪು. ನಾನೇ ಕೇಳಬಾರದಾಗಿತ್ತು. ಮುಂಜಾನೆ ಯಿಂದ ಸಂಜೆಯವರೆಗೆ ಈಕೆ ಊರಲ್ಲಿ ಮೆರೆದು ಬರಬೇಕು—ನಾನಿಲ್ಲಿ ಮನೆ ಯಲ್ಲಿ ದುಡಿದು ಸಾಯಬೇಕು. ಮೇಲೆ, ತಡಮಾಡಿ ಬಂದರೆ, ಯಾಕೆ ಎಂದೂ ಕೇಳಬಾರದು. ಮುಖ್ಯ, ನನ್ನದೇ ಅನ್ಯಾಯ ಬಂದಿದೆ, ನೀವೇನು ಮಾಡೀರಿ ? "

ಮೋಹಿನಿ ಒಳಗಿನಿಂದ ಎಲ್ಲವನ್ನೂ ಕೇಳುತ್ತಿದ್ದಳು. ಆದರೆ ಪಿಟ್ಟೆನ್ನ ಲಿಲ್ಲ. ' ನೋಡೋಣ, ಇವರೆಲ್ಲರೂ ಮಾತಾಡಿ ಏನು ಮಾಡುವರು ' ಎಂದೆನ್ನು ತ್ತಿತ್ತು ಅವಳ ಮನಸ್ಸು. ಇಂಥ ಸನ್ನಿವೇಶವನ್ನು ಆಕೆಗೆ ಎದುರಿಸಬೇಕಾದುದು ಇದೇನೂ ಮೊದಲ ಸಲವಾಗಿರಲಿಲ್ಲ.

" ಎಲ್ಲಿ ಹೋಗಿದ್ದಿ ? ಎಂದು ಕೇಳಿದರೆ, ' ಹೋಗಿದ್ದೆ, ಹೀಗೆಯೆ ಒಬ್ಬರ ಜೊತೆಗೆ! ' ಎಂದು ಹೇಳಿದಳು. ಏನಾದರೂ ನಾಚಿಕೆ ಬೇಡವೆ ಜೀವಕ್ಕೆ ? "

ಎಂದಾಗ ಮಾತ್ರ ಮೋಹಿನಿಗೆ ತಡೆಯಲಾಗಲಿಲ್ಲ. ಎಲ್ಲರಿಗೂ ಕೇಳು ವಂತೆ ಒಳಗಿನಿಂದಲೇ ಹೇಳಿದಳು :

" ಹೌದು. ಹಾಗೆಯೆ ಹೇಳಿದೆ. ನಿಮಗೆ ಯಾವ ಉತ್ತರ ಬೇಕಾಗಿತ್ತು ಅದನ್ನೇ ಹೇಳಿದೆ. ನಿಜವಿದ್ದುದನ್ನು ಹೇಳಿದರೆ ನಿಮಗೆ ಅದೆಲ್ಲ ಸುಳ್ಳಾಗಿ ಕಾಣುತ್ತದೆ."

" ಹೌದು, ಹೌದು—ಮಹಾ ಸತ್ಯವಂತೆಯೆ ನೀನು. ಎಂದೂ ಸುಳ್ಳು ಹೇಳಿದವಳಲ್ಲ" ಎಂದು ನಾದಿನಿ ನೆಗೆದುಬಂದಳು. ನಾರಾಯಣರಾಯರಿಗೆ ಪುನರಾವೃತ್ತಿ ಬೇಕಾಗಿರಲಿಲ್ಲ. ಅವರೆಂದರು :

" ಭಾಸ್ಕರಾ, ಇದು ಬಗೆಹರಿಯುವುದಿಲ್ಲ. ಸಾಧ್ಯವಿದ್ದಷ್ಟರಮಟ್ಟಿಗೂ ನಾನು ತಡೆದೆ. ದಿನಬೆಳಗೂ ಇದು ಮನೆಯಲ್ಲಿ ಒಳ್ಳೆಯದಲ್ಲ. ನೀನು ಆನಂದ ನನ್ನು ಕರೆದುಕೊಂಡು ಬಾ."

" ಈಗ ಹತ್ತು ಹೊಡೆದುಹೋಯಿತು........" ಎಂದು ಭಾಸ್ಕರ ಅನುಮಾನಿಸಿದ.

" ಇಂದು ಶನಿವಾರ, ಒಂದು ವೇಳೆ ಆತನೇ ಬಂದರೂ ಬರಬಹುದು. ಹೋದ ಶನಿವಾರ ಸಂಜೆಗೆ ಬಂದಿದ್ದ...."

ಎಂದು ನಾದಿನಿ ಹೇಳಿದಾಗ ಮೋಹಿನಿಯ ಹೃದಯದಲ್ಲಿ ಮಿಂಚು ಮಿಂಚಿಹೋದಂತಾಯಿತು. ಆನಂದ ಬರುವನೆಂಬ ಆಸೆಯಿಂದಲ್ಲ, ಆತುರ ದಿಂದಲೂ ಅಲ್ಲ; ಬಂದರೆ—ಆಗಲೇ ಮುಗಿದುಹೋದ ಹಗರಣ ಮತ್ತೂ ವಿಕೋಪಕ್ಕೆ ಹೋಗಬಹುದು—ಎಂಬ ಹೆದರಿಕೆಯಿಂದ. ನಾದಿನಿಯ ಬಾಯಿ ನಡೆದೇ ಇತ್ತು :

" ಮೂರೂಸಂಜೆ. ಮನೆಯಲ್ಲಿ ನೀರಿನ ಒಂದು ಹನಿಯಿಲ್ಲ. ಒಂದೆರಡು ಬಿಂದಿಗೆ ನೀರನ್ನಾದರೂ ತೆಗೆದುಕೊಂಡು ಬಾರೆ, ಎಂದೆ. ಕೂತವಳು ಜಾಗ ಬಿಟ್ಟು ಕದಲಲಿಲ್ಲ."

" ಸುಳ್ಳು ಮಾತಾಡಬೇಡಿರಿ, ನಾದಿನಿ. ನೀವು ಹೇಳುವ ಮುಂಚೆಯೆ ನಾನು ಬಿಂದಿಗೆ ತೆಗೆದುಕೊಂಡು ನೀರಿಗೆ ಹೊರಟಾಗ ಸರಪರನೆ ಬಂದು ಬಿಂದಿಗೆ ಕಸಿದುಕೊಂಡು, 'ನಿನ್ನ ನೀರೂ ಬೇಡ, ನಿನ್ನ ಕೆಲಸವೂ ಬೇಡ' ಎಂದು ಕವಕ್ಕನೆ ತಿವಿದು ಸಿಡಿದುಹೋದಿರಿ. ಆಣೆಯಿಟ್ಟು ಹೇಳಿರಿ...." ಎಂದಳು ಮೋಹಿನಿ ಒಳಗಿನಿಂದ.

" ಕೇಳಿದೆಯಾ? ಇಂಥ ಮಾತೇ ಯಾವಾಗಲೂ. ಸಾಕಾಗಿದೆ, ಭಾಸ್ಕರಾ. ಅವಳಿಗೆ ನಾವು ಹೇಳುವುದೂ ಬೇಡ, ಅವಳಿಂದ ಅನ್ನಿಸಿಕೊಳ್ಳುವುದೂ ಬೇಡ. ಗಂಡನೇನೊ ಹೆಂಡತಿಯೇನೊ, ಬೇಕಾದ್ದು ಮಾಡಿಕೊಳ್ಳಲಿ."

" ಊಟಕ್ಕೆ ಏಳು ಎಂದರೆ—ಎಲ್ಲರ ಊಟವಾದರೂ ಬರಲಿಲ್ಲ. ಹಸಿವೆ

ಇಲ್ಲ ಎಂದು ಹೇಳಿದಳು. ನಾನಾದರೂ ಎಷ್ಟೊತ್ತು ಕಾಯಲಿ ಎಂದು ಬೇಸತ್ತು ಊಟ ಮಾಡಿದೆ. ಎಲೆ ಬಡಿಸಿ ಊಟಕ್ಕೆ ಕರೆದರೆ...." ಎಂದು ನಾದಿನಿ ಮತ್ತೆ ಮುಂದುವರಿಸಿದಳು.

"ಇಷ್ಟು ಅನ್ನಿಸಿಕೊಂಡು ಊಟ ಮಾಡುವುದಕ್ಕಿಂತ ಉಪವಾಸವಿದ್ದರೆ ಏನಾಗಬೇಕಾಗಿದೆ? ನನಗೆ ಹಾಕಬೇಕಾದ ಊಟ ರಾಕ್ಷಸಿಗೆ ಬಲಿಯಂತೆ...." ಎಂದು ಮೋಹಿನಿ.

"ಸಾಕುಮಾಡಿನ್ನು ನಿನ್ನ ಮಾತು. ಬೇಕಾದಷ್ಟಾಯಿತು" ಎಂದು ನಾರಾಯಣರಾಯರು ತೀರ ಬೇಸರದಿಂದ ಉಸಿರಿ, ಎದ್ದು ಹೊರಗಡೆ ಗ್ಯಾಲರಿಯ ಕಡೆಗೆ ಹೋದರು. ನಾದಿನಿ ಮೋಹಿನಿಯನ್ನೇ ದುರದುರನೆ ನೋಡುತ್ತ ಒಳಗಡೆ ನಿಧಾನವಾಗಿ ನಾಗಿದಳು. ಏನು ಮಾಡಬೇಕೆಂಬುದು ಒಂದೆರಡು ನಿಮಿಷ ಭಾಸ್ಕರರಾಯನಿಗೆ ತಿಳಿಯಲಿಲ್ಲ. ಅನುಮಾನಿಸುತ್ತಲೆ ಆತನೂ ಗ್ಯಾಲರಿಗೆ ಬಂದ. ಆತ ಹೊರಡುವ ವಿಚಾರದಲ್ಲಿದ್ದುದನ್ನು ನೋಡಿ ನಾರಾಯಣ ರಾಯರೆಂದರು :

"ಏನು ಮಾಡುವಿ, ಭಾಸ್ಕರಾ ?"

ಸಮಾಧಾನವಡಿಸುವ ದನಿಯಲ್ಲಿ ಭಾಸ್ಕರ ಹೇಳಿದ :

"ನೋಡೋಣ. ಒಂದು ವೇಳೆ ಅವನೇ ಬಂದರೂ ಬರಬಹುದು. ಈಗಿನ್ನು ಹೋಗಲಿಕ್ಕೂ ತೀರ ರಾತ್ರಿಯಾಗಿ ಹೋಯಿತು. ಒಂದು ವೇಳೆ ಆತ ಬರದಿದ್ದರೆ ನಾಳೆ ಬೆಳಗ್ಗೆ ಕರೆದುಕೊಂಡು ಬರುವೆ"

ಎನ್ನುವುದಕ್ಕೂ ಕಟ್ಟೆಗೆಯ ಪಾವಟಿಗೆಗಳ ಮೇಲೆ ಹೆಜ್ಜೆಯ ಸಪ್ಪಳ ಕೇಳಬರುವುದಕ್ಕೂ ಸರಿಹೋಯಿತು. ಭಾಸ್ಕರ ಉಸಿರಿದ : "ಯಾರೋ ಬಂದರು. ಅವನೇ ಎಂದು ಕಾಣುತ್ತದೆ." ಹೌದು, ಆನಂದ ಬಂದೇಬಿಟ್ಟಿದ್ದ.

ಪಾವಟಿಗೆಗಳ ಮೇಲಿನ ಸಪ್ಪಳ ಮೋಹಿನಿಯ ಕಿವಿಗಳನ್ನೂ ಮುಟ್ಟಿತ್ತು. ಯಾರೋ ಅವಳ ಹೃದಯವನ್ನೇ ತುಳಿಯುತ್ತ ಮೇಲೇರಿ ಬರುತ್ತಿರುವಂತೆ ಭಾಸವಾಗಿತ್ತು. ಎದೆ ಬಡಿದುಕೊಳ್ಳುತ್ತಿತ್ತು. ಭೀತಿ, ಆತ್ಮಾನುಕಂಪ ಒಂದೆಡೆ ಅವಳ ಶ್ವಾಸವನ್ನು ಜೋರಾಗಿಸುತ್ತಿದ್ದರೆ ಮೋಹಿನಿ ಅವೆರಡನ್ನೂ ಬದಿಗಿರಿಸಿ, ಬಂದುದನ್ನು ಧೈರ್ಯವಾಗಿ ಎದುರಿಸಲೇಬೇಕೆಂಬ ನಿರ್ಧಾರವನ್ನು ಗಟ್ಟಿಯಾಗಿಸುವ ಯತ್ನದಲ್ಲಿದ್ದಳು. ಎಲ್ಲವೂ ಸರಿಯಾಗಿದ್ದರೆ, ಗಂಡ ಮನೆಗೆ ಬಂದರೆ

ಯಾವ ಕಾತರತೆ ತುಂಬಿದ ಉತ್ಸಾಹದಿಂದ ಅವನನ್ನು ಬರಮಾಡಿಕೊಳ್ಳಬಹುದಿತ್ತೆಂಬ ಕನಿಕರದ ವಿಚಾರವೂ ಸುಳಿದು ಅವಳ ಹೃದಯವನ್ನು ಹಿಂಡುತ್ತಿದ್ದಿತು.

ಪಾವಟಿಗೆಗಳನ್ನೇರುವಾಗಿನ ಉತ್ಸಾಹ ಬಾಗಿಲೆದುರು ನಿಂತಿದ್ದ ಭಾಸ್ಕರ-ನಾರಾಯಣರಾಯರನ್ನು ನೋಡಿದಾಗ ಆನಂದನಲ್ಲಿ ಉಳಿಯಲಿಲ್ಲ. ತನ್ನ ಬರವನ್ನೆ ಇದಿರುನೋಡುತ್ತ ನಿಂತವರಂತಿದ್ದವರನ್ನು ನೋಡಿ ಏನಾದರೂ ವಿಶೇಷ ನಡೆದುಹೋಗಿರಲೇಬೇಕೆಂದು ಭಾವಿಸಿದ. ಆನಂದ ಮೋಹಿನಿಯನ್ನು ಒಂದು ವಾರ ನೋಡಿಯೂ ಇರಲಿಲ್ಲ.

ಮೋಹಿನಿಯನ್ನು ಕುರಿತು ಯೋಚಿಸುತ್ತಿರುವಾಗಲೆಲ್ಲ ಆನಂದನ ಮನಸ್ಸಿನಲ್ಲಿ ಒಂದು ಇಬ್ಬಣ ಕಾಳಗವನ್ನೆಸಗುತ್ತಿತ್ತು. ಅವನಲ್ಲಿಯ ಹೆಣ್ಣು ಹೃದಯ ಅವಳ ಎಲ್ಲ ದೋಷಗಳನ್ನೂ ಮರೆಮಾಡಿ ಅವಳ ಸಾನ್ನಿಧ್ಯವನ್ನು ಬಯಸುವಂತೆ ಮಾಡುತ್ತಿತ್ತು. ಆದರೆ ಸಂಪೂರ್ಣ ಸ್ವಾಧಿಪತ್ಯವನ್ನು ಬೇಡುವ ಗಂಡನೆಂಬ ಅಭಿಮಾನ--ಅವಳನ್ನು ಮನವೊಲಿಸುವುದೆಂದರೆ ಆತ್ಮಗೌರವಕ್ಕೆ ಕುಂದು ಎಂದು ಹೇಳಿ ಹೃದಯವನ್ನು ಹಿಮ್ಮೆಟ್ಟುತ್ತಿತ್ತು. ಎಷ್ಟೋ ಬಾರಿ ಹೃದಯ ಗೆಲ್ಲುವಂತಾಗಿ ಆನಂದ ಮೋಹಿನಿಯನ್ನು ತನ್ನ ಹತ್ತಿರ ತಂದುಕೊಳ್ಳಲೆತ್ನಿಸಿದ್ದನೇನೊ ನಿಜ. ಆದರೆ ಕಳೆದ ಸುಮಾರು ಆರು ತಿಂಗಳಲ್ಲಿ ಮೋಹಿನಿ ಆತನನ್ನು ತನ್ನ ಹತ್ತಿರ ಕೂಡ ಸುಳಿಯಗೊಟ್ಟಿರಲಿಲ್ಲ. ಅವಳ ಸಹವಾಸವಿಲ್ಲದುದಕ್ಕಾಗಿ ಒಂದೊಂದು ಕ್ಷಣ ಆನಂದನ ಮನಸ್ಸು ಕಠಿಣಗೊಂಡು ಕಠೋರ ವರ್ತನೆಯನ್ನು ಕುರಿತು ಚಿಂತಿಸುತ್ತಿತ್ತಾದರೆ ಮರುಕ್ಷಣದಲ್ಲಿಯೆ ಮೆತ್ತಗಾಗಿ 'ಎಷ್ಟಾದರೂ ಹೆಣ್ಣು ಜೀವ ಅದು. ಚೆಲುವಿನ ಕಣಿ ಅದು. ಮೃದುವಾದುದನ್ನು ಮೃದುವಾಗಿಯೆ ವಶಪಡಿಸಿಕೊಳ್ಳಬೇಕು' ಎಂದು ಸಮಾಧಾನದ ಮಾತು ಹೇಳುತ್ತಿತ್ತು. ಹೀಗೆ ಆನಂದ ಮೋಹಿನಿಯ ಮೇಲೆ ಕೈ ಎತ್ತಬಹುದೂ ಇತ್ತು, ಕರುಳನ್ನು ತಿದ್ದಿ ನೇವರಿಸಬಹುದೂ ಇತ್ತು. ಇಂದು ಅವನನ್ನು ಇಷ್ಟು ತಡ ಮಾಡಿ ಬೋರಿವಲಿಗೆ ಕರೆತಂದ ಭಾವನೆ ಎರಡನೆಯದು. ಆದರೆ ಇದಿರು ಕಾಯುತ್ತಿದ್ದ ಅಣ್ಣನನ್ನೂ ಅಕ್ಕನ ಗಂಡನನ್ನೂ ನೋಡಿದಾಗ ಎದೆ ತುಸು ಬಿರುಸಾಯಿತು. ತನಗಾಗಿ ನಿರಾಶೆ ಬಾಗಿಲಲ್ಲಿಯೇ ಕಾಯಬೇಕಾಗಿರಲಿಲ್ಲ, ಎನಿಸಿತು.

ಆನಂದ ಒಳಗೆ ಹೋದ ಕೂಡಲೆ ಭಾಸ್ಕರ-ನಾರಾಯಣರಾಯರಿಬ್ಬರೂ

ಅವನನ್ನು ಹಿಂಬಾಲಿಸಿದರು. ನಾರಾಯಣರಾಯರ ಮುಖ ಉದ್ವಿಗ್ನತೆಯ ಮೂರ್ತಿಯಾಗಿತ್ತು. ಕೋಟನ್ನು ಗೂಟಕ್ಕೆ ತಗಲಿಸಿ ಅಡಿಗೆಮನೆಯವರೆಗೂ ಸುಳಿದುಬಂದ. ಅಕ್ಕ ಹಾಸಿಗೆ ಹಾಸುತ್ತಿದ್ದಳು. ಮೋಹಿನಿ ಕುಳಿತಲ್ಲಿಯೆ ಕುಳಿತಿದ್ದಳು. ಐದು ನಿಮಿಷವಾದರೂ ಯಾರೂ ಏನೂ ಮಾತನಾಡದಿದ್ದುದನ್ನು ನೋಡಿ ಆನಂದನಿಗೆ ಸಂಕೋಚವೆನಿಸತೊಡಗಿತು. ಅರ್ಧ ಹುಸಿನಗೆಯಲ್ಲಿ, ಅರ್ಧ ಹೆದರಿಕೆಯಲ್ಲಿ ಅಕ್ಕನನ್ನುದ್ದೇಶಿಸಿ, ಗಾಳಿಯಲ್ಲಿ ಪ್ರಶ್ನೆಯನ್ನು ತೂರಿದ.

"ಯಾಕೆ, ಏನು ಎಲ್ಲರೂ ಹೀಗೇಕೆ ಸುಮ್ಮನೆ ಕುಳಿತುಬಿಟ್ಟದ್ದೀರಿ ?" ಎಂದ. ಯಾರಿಂದಲೂ ಉತ್ತರ ಬರಲಿಲ್ಲ. ನಾರಾಯಣರಾಯರು ಕೋಣೆಯಲ್ಲಿ ಹೆಜ್ಜೆಗಳನ್ನೆಣಿಸುತ್ತಿದ್ದರು. ಭಾಸ್ಕರ ಆನಂದನಿಂದ ಮೋರೆ ತಪ್ಪಿಸುತ್ತಿದ್ದ. ಆನಂದ ನಡುಮನೆಗೆ ಬಂದು ಮತ್ತೆ ಕೇಳಿದ: "ಏನಕ್ಕ, ಆಗಿದೆ ಏನು ?"

"ಆಕೆಯನ್ನೇ ಕೇಳಿಕೊಳ್ಳಪ್ಪ !"

"ಏನಾಯ್ತು ?"

ಅಕ್ಕ ಮಾತನಾಡಲಿಲ್ಲ. ಆನಂದ ಮೋಹಿನಿಯನ್ನು ನೋಡಿದ. ಬಿಮ್ಮನೆ ಬಿಗಿದು ಗೋಡೆಗಾತುಕೊಂಡು ಕುಳಿತವಳು ಮಿಸುಕಲಿಲ್ಲ. ಸರಕ್ಕನೆ ಹೊರಗೆ ಬಂದು ಭಾಸ್ಕರನನ್ನುದ್ದೇಶಿಸಿ ಅಂದ:

"ಏನು ಭಾಸ್ಕರಾ, ಏನಿದು ? ನಡೆದದ್ದಾದರೂ ಏನು ?"

ಭಾಸ್ಕರನಿಗೆ ಮಾತು ಹೇಗೆ ಮೊದಲುಮಾಡಬೇಕು ತಿಳಿಯಲಿಲ್ಲ. ನಾರಾಯಣರಾಯರು ತಾವು ಮಾತನಾಡಲಿಕ್ಕೆ ಸಮಯವನ್ನು ಕಾಯುತ್ತಿದ್ದ ರೇನೋ. ಅವರು ಹೆಜ್ಜೆಹಾಕುವುದನ್ನು ನಿಲ್ಲಿಸಿ ಅಂದರು:

"ಆನಂದಾ, ಒಂದೇ ಮಾತಿನಲ್ಲಿ ಹೇಳಿ ಮುಗಿಸುತ್ತೇನೆ. ಇಲ್ಲಿಯ ವರೆಗೆ ಸಹನೆ ಇತ್ತು. ನಡಸಿಕೊಂಡು ಬಂದೆ. ನನಗೆ ಇನ್ನು ಮುಂದೆ ಶಕ್ಯವಿಲ್ಲ. ಪ್ರತಿನಿತ್ಯವೂ ಒಂದೇ ಹಾಡಾದರೆ ಮನೆ ಮಾಡಿಕೊಂಡು ಇರಬೇಕೇತಕ್ಕೆ ? ನನ್ನ ಮಾತು ನಿನಗೆ ಕೆಡಕೆನಿಸಬಹುದು. ಇನ್ನುಮೇಲೆ, ಈ ಮನೆಯಲ್ಲಿ, ನೀನು ಮತ್ತು ನಿನ್ನ ಹೆಂಡತಿಯಾದರೂ ಇರಬೇಕು, ಇಲ್ಲವಾದರೆ ನಾವಾದರೂ ಇರಬೇಕು...."

"ಅಲ್ಲ. ಆದದ್ದಾದರೂ ಏನು, ಮಾವಯ್ಯ, ಅದನ್ನಾದರೂ ಹೇಳ ಬಾರದೆ ?"

"ನಾನೇನೂ ಹೇಳುವುದಿಲ್ಲ. ಎಷ್ಟಾದರೂ ನೀವು ಗಂಡ–ಹೆಂಡತಿ. ನಾವು ಹೇಳಿದ್ದೆಲ್ಲ, ನಾಳೆ ಚಾಡಿಯಾದೀತು. ಯಾವುದೂ ಬೇಡ ಅಂತ ಹೇಳಿದೆನಲ್ಲ. ನಿನ್ನನ್ನು ಈಗಿಂದೀಗಲೆ ಕರೆದುಕೊಂಡು ಬಾ ಅನ್ನುತ್ತಿದ್ದೆ ಭಾಸ್ಕರನಿಗೆ. ನೀನೇ ಬಂದಿ, ಒಳ್ಳೆಯದಾಯಿತು."

"ಆಯಿತಾದರೂ ಏನು ?"

"ನಾವು ಯಾವುದನ್ನೂ ಹೇಳುವುದಿಲ್ಲ. ಆಕೆ ಹೇಳಿದರೆ ಕೇಳಿಕೊ." ಆನಂದನಿಗೆ ಸಹನೆ ಉಳಿಯಲಿಲ್ಲ. ನಾರಾಯಣರಾಯರಿಗೆ ಸಿಟ್ಟು ಬಂದಾಗ ಅವರು ಹೆಚ್ಚು ಮಾತನಾಡದೆ ಸುಮ್ಮನಿರುವುದು ಅವರ ಸ್ವಭಾವವೆಂಬುದನ್ನು ಬಲ್ಲ ಆನಂದ, ಅವರು ಇಷ್ಟರಮಟ್ಟಿಗೆ ಸ್ಪಷ್ಟವಾಗಿ ತಮ್ಮ ಮನಸ್ಸನ್ನು ಬಿಚ್ಚಿ ಹೇಳಿದ್ದರಮೇಲಿಂದ ಏನಾದರೂ ವಿಶೇಷ ಘಟನೆ ನಡೆದಿರಬೇಕೆಂದುಕೊಂಡ. ಕೇಳಿದ್ದಕ್ಕೆ ಒಬ್ಬರೂ ನೇರವಾಗಿ ಉತ್ತರ ಕೊಡದಿದ್ದುದರಿಂದ ಅವನ ಕುತೂಹಲ ಕೋಪವಾಗಿ ಉರಿಯತೊಡಗಿತ್ತು. ಅರೆನಿಮಿಷ ತಡೆದ. ನೇರವಾಗಿ ಮೋಹಿನಿ ಯೆದುರು ತುದಿಗಾಲ ಮೇಲೆ ಕುಳಿತು ಕೇಳಿದ :

"ಏನಾಯ್ತೆ ಇವತ್ತು ? ಏನು ಜಗಳ ?"

ಮೋಹಿನಿ ತುಟಿ ಬಿಚ್ಚಲಿಲ್ಲ. ಕಣ್ಣುಗಳಲ್ಲಿ ನೀರೊಡೆಯಲಿತ್ತು. ಉಸಿರು ಜೋರಾಗಿ ಸಾಗುತ್ತಿದ್ದುದರಿಂದ ಕೆಳಗೆ ಮೇಲಾಗಿ ಅವಳ ಎದೆಯಲ್ಲಿ ಯಾವ ಭಾವನೆಯು ಕೋಲಾಹಲವಿತ್ತೆಂಬುದನ್ನು ತಿಳಿಯುವ, ತಿಳಿದುಕೊಳ್ಳಬೇಕೆನ್ನುವ ಸ್ಥಿತಿ ಆನಂದನಲ್ಲಿರಲಿಲ್ಲ. ಅವಳ ಮೌನ ಅವನ ಕೋಪವನ್ನು ಮಾತ್ರ ಇಮ್ಮಡಿಸಿತು. ಒಂದಂಗುಲ ಮುಂದಕ್ಕೆ ಸರಿದು ಗದ್ದರಿಸಿ ಕೇಳಿದ :

"ಏನಾಯ್ತು ? ಹೇಳುವಿಯೋ ಇಲ್ಲವೊ ?"

ಮೋಹಿನಿ ಬಾಯಿ ತೆರೆಯಲಿಲ್ಲ. ತುಂಬಿದ ಕಣ್ಣುಗಳಿಂದ ನೇರವಾಗಿ ಆನಂದನನ್ನೇ ದಿಟ್ಟಿಸುತ್ತಿದ್ದಳು. ಆನಂದನಿಗೆ ರೋಷ ತಡೆಯಲಾಗಲಿಲ್ಲ. "ಏನಾಯ್ತು, ಬೊಗಳುವಿಯೋ ಇಲ್ಲವೊ ?" ಎಂದವನೆ ಛಟ್ಟೆಂದು ಗಟ್ಟಿಯಾಗಿ ಒಂದೇಟನ್ನು ಕೆನ್ನೆಯ ಮೇಲೆ ಬಿಗಿದ. ಮೋಹಿನಿ ಅರ್ಧಮೂರ್ಛ ನೆಲಕ್ಕುರುಳಿದಳು. ಎರಡನೆಯ ಏಟು ಎಡಭುಜದ ಮೇಲೆ ಬಿದ್ದಿತು. 'ಅಯ್ಯೋ' ಎಂಬ ಆರ್ತಸ್ವರ ಮನೆಯಲ್ಲಿಯ ಭೀಕರ ಶಾಂತತೆಯನ್ನು ಹತ್ತು ಪಾಲಾಗಿ ಮಾಡಿ ತೋರಿಸಿತು. ಹೊರಗಿನಿಂದ ನಾರಾಯಣರಾಯರು ಧಾವಿಸಿ ಬಂದು ಆನಂದ

ನನ್ನ ಕೈ ಹಿಡಿದು ಪಡಸಾಲೆಗೆ ತಂದು ಕುಳ್ಳಿರಿಸಿದರು. ಆನಂದ ಕಣ್ಣು ಮುಚ್ಚಿ ಕೊಂಡು ಹಣೆಯ ಮೇಲೆ ಕೈಯಾಡಿಸುತ್ತಾ ಕುಳಿತ. ನಡುನಡುವೆ ಮೋಹಿನಿಯ ಬಿಕ್ಕು ಕೇಳಬರುತ್ತಿತ್ತು.

ಮೋಹಿನಿಯ ಹೃದಯ ಒಳಗಿನಿಂದ ಕಿರಿಚಿಕೊಳ್ಳುತ್ತಿತ್ತು: 'ನೀನು ಕ್ರಯ ಕೊಟ್ಟು ತಂದ ದಾಸಿಯಲ್ಲ; ಕಟುಕ ಕೊಂಡ ದನವಲ್ಲ; ಇವರ ಬಾಗಿಲಲ್ಲಿ ಬಿದ್ದು ನರಳಬೇಕಾದ ನಾಯಿಯಲ್ಲ. ಮಾನವಪ್ರಾಣಿ ನೀನು! ಮಾನವಪ್ರಾಣಿಯಾಗಿ ಬಾಳು!' ಎಂದು. ಆದರೆ ವಿವೇಕದ ದನಿ ಕ್ಷೀಣವಾಗಿ ಯಾದರೂ ಸ್ಪಷ್ಟವಾಗಿ ಕೇಳಬರುತ್ತಿತ್ತು: 'ನೀನು ಮಾನವಪ್ರಾಣಿ, ನಿಜ! ಆದರೆ ಸಮಾಜದಲ್ಲಿ ಆತನ ಹೆಂಡತಿ ನೀನು. ಅವನಿಲ್ಲದೆ ನಿನಗೆ ಸಮಾಜದಲ್ಲಿ ಸ್ಥಾನವಿಲ್ಲ, ಗತಿಯೂ ಇಲ್ಲ' ಎಂದು. ಹೃದಯ ಸಿಡಿದೆದ್ದು ಸಂತಾಪದಿಂದ ಉಸಿರಿತು: 'ನನಗೆ ಈ ನರಪಶುವಿನ ಹೆಂಡತಿಯಾಗಿ ಬಾಳುವುದಕ್ಕಿಂತ, ಗಂಡನಿಲ್ಲದಿದ್ದರೂ ಪರಿವೆ ಇಲ್ಲ, ಮನುಷ್ಯಪ್ರಾಣಿಯಾಗಿ ಮನುಷ್ಯನಂತೆ ಬದುಕಬೇಕಾಗಿದೆ; ಅವನಿಲ್ಲದೆ ನನಗೆ ಸಮಾಜದಲ್ಲಿ ಸ್ಥಾನವಿರಲಿಕ್ಕಿಲ್ಲ, ನಿಸ್ಸಂದೇಹವಾಗಿಯೂ ಗತಿ ಇದೆ!' ಎಂದು. 'ಹಾಗಾದರೆ ಏನು ಮಾಡುವಿ?' ಎಂದು ವಿವೇಕ ಕೇಳಿದಾಗ ಹೃದಯ ಉತ್ತರವನ್ನು ಹುಡುಕುತ್ತಿತ್ತು.

ಮೋಹಿನಿಯ ಹೃದಯವನ್ನು ಕುದಿಯುತ್ತಿರುವ ಜ್ವಾಲಾಮುಖಿಯನ್ನಾಗಿ ಮಾಡಿದ ಆ ಎರಡೇಟುಗಳು ಉಳಿದವರನ್ನು ಮಾತ್ರ ಶಾಂತಗೊಳಿಸಿದ್ದವು. ನಾದಿನಿ ಬಾಗಿಲಲ್ಲಿ ಬಂದು ನಿಂತವಳು ನೆಲಕ್ಕೆ ಕುಸ್ಸಳಿಸುವುದರಲ್ಲಿದ್ದಂತಿದ್ದಳು. ನಾರಾಯಣರಾಯರು ಕರುಣಾಮೂರ್ತಿಯೆ ಆಗಿದ್ದರು. ಭಾಸ್ಕರ ಮಾತ್ರ ಸ್ಥಿತಪ್ರಜ್ಞನಂತೆ ರಾಗದ್ವೇಷಾದಿಗಳಿಂದ ದೂರವಾಗಿದ್ದಂತಿದ್ದ. ಆನಂದನಲ್ಲಿ ಮಾತ್ರ ಸಿಟ್ಟು ಕನಿಕರವಾಗಿ ಕಣ್ಣೀರಾಗಿ ಹೊರಬೀಳುವುದರಲ್ಲಿತ್ತು. ನಾರಾಯಣರಾಯರು ಸಮಾಧಾನದ ಮಾತುಗಳನ್ನು ಹೇಳುತ್ತಿದ್ದರು:

"ಹಾಗೆ ಹೊಡೆಯಬಾರದು, ಆನಂದಾ. ಹೊಡೆದರೆ ಯಾತಕ್ಕೆ ಬಂತು? ಎಷ್ಟಾದರೂ ಹೆಣ್ಣು ಜೀವ. ಏನೋ, ಸಿಟ್ಟಿನ ಭರದಲ್ಲಿ ಒಂದು ಮಾತು ನಾನೇ ಹೆಚ್ಚಿಗೆ ಆಡಿದೆ . ." ನಾರಾಯಣರಾಯರು ನಿಜವಾಗಿಯೂ ಕಳಕಳಿಯಿಂದ ಮಾತನಾಡುತ್ತಿದ್ದರು. ನಿಜವಾಗಿಯೂ ಸಾತ್ವಿಕ ಜೀವನ. ಆದರೆ ಅಂದು ಸಾಯಂಕಾಲ ಅವರಿಗೆ ಸಹನೆ ತಪ್ಪಿಹೋಯಿತು. ಆನಂದನ ಬಗೆಯಲ್ಲಿ

ಅವರಿಗೆ ತುಂಬ ಕನಿಕರ. ಏನೋ, ಇಂದಿಲ್ಲ ನಾಳೆ ಎಲ್ಲವೂ ಸರಿಯಾದೀತೆಂಬ ಎಣಿಕೆಯಲ್ಲಿ ಬಂದ ಅನಾನುಕೂಲಗಳನ್ನು ಎದುರಿಸಿ ಗಂಡಹೆಂಡಿರಿಬ್ಬರಿಂದಲೂ ಆದ ಮನಸ್ತಾಪಗಳೆಲ್ಲವನ್ನೂ ನುಂಗಿಕೊಂಡು ಸುಮ್ಮನಿರುತ್ತಿದ್ದರು. ಆದರೆ ಅಂದು ಸಾಯಂಕಾಲ ಮೋಹಿನಿ ಆಡಿದ ಮಾತು ಕಟುವಾಗಿದ್ದವು. ಎಂಥ ಶಾಂತಸ್ವಭಾವದವರನ್ನೂ ಕೆರಳಿಸುವಂಥ ಮಾತುಗಳನ್ನು ಅವರು ಕೇಳಿದ್ದರು. ಆದರೆ ಮಾತಿಗೆ ಮಾತು ಬೆಳೆಯದಂತೆ ಹೆಂಡತಿಯನ್ನು ಸುಮ್ಮನಾಗಿರಿಸಿ, ಮೋಹಿನಿ-ಆನಂದರು ತಮ್ಮಿಂದ ದೂರವಾಗಿದ್ದರೆ ಮಾತ್ರ ಈ ತೊಂದರೆ ತಪ್ಪುವುದು ಸಾಧ್ಯವೆಂಬ ಸಿದ್ಧಾಂತಕ್ಕೆ ಬಂದು ತಲಪಿದ್ದರು.

ಇಷ್ಟರವರೆಗೆ ಪ್ರಸಂಗ ಬೆಳೆಯಬಹುದೆಂಬ ಎಣಿಕೆ ಇಲ್ಲದ ಆನಂದನ ಅಕ್ಕ ಮಾತ್ರ ಸೋಗಿನ ಸಹಾನುಭೂತಿಯೇ ಆ ಸನ್ನಿವೇಶಕ್ಕೆ ತಕ್ಕ ಔಷಧ ವೆಂಬುದನ್ನರಿತು ಎಲ್ಲವನ್ನೂ ಸರಿಪಡಿಸುವ ಯತ್ನಕ್ಕೆ ಕೈಹಾಕುವುದರಲ್ಲಿದ್ದಳು.

"ಎಷ್ಟಾದರೂ ಆಕೆ ಚಿಕ್ಕವಳು, ಆನಂದಾ. ನೀನು ಆಕೆಗೆ ಬುದ್ಧಿ ಹೇಳಬೇಕು. ಸುಮ್ಮನೆ ಹೊಡೆದರೆ ಯಾತಕ್ಕೆ ಬಂತು, ಹೇಳು....ಏಳಿನ್ನು, ಊಟ ಮಾಡುವಿಯಂತೆ. ಅವಳದೂ ಊಟವಾಗಿಲ್ಲ."

ಆನಂದನ ಮನಃಸ್ಥಿತಿ ವಿಚಿತ್ರವಾಗಿತ್ತು. ಮೋಹಿನಿಯ ಕೂಡ ಎಷ್ಟೋ ಸಾರೆ ಜಗಳವಾಡಿದ್ದರೂ ಕೈಯೆತ್ತಿ ಆಕೆಯನ್ನು ಹೊಡೆದದ್ದು ಇದೇ ಮೊದಲ ಸಲವಾದ್ದರಿಂದ ಒಂದು ಕ್ಷಣ ತನ್ನನ್ನೆ ಹೀನವಾಗಿ ಹಳಿದುಕೊಂಡ. ಮರುಕ್ಷಣ ದೋಷವನ್ನು ತಮ್ಮಿಬ್ಬರ ಮೇಲಿಂದಲೂ ತೆಗೆದುಹಾಕಿ ಇದುವರೆಗೆ ಸನ್ನಿವೇಶ ಬೆಳೆಯುವಂತೆ ಮಾಡಿದವರು ಉಳಿದ ಮೂವರಲ್ಲವೆ? ಎಂದುಕೊಂಡ. ನಡು ನಡುವೆ ಮೋಹಿನಿಯು ಬಿಕ್ಕಿದ ಸಪ್ಪಳ ಕೇಳಬಂದಾಗ ಹೃದಯ ಹಿಂಡಿ ಬಂದಂತಾಗುತ್ತಿತ್ತು. ನಾರಾಯಣರಾಯರು ಮತ್ತೆ ಹೇಳಿದರು:

"ಏಳು, ಆನಂದ, ರಾತ್ರಿಯಾಗಿಹೋಯಿತು. ಏಳು, ಊಟ ಮಾಡು, ಅವಳಿಗೂ ಏಳುವಂತೆ ಹೇಳು. ಆಮೇಲೆ ನೋಡೋಣವಂತೆ!"

ನಾರಾಯಣರಾಯರ ಸಹಾನುಭೂತಿ ಆನಂದನ ಕಣ್ಣೀರು ಕಟ್ಟೆಯ ನ್ನೊಡೆಯಿತು. ಅವರಿಂದ ಪಡೆದ ಸಹಾಯ-ಪೋಷಣೆಗಳೆಲ್ಲವೂ ಒತ್ತಟ್ಟಿಗಾಗಿ ಬಂದು ಅವನ ಹೃದಯದ ಮೇಲೆ ದೊಡ್ಡದೊಂದು ಭಾರವಾಗಿ ನಿಂತಿದ್ದವು. ಅವನಂದ:

" ನಾನೇನು ಮಾಡಲಿ, ಮಾವಯ್ಯ ? ನೀವೇ ಹೀಗೆ ಮನೆ ಬಿಟ್ಟು ಹೊರಡು ಅಂದರೆ. ಇದುವರೆಗೆ...."

ಆನಂದನಿಗೆ ಮಾತು ನಾಲದಾಯಿತು. ಆನಂದನ ಈ ಸ್ಥಿತಿಯನ್ನು ನೋಡಿ ಮೋಹಿನಿಗೆ ಕೂಡ ಒಂದರೆಕ್ಷಣ ಕನಿಕರವೆನಿಸಿತು. ಆದರೆ ಮರು ಕ್ಷಣದಲ್ಲಿ ಅಸಮಾಧಾನವೂ ಆಯಿತು. ಹಿಂದೆ ಇವರಿಂದ ಎಂಥ ಸಹಾಯ, ಎಷ್ಟು ಸಹಾನುಭೂತಿಯನ್ನು ಪಡೆದಿದ್ದರೂ ಅವುಗಳಿಗಾಗಿ ಇಡೀ ಭವಿಷ್ಯವನ್ನೇ ಹಾಳುಮಾಡಿಕೊಳ್ಳುತ್ತಿದ್ದಾನಲ್ಲಾ ತನ್ನ ಪತಿ. ಅದಕ್ಕಾಗಿ ಹೆಂಡತಿಯಾದ ತನ್ನನ್ನೂ ಬಲಿಕೊಡುತ್ತಿದ್ದಾನಲ್ಲ! ಎಂದು ಕಳವಳಪಟ್ಟಳು. ಅಕ್ಕ ಗದ್ಗದಿತ ವಾಗಿ ಹೇಳುತ್ತಿದ್ದಳು :

" ಹಾಗೆಲ್ಲ ಮಾಡಬಾರದು, ಏಳು. ಯಾವಾಗ ಊಟ ಮಾಡಿದ್ದೀಯೊ, ಏಳಿನ್ನು."

" ನನಗೆ ಹಸಿವೆ ಇಲ್ಲಮ್ಮ. ಬೇಕಾದಷ್ಟಾಯಿತಲ್ಲ; ಹೊಟ್ಟೆ ತುಂಬಿ ಹೋಗಿದೆ." ನಾರಾಯಣರಾಯರು ನಡುವೆಯೆ ಬಂದು ಹೇಳಿದರು :

" ಏಳು ಎಂದು ಹೇಳಿದೆನಲ್ಲ ? ಹಸಿವೆ ಇರದಿದ್ದರೆ ಇದ್ದಷ್ಟೇ ಊಟ ಮಾಡು, ಏಳು...." ಎಂದು ಆನಂದನನ್ನು ಕೈ ಹಿಡಿದು ಏಳಿಸಿದರು.

ಆನಂದ ಎದ್ದು ಒಳಗಡೆ ಹೊರಟ. ಮೋಹಿನಿ ಕುಳಿತಲ್ಲಿಯೆ ನೆಲಕ್ಕೆರ ಳಿದ್ದಳು. ಅವಳ ಕಡೆಗೆ ನೋಡುವ ಧೈರ್ಯವೂ ಆನಂದನಿಗಾಗಲಿಲ್ಲ. ಆನಂದ ಒಳಗೆ ಹೋದನಂತರ ಬೆಳಗ್ಗೆ ಬರುವೆನೆಂದು ಭಾಸ್ಕರನೂ ತನ್ನ ಕೋಣೆ ಯೆಡೆಗೆ ಹೊರಟ.

ಆನಂದ ಹೆಚ್ಚುಕಡಿಮೆ ಮೌನವಾಗಿಯೆ ಊಟಮಾಡುತ್ತಿದ್ದ. ಅಕ್ಕನಿಗೆ ಮಾತ್ರ ಎದೆಗುದಿಯಿತ್ತು. ತನ್ನ ಪಕ್ಷವನ್ನು ಚೆನ್ನಾಗಿ ಸಮರ್ಥಿಸಿಕೊಂಡು ನಡೆದುದೆಲ್ಲವನ್ನೂ ಹೇಳಬೇಕೆಂಬ ಆಸೆಯ ಮೇಲೆ ಆನಂದನ ಮೌನ ತಣ್ಣೀರ ನ್ನೆರಚುತ್ತಿತ್ತು. ಆದರೂ ಆ ಮಾತು ಈ ಮಾತು ಆಡಿ, ಕೊನೆಗೆ ಮನಸ್ಸಿನ ಲ್ಲಿದ್ದುದನ್ನು ಸೂಚಿಸಿ ಹೇಳಿದಳು :

" ಸುಮ್ಮನೆ ಎಲ್ಲಿಯಾದರೂ ಒಂದೆರಡು ಕೋಣೆ ಸಿಕ್ಕರೆ ನೋಡಿಬಿಡಪ್ಪ. ಯಾಕೆ ಜನರಲ್ಲಿ ಸುಮ್ಮನೆ ? ನಮಗೂ ಒಳ್ಳೆಯದಲ್ಲ, ಅವಳಿಗೂ ಒಳ್ಳೆಯದಲ್ಲ. ಎಲ್ಲಿಯಾದರೂ ಸುಖವಾಗಿರಿ "

ಎಂದಾಗ ಆನಂದ ಏನನ್ನೂ ಉತ್ತರ ಹೇಳದೆ ಕೈ ತೊಳೆಯಲು ಹೋದ. ಯಾವ ಉತ್ತರವೂ ಸಿಗದಿದ್ದುದರಿಂದ ಅಸಮಾಧಾನ ಹೊಂದಿದವಳಾಗಿ ತುಸು ಬೇಸರವಾಗಿಯೇ ಅಕ್ಕ ಹೇಳಿದಳು :

"ಆಕೆಯನ್ನಷ್ಟು ಏಳಲಿಕ್ಕೆ ಹೇಳು, ಆನಂದಾ. ಊಟ ಮಾಡಿ ಮಲಗಿ ಕೊಳ್ಳಲಿ. ನಾನೇನೂ ಬೇಡವೆನ್ನುವುದಿಲ್ಲ...."

ಆನಂದ ಯಾವ ಮಾತನ್ನೂ ಆಡದೆ ಪಡಸಾಲೆಗೆ ಬಂದು ಆಮೇಲೆ ಗ್ಯಾಲರಿಯ ಕಡೆಗೆ ಹೋದ. ಮೋಹಿನಿ ಮಲಗಿಯೆ ಇದ್ದಳು, ಅಲ್ಲಿಯೆ ನೆಲದ ಮೇಲೆ. ನಾದಿನಿ ಒಂದೆರಡು ಸಲ ಕರೆದರೂ ಏಳಲಿಲ್ಲ. ಮೈ ತಟ್ಟಿ ಹೇಳಿದರೂ 'ನನಗೆ ಹಸಿವಿಲ್ಲ'ವೆಂದು ಹೇಳಿ ಮಾತು ಮುಗಿಸಿಬಿಟ್ಟಿದ್ದಳು. ಗ್ಯಾಲರಿಯೊಳಗಿನಿಂದ ಆನಂದ ಎಲ್ಲವನ್ನೂ ಲಕ್ಷ್ಯಪೂರ್ವಕವಾಗಿ ಕೇಳಿಕೊಳ್ಳುತ್ತಿದ್ದ. ಕೊನೆಗೆ, ನಿರುಪಾಯಳಾಗಿ, ಹೊರಗಡೆ ಬಂದು ಆನಂದನಿಗೆ ಹೇಳಿದಳು: "ನೀನು ನಡುಮನೆಯಲ್ಲಿಯೇ ಮಲಗಿಕೊ. ನೀನೇ ಎಬ್ಬಿಸಿ ಆಕೆಗೆ ಊಟ ಮಾಡ ಹೇಳು" ಎಂದು ಹೇಳಿದಾಗ ಅವಳ ಸೂಚಿತವಾದ ಅರ್ಥ ಆನಂದನಿಗೆ ತಿಳಿಯದಿರಲಿಲ್ಲ. 'ನಾವು ಪಡಸಾಲೆಯಲ್ಲಿ ಮಲಗುವವರು. ನೀನು ಹಾಗೆಯೆ ಗ್ಯಾಲರಿಯಲ್ಲಿ ನಿಂತರೆ ಯಾವ ಪ್ರಯೋಜನ?' ಎಂದು ಕೇಳಿದಂತಾಗಿತ್ತು.

ಮೋಹಿನಿ ಮಲಗಿಕೊಂಡ ನಡುಮನೆಗೆ ಆನಂದ ಬಂದು, ಪಡಸಾಲೆಯ ಕಡೆಗಿನ ನಡುವಿನ ಬಾಗಿಲವನ್ನು ಇಕ್ಕಿಕೊಂಡು, ಮೋಹಿನಿಯ ಹತ್ತಿರ ಬಂದು ಕುಳಿತ. ಅವಳಿಗೆ ನಿದ್ರೆಹತ್ತಿರಲಿಲ್ಲವೆಂಬುದನ್ನು ಅರೆ ಅಳುಕುವ ಅವಳ ಕಣ್ಣೆವೆಗಳ ಮೇಲಿಂದಲೆ ತಿಳಿಯುವಂತಿತ್ತು. ಆನಂದನೆಂದ :

"ಮೋಹಿನಿ...."

ಮೋಹಿನಿ ಮಿಸುಕಲಿಲ್ಲ, ಮಾತಾಡಲಿಲ್ಲ. ಮತ್ತೆ ಆನಂದ,

"ಮೋಹಿನಿ. .." ಎಂದ.

ಮೃದುವಾಗಿ ಅವಳ ಎಡಭುಜದ ಮೇಲೆ ಕೈಯಾಡಿಸಿ ಮತ್ತೆ "ಮೋಹಿನಿ" ಎಂದ. ಮೋಹಿನಿ ಸರಕ್ಕನೆ ಹಿಂದಕ್ಕೆ ಸರಿದಳು, ಮಾತನಾಡದೆ. ಆನಂದ ತೀರ ಹತ್ತಿರ ಸರಿದು ಅವಳ ಮೈಮೇಲೆ ಕೈಯಾಡಿಸುತ್ತ ಮತ್ತೊಮ್ಮೆ ಅವಳನ್ನು ಕರೆದ. ಅವನ ದನಿಯಲ್ಲಿ ಯಾವ ಕಾತರತೆ–ಉದ್ವೇಗಗಳಿದ್ದವೊ! ಅವಳ ಸ್ಪರ್ಶ ಅವನಿಗೆ ಅಮೃತಧಾರೆಯಾಗುತ್ತಿತ್ತು. ಆದರೆ ಮೋಹಿನಿಗೆ ಆ ಕೈ

ಕಟುಕನ ಕತ್ತಿಯಂತೆ ಭಾಸವಾಗುತ್ತಿತ್ತು. ಎಷ್ಟು ಮುದುಡಿಕೊಂಡರೂ ಮುಂದಕ್ಕೆ ಸರಿಯುತ್ತಿದ್ದ ಆನಂದನ ಸ್ಪರ್ಶವನ್ನು ತಪ್ಪಿಸುವುದು ಸಾಧ್ಯವಾಗದ್ದರಿಂದ ಎದ್ದು ಕುಳಿತಳು. ಆನಂದನಿಗೆ ಆಸೆ ಉಕ್ಕೇರತೊಡಗಿತು. ಅವಳ ಕುರುಳುಗಳನ್ನು ತೀಡಲೆಳಸಿ ಮುಂದಕ್ಕೆ ಚಾಚಿದ ಕೈಯನ್ನು ಮೋಹಿನಿ ಹಿಂದಕ್ಕೆ ಸರಿಸಿದಳು. ದೊಡ್ಡದಾಗಿ ಬಿಕ್ಕಿಬಿಕ್ಕಿ ಅಳತೊಡಗಿದಳು.

ಮೋಹಿನಿಯ ದುಃಖ ಆನಂದನನ್ನು ಆವರಿಸಿತು. ಅಂಥ ಸುಕುಮಾರ ಕೋಮಲೆಯನ್ನು ಅಷ್ಟು ನಿರ್ದಯವಾಗಿ ಹೊಡೆಯುವಂಥ ಯಾವ ಅಪರಾಧವನ್ನು ಆಕೆ ಮಾಡಿದ್ದಳು ಎಂಬುದನ್ನೂ ಯೋಚಿಸದೆ ತಾನು ಅವಳ ಮನನೋಯಿಸಿದೆನಲ್ಲಾ ಎಂದು ಪರಿಪರಿಯಾಗಿ ಅಸಹ್ಯಪಟ್ಟುಕೊಂಡ. ಅವನ ಮನಸ್ಸು ಅವಳ ದೇಹಕ್ಕಿಂತಲೂ ಕೋಮಲವಾಗಿ ಹೋಗಿತ್ತು. ದೀನವಾಗಿ ಕೇಳಿಕೊಂಡ :

" ಮೋಹಿನಿ, ಹೀಗೇಕೆ ಮಾಡುತ್ತೀ ನೀನು ? "

ಮೋಹಿನಿ ಅಳುವನ್ನು ತಡೆಯುವುದರಲ್ಲಿದ್ದಳು. ಆನಂದ ಅವಳ ಬೆನ್ನ ಮೇಲೆ ಕೈಯಾಡಿಸುತ್ತ ಮತ್ತೆ ಕೇಳಿದ :

" ಯಾಕೆ ಮೋಹಿನಿ, ನನ್ನ ಕೂಡ ಮಾತೂ ಆಡುವುದಿಲ್ಲವೆ? ಹೀಗೇಕೆ ಮಾಡಿದೆ ? "

" ಏನು ಮಾಡಿದೆ ನಾನು ? "

" ನಾನು ಕೈ ಎತ್ತಬಾರದಾಗಿತ್ತು, ಮೋಹಿನಿ. ಆದರೆ ಯಾರೂ ಏನೂ ಹೇಳಲಿಲ್ಲ, ನನಗೆ ಸಿಟ್ಟು ತಡೆಯಲಿಲ್ಲ...."

" ಅಂಥದೇನು ಮಾಡಿದ್ದೆ ನಾನು ? "

" ನನಗೇನು ಗೊತ್ತು ? ಎಲ್ಲರನ್ನೂ ಕೇಳಿದೆ. ನಿನ್ನನ್ನೂ ಕೇಳಿದೆ. ನೀನೂ ಕೂಡ ಯಾವ ಮಾತನ್ನೂ ಆಡಲಿಲ್ಲ."

ಮೋಹಿನಿಯ ಹೃದಯ ನಿಧಾನವಾಗಿ ಕರಗುತ್ತಿರುವಂತೆ ತೋರಿತು. ನಡುನಡುವೆ ದುಃಖ ಒತ್ತರಿಸಿ ಬರುತ್ತಿದ್ದರೂ ಅದನ್ನು ತಡೆಹಿಡಿದು ಮಾತನಾಡುತ್ತಿದ್ದಳು. ತನ್ನ ಮೇಲೆ ಕೈಯೆತ್ತಿ ಕೆನ್ನೆಯ ಮೇಲೆ ಏಟು ಕೊಡುವುದೆಂದರೆ ಪತಿಯೆನಿಸಿಕೊಂಡವನಿಂದ ಹೆಂಡತಿಗೆ ಪರಮ ಅನ್ಯಾಯವೆಂದು ಬಗೆದಿದ್ದ, ಮೋಹಿನಿಗೆ ಆ ಏಟಿನ ನೋವಿಗಿಂತಲೂ ಅದರ ಅಪಮಾನವನ್ನು, ಅದರ

ಅಪಮಾನಕ್ಕಿಂತಲೂ ಅದರಲ್ಲಿಯ ಅನ್ಯಾಯವನ್ನು ಹಿಡಿಸದೆ ಆನಂದನನ್ನು ಕೇಳಿದಳು :

" ನಾನು ಮಾತನಾಡದಿದ್ದುದಕ್ಕೆ ಇದು ಶಿಕ್ಷೆಯೆ ? "

" ನೀನಾದರೂ ಏನು ನಡೆಯಿತು ಯಾಕೆ ಹೇಳಿಬಿಡಬಾರದಾಗಿತ್ತು ? "

" ಯಾಕೆ ಹೇಳಿಬಿಡಬಾರದಾಗಿತ್ತು ? ನಾನಾಗ ಬಾಯಿ ಬಿಟ್ಟಿದ್ದರೆ, ಇನ್ನೂ ಏನೇನು ನಡೆಯುತ್ತಿತ್ತು ! ನಾನು ಏನು ಹೇಳಿ ಏನು ಪ್ರಯೋಜನ ? ನನಗಿಂತ ನಿಮಗೆ ಅವರು ಬೇಕು. ನಾನು ಹೇಳುವುದೆಲ್ಲವೂ ಸುಳ್ಳಾಗಿಯೇ ಕಾಣಿಸುವುದು...."

ಮೋಹಿನಿಯ ಮಾತು ನಿಜವಾದವುಗಳಾಗಿದ್ದುದರಿಂದ ಒಂದು ಕ್ಷಣ ಆನಂದ ತಡೆದು ಮಾತನ್ನು ಬದಲಾಯಿಸಲೆತ್ನಿಸಿದ.

" ನೀನು ಊಟವನ್ನೇಕೆ ಮಾಡಲಿಲ್ಲ ? "

" ಹಸಿವಿರಲಿಲ್ಲ."

" ಅದು ಸುಳ್ಳು."

" ಸುಳ್ಳಾದರೆ ಸುಳ್ಳು ! "

" ಹಾಗಾದರೆ ಉಪವಾಸ ಮಲಗುವೆಯಾ ? "

" ನಾನು ಹೇಗಿದ್ದರೇನು ನಿಮಗೆ ? "

" ಅಂಥ ಮಾತನಾಡಬೇಡ, ಮೋಹಿನಿ ! "

" ಹೌದು, ಯಾವಾಗಲೂ ನಿಮಗೆ ಮತ್ತು ಉಳಿದವರಿಗೆ ಬೇಕಾದುದನ್ನೇ ನಾನು ಮಾತನಾಡಬೇಕು, ಅಲ್ಲವೆ ? ಇಲ್ಲವಾದರೆ...."

" ಅದು ಹೋಗಲಿ, ಊಟಕ್ಕೆ ಏಳು ಎಂದರೆ ಯಾಕೆ ಏಳಲಿಲ್ಲ ? "

" ನೀವು ಬರುವಕಿಂತಲೂ ಮೊದಲಿನ ಅವರೆಲ್ಲರ ಮಾತು ಕೇಳಬೇಕಿತ್ತು ನೀವು, ಎಂದರೆ ತಿಳಿಯುತ್ತಿತ್ತು...."

" ಏನಾಯಿತು ? ಏನೆಂದರು ? "

" ನಾನು ಹೇಳುವುದಿಲ್ಲ. ಒಳ್ಳೆಯವರ ಕಡೆಯಿಂದ ಕೇಳಿಕೊಳ್ಳಿರಿ...."

" ನೀನೀಗ ಊಟ ಮಾಡುತ್ತೀಯೊ ಇಲ್ಲವೊ ? "

" ಇಲ್ಲ ! "

" ಈ ಹುಚ್ಚು ಹಟ ಮಾಡಬೇಡ, ಮೋಹಿನಿ...."

" ಹುಚ್ಚು ಹಟ ನನ್ನದಲ್ಲ, ಉಳಿದವರದು...."

" ಅವರದೇನು ಹಟ ? "

" ನಾನು ಕೆಟ್ಟವಳು, ಯಾಕೆ ನನ್ನ ಗೊಡವೆ ನಿಮಗೆ ? "

" ಡೊಂಕು ಮಾತು ಬೇಡ, ಮೋಹಿನಿ....ನಾನು ಹೇಳಿದ್ದನ್ನು ಕೇಳು ವಿಯೋ ಇಲ್ಲವೊ ? "

" ಏನದು ನೀವು ಹೇಳುವುದು ? "

" ನೀನೀಗ ಹೋಗಿ ಊಟ ಮಾಡಿಕೊಂಡು ಬಾ...."

" ನಾನು ಊಟ ಮಾಡುವುದಿಲ್ಲವೆಂದು ಮೊದಲಿಗೇ ಹೇಳಿಬಿಟ್ಟದ್ದೇನೆ ! "

" ಹೇಳಿದರೇನಾಯಿತು ? ನಿನಗೆ ಊಟ ಮಾಡಬೇಡ ಎನ್ನುತ್ತಾರೆಯೆ ? "

" ಯಾವಾಗಾದರೊಮ್ಮೆ ಬರುವ ನಿಮಗೇನು ಗೊತ್ತಾದೀತು? ಹೋಗಲಿ, ಯಾಕೆ ನಿಮಗೆಲ್ಲ ಆ ತೊಂದರೆ...."

ಎನ್ನುತ್ತಲೆ ಕುಳಿತಲ್ಲಿಂದ ಎದ್ದಳು. ಆನಂದನಿಗೆ ಎಷ್ಟೋ ಸಮಾಧಾನ ವೆನಿಸಿತು. ಒಳಗಡೆ ಹೋಗಿ ಮುಖ ತೊಳೆದು ಬಂದಳು. ಕಣ್ಣುಗಳು ಊದಿ ಕೊಂಡಿದ್ದವು. ಆನಂದ ಅವಳನ್ನು ಹಿಂಬಾಲಿಸಿಯೆ ಇದ್ದ. ಕೆನ್ನೆಯ ಮೇಲಿನ ಬೆರಳು ಗುರುತುಗಳನ್ನು ನೋಡಿ ತನ್ನನ್ನು ತಾನೇ ಶಪಿಸಿಕೊಂಡ.

" ಪೆಟ್ಟು ಬಹಳ ತಾಕಿತೇ, ಮೋಹಿನಿ ? " ಎಂದ.

ಮೋಹಿನಿ ಮಾತನಾಡಲಿಲ್ಲ. ಅವಳು ಬೇರೆ ಯೋಚನೆಯಲ್ಲಿದ್ದಂತೆ ಕಂಡಿತು. ಅವಳ ಹತ್ತಿರ ಹೋಗಿ ಆನಂದ ಮೃದುವಾಗಿ ಹೇಳಿದ :

" ನಾನು ಹೊಡೆಯಬಾರದಾಗಿತ್ತು, ಮೋಹಿನಿ. ನನ್ನಿಂದ ತಪ್ಪಾ ಯಿತು...."

" ಇದು ಸಾವಿರದಲ್ಲಿ ಒಂದು...."

ಆ ಕ್ಷಣದ ಮಟ್ಟಿಗಾದರೂ ಆನಂದನ ಮನಸ್ಸು 'ಹೌದು' ಎಂದು ಕೊಂಡಿತು. ಆದರೆ ಬಹಿರಂಗವಾಗಿ ಒಪ್ಪಿಕೊಳ್ಳುವುದಕ್ಕೆ ಆತ್ಮಗೌರವ ಅಡ್ಡ ಬರುತ್ತಿತ್ತು. ಆನಂದ ಸುಮ್ಮನಾದ. ಮೋಹಿನಿ ಅವನಿಗಾಗಿ ತನ್ನ ಹಾಸಿಗೆ ಯನ್ನು ಬಿಡಿಸಿಕೊಡುತ್ತಿದ್ದಳು. ಬಿಡಿಸಿಯಾದನಂತರ ಒಂದು ಜಮಖಾನೆ ಒಂದು ಚಾದರನ್ನು ತೆಗೆದುಕೊಂಡು ಅಡಿಗೆಮನೆಯ ಕಡೆಗೆ ಹೊರಟಳು.

" ಎಲ್ಲಿಗೆ ಹೊರಟೆ, ಮೋಹಿನಿ ? "

"ಅಡಿಗೆಮನೆಗೆ."

"ಅಲ್ಲಿಗೆ ಯಾಕೆ ?"

"ನಾನಲ್ಲಿಯೇ ಮಲಗುತ್ತೇನೆ."

"ಯಾಕೆ, ಇಲ್ಲಿ ಬರಕೂಡದೆ ?"

ಪಡಸಾಲೆಯ ಕಡೆಗಿನ ನಡುಮನೆ ಬಾಗಿಲು ಕಟ್ಟೆಂದು ಸಪ್ಪಳಮಾಡಿತು. ಮೋಹಿನಿ ಬಾಗಿಲವರೆಗೆ ಹೋಗಿ ಸಂದಿಯೊಳಗಿನಿಂದ ಇಣಿಕಿ ನೋಡಿದಳು.

"ಏನದು ?" ಎಂದ ಆನಂದ.

"ನಿಮ್ಮ ಅಕ್ಕನ ಸಭ್ಯತನ!"

"ಏನು ಹಾಗೆಂದರೆ ?"

"ಇದುವರೆಗೆ ನಮ್ಮ ಮಾತೆಲ್ಲವನ್ನೂ ಅಲ್ಲಿ ನಿಂತು ಕೇಳುತ್ತಿದ್ದರು!"

"ಸಾಧ್ಯವೇ ಅದು ?"

"ಅದೇನೂ ಹೊಸದಲ್ಲ!"

ಆನಂದನಿಗೆ ಅಸಹ್ಯವೆನಿಸಿತು. ಮೋಹಿನಿಯ ಮುಖದ ಮೇಲೆ ಒಂದು ತರದ ವಿಜಯದ ಛಾಯೆ ಇತ್ತು. ಅವಳು ಅಡಿಗೆಮನೆಗೆ ಹೊರಟದ್ದನ್ನು ನೋಡಿ ಆನಂದ ಮತ್ತೆ ಕೇಳಿದ :

"ಒಳಗೆ ಯಾಕೆ ಹೋಗುತ್ತೀ ?"

"ನಾನು ಮಲಗುವುದು ಅಲ್ಲಿಯೇ!"

"ಮೋಹಿನಿ, ಇಲ್ಲಿ ಬಾ ಇಲ್ಲಿ, ಇದು ನೋಡು...."

"ಅದು ಸಾಧ್ಯವಿಲ್ಲ!"

"ಮೋಹಿನಿ...."

ಎಂದು ಆನಂದ ಹಾಸಿಗೆಯಿಂದ ಎಳುತ್ತಿರುವಾಗಲೆ ಮೋಹಿನಿ ಒಳಗೆ ಹೋಗಿ ಬಾಗಿಲನ್ನು ಭದ್ರಪಡಿಸಿದ್ದಳು. ಎರಡು ಮೂರು ಸಾರೆ ಆನಂದ ಬಾಗಿಲ ತಟ್ಟಿದ. ಕಳ್ಳದನಿಯಿಂದ ಕರೆದ, ಕೇಳಿಕೊಂಡ, ಗದರಿಸಿದ. ಆದರೆ ಅಡಿಗೆಮನೆಯೊಳಗಿನ ದೀಪ ಒಂದೆರಡು ನಿಮಿಷಗಳಲ್ಲಿಯೆ ನಂದಿಹೋಗಿತ್ತು.

ಮರುದಿವಸ ಮುಂಜಾನೆ ಆನಂದ ಹೊರಡುವುದರಲ್ಲಿದ್ದುದನ್ನು ನೋಡಿ ನಾರಾಯಣರಾಯರು ಮಾಡಬೇಕಾಗಿದ್ದ ಆಪ್ತಾಲೋಚನೆಗೆ ತೊಡಗಿದರು. ಮೆಲುದನಿಯಲ್ಲಿಯೆ ಆನಂದನಿಗೆ,

"ಭಾಸ್ಕರ ಬರುತ್ತೇನೆಂದಿದ್ದ, ಇನ್ನೂ ಬರಲಿಲ್ಲ" ಎಂದರು.

"ಬರಬಹುದು. ಯಾಕೆ?"

"ಎಲ್ಲರೂ ಕೂಡಿ ಒಂದಿಷ್ಟು ಮಾತನಾಡಬೇಕಾಗಿತ್ತು."

"ಏನು?"

"ನಾನು ನಿನ್ನೆ ಸಾಯಂಕಾಲ ಹೇಳಿದೆನಲ್ಲ...."

ಆನಂದ ಸುಮ್ಮನಾದ. ಮೋಹಿನಿ ಹಿತ್ತಿಲಲ್ಲಿ ಏನೋ ಕೆಲಸದಲ್ಲಿ ತೊಡಗಿದ್ದಳು. ಆ ಸಮಯವನ್ನು ನೋಡಿಕೊಂಡೆ ನಾರಾಯಣರಾಯರು ವಿಷಯವನ್ನೆತ್ತಿದ್ದರು. ಅಷ್ಟರಲ್ಲಿ ಭಾಸ್ಕರನೂ ಬಂದ.

"ನಿನ್ನ ಪರೀಕ್ಷೆ ಯಾವತ್ತು, ಆನಂದ?"

"ಇನ್ನೂ ಒಂದು ತಿಂಗಳು...."

"ಹಾಗಾದರೆ ಒಂದು ಕೆಲಸ ಮಾಡಿಬಿಡಬಹುದು. ನಿನ್ನ ಪರೀಕ್ಷೆ ಮುಗಿಯುವ ವರೆಗೂ ಮೋಹಿನಿಯನ್ನು ಅವಳ ತವರುಮನೆಗೆ ಕಳಿಸಿ ಬಾ. ಮುಂದೆ ಎಲ್ಲವನ್ನೂ ವಿಚಾರ ಮಾಡೋಣವಂತೆ ..."

"ಆದರೆ ಈಗ...." ಎಂದು ಆನಂದ ಅನುಮಾನಿಸಿದ.

"ಯಾಕೆ?"

"ಅವಳಿಗೂ ಪರೀಕ್ಷೆ ಬಂದಿದೆಯಲ್ಲ...."

"ಯಾವಾಗ?"

"ಎರಡು–ಮೂರು ವಾರ ಮಾತ್ರ ಇರಬಹುದು."

"ಏನು ದೊಡ್ಡ ಪರೀಕ್ಷೆ ಆಕೆಯದು?" ಎಂದು ತಿರಸ್ಕಾರದಿಂದ ಭಾಸ್ಕರ ನಡುವೆಯೆ ಬಾಯಿ ಹಾಕಿದ್ದು ಆನಂದನಂತೆ ನಾರಾಯಣರಾಯರಿಗೂ ಸರಿ ಬೀಳಲಿಲ್ಲ.

"ಇರಲಿ, ಕಾಲೇಜಿಗಂತೂ ಈಗ ಹೋಗಬೇಕಿಲ್ಲ, ಪರೀಕ್ಷೆಯ ಮಟ್ಟಿಗೆ ಬಂದುಹೋಗಲಿ. ಇಲ್ಲಿದ್ದರೆ ವೃಥಾ ಮನಸ್ತಾಪ—ಎಲ್ಲರಿಗೂ. ನಿನಗಾದರೂ ಓದು ನಾಗಬೇಕು. ದಿನಬೆಳಗೂ ಒಂದೇ ಗತಿಯಾದರೆ ನಡೆಯುವುದು ಹೇಗೆ? ಜನರಲ್ಲಿ ಸುಮ್ಮನೆ ಅಪಹಾಸ್ಯ...."

ರಾತ್ರಿಯ ಅನುಭವದ ಮೇಲಿಂದ ಆನಂದನಾದರೂ ಯಾವುದಕ್ಕೂ ಸಿದ್ಧನಾದಂತಿದ್ದ. ಅವಳು ಇಲ್ಲಿದ್ದರೇನು ಎಲ್ಲಿದ್ದರೇನು ಎಂದೆನಿಸುತ್ತಿದ್ದರೂ

ಇಲ್ಲಿಯೆ ಇದ್ದರೆ ಒಳ್ಳೆಯದು ಎಂದು ಅನಿಸುತ್ತಿದ್ದುದರಿಂದಲೆ ಅನುಮಾನಿಸು ತ್ತಿದ್ದ. ಆದರೆ ನಾರಾಯಣರಾಯರ ಸ್ಪಷ್ಟವಾದ ಅಭಿಪ್ರಾಯದೆದುರು ತನ್ನದು ಯಾವುದೂ ನಡೆಯುವಂತೆ ತೋರಲಿಲ್ಲ. ಕೊನೆಯಾಗಿ, ಒಂದು ಮಾತನ್ನು ಆಡಿನೋಡಿದ :

" ಆದರೆ ಅಲ್ಲಿಗೆ ಹೋಗಿ ಆಕೆಯನ್ನು ಕಳಿಸಿ ಬರುವವರು ಯಾರು ? "

" ಅದಕ್ಕೇನು ? ಮುಂಜಾನೆ ಹೋಗಿ ಸಾಯಂಕಾಲವೇ ತಿರುಗಿ ಬರ ಬಹುದು...."

ಭಾಸ್ಕರರಾಯ ಸಮಯ ಸಾಧಿಸಿದ.

" ಹೌದು, ಅದಕ್ಕೇನು ? ನಾಲ್ಕು ತಾಸಿನ ದಾರಿ. ಒಂದು ವೇಳೆ ನಿನಗೆ ಸಾಧ್ಯವಾಗದಿದ್ದರೆ ನಾನು ಹೋಗಿ ಬರುವೆ...."

ನಾರಾಯಣರಾಯರಿಗೆ ಈ ಮಧ್ಯಸ್ಥಿಕೆ ಸರಿಬೀಳಲಿಲ್ಲ. ಅವರಂದರು :

" ಅದನ್ನು ಯಾರೂ ಮಾಡಬಹುದು. ಆನಂದ, ನೀನೇ ಹೋಗಿಬಂದರೆ ಒಳ್ಳೆಯದು. ನಿಮ್ಮ ಅತ್ತೆಯ ಕೂಡ ಒಂದೆರಡು ವಿಷಯ ಮಾತಾಡಿ ಬರಲೂ ಆದೀತು."

" ಯಾವಾಗ ಹೊರಡಬೇಕು ? " ಆನಂದ ಕೇಳಿದ.

" ಯಾವಾಗೇನು ? ನಿನ್ನ ಅನುಕೂಲ...."

" ನನಗೆ ಇನ್ನೂ ಮೂರು–ನಾಲ್ಕು ದಿನ ಸಾಧ್ಯವಿಲ್ಲ."

" ಮೂರು–ನಾಲ್ಕು ದಿವಸ ಬಿಟ್ಟು ಹೊರಡಬಹುದು."

" ಹುಂ, ಇಂದು ಆದಿತ್ಯವಾರ....ಗುರುವಾರ...."

ಭಾಸ್ಕರ ಮತ್ತೆ ನಡುವೆ ಬಂದ. ಮೋಹಿನಿಯ ಜೊತೆಯಲ್ಲಿ ತನಗೆ ಹೋಗಬೇಕಾಗಿದ್ದ ಆತುರವನ್ನು ಬಚ್ಚಿಡುವುದು ಭಾಸ್ಕರನಿಗೆ ಅಸಾಧ್ಯ ವಾದಂತಿತ್ತು. ಅವನಂದ :

" ಗುರುವಾರ ಸರಿಯಾದೀತು. ಯಾಕೆಂದರೆ ಆ ಹೊತ್ತು ನನಗೇನೂ ಕೆಲಸವೂ ಇಲ್ಲ...."

ಕೊನೆಗೆ ಮೋಹಿನಿಯ ಜೊತೆಯಲ್ಲಿ ಯಾರು ಹೊರಡತಕ್ಕದ್ದೆಂಬುದು ನಿರ್ಣಯವಾಗದೆ ಹೋದರೂ ಅವಳು ಗುರುವಾರ ದಿವಸ ತನ್ನ ತಾಯಿಯ ಮನೆಗೆ ಹೋಗತಕ್ಕದ್ದೆಂಬುದು ಮಾತ್ರ ಖಂಡಿತವಾಯಿತು. ಅವಳನ್ನು ಕಳು

ಹಿಸುವುದೆಂದರೆ ಆನಂದನಿಗೆ ಮನಸ್ಸಿನಲ್ಲಿ ಎಲ್ಲಿಯೊ ಅಳುಕು. ಆದರೂ ಕೆಲವು ದಿವಸಗಳ ಮಟ್ಟಿಗಾದರೂ ಆಕೆ ಹೊರಟು ಹೋಗುವುದೇ ಒಳಿತು ಎಂದು ಸಮಾಧಾನ ತಂದುಕೊಂಡ. ರಾತ್ರಿಯ ಅನುಭವ ಅವನ ಈ ಒಪ್ಪಿಗೆಗೆ ಉತ್ತೇಜನ ಕೊಡುತ್ತಿತ್ತು. ಮೋಹಿನಿಗೆ ಈ ವಿಷಯವನ್ನು ತಿಳಿಸೋಣವೆಂದು ಐದು ನಿಮಿಷ ಕಾಯ್ದ. ಆದರೆ ಆಕೆ ಒಳಗಡೆ ಬರಲೇ ಇಲ್ಲ. ಅವಳ ವರ್ತನೆಯಿಂದ ಕೆರಳಿಹೋದ ಆನಂದ ಅವಳಿಗಾಗಿ ತಡೆಯಲಿಲ್ಲ. ವಿಷಣ್ಣಮನಸ್ಕನಾಗಿ ಮನೆಯಿಂದ ಹೊರಬಿದ್ದ.

೨

ಬುಧವಾರದ ಸಾಯಂಕಾಲವನ್ನೇ ಇದಿರು ನೋಡುತ್ತಿದ್ದ ಮೋಹಿನಿ ನಡುವಿನ ಮೂರು-ನಾಲ್ಕು ದಿವಸಗಳಲ್ಲಿ ವಸಂತನನ್ನು ಕುರಿತು ಎಷ್ಟೋ ಬಾರಿ ಯೋಚಿಸಿದ್ದಳು. ಶನಿವಾರ ಸಾಯಂಕಾಲ ಮನೆಯಲ್ಲಿ ನಡೆದುದನ್ನೆಲ್ಲವನ್ನೂ ನೆನೆದಾಗ ಅವಳಿಗನಿಸುತ್ತಿತ್ತು : ಆನಂದ-ವಸಂತ ಭೂಮ್ಯಾಕಾಶದಷ್ಟು ಬೇರೆ ಯಾಗಿದ್ದಾರೆ, ಎಂದು. ವಿಚಾರ ಮಾಡಿದ ಹಾಗೆಲ್ಲ ವಸಂತನ ಸಹಾನುಭೂತಿ, ಅವನ ಕಳಕಳಿಯ ಹೃದಯ — ಅವಳಿಗೆ ಎಲ್ಲಿಲ್ಲದ ಸಮಾಧಾನವನ್ನುಂಟು ಮಾಡುತ್ತಿದ್ದವು. ವಸಂತನೇ ತನ್ನ ಗಂಡನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂಬಷ್ಟರಮಟ್ಟಿಗೆ ಆಕೆ ಅಂದುಕೊಂಡಿರದಿದ್ದರೂ ಆನಂದ ವಸಂತನಂತಿದ್ದರೆ ಎಷ್ಟು ಸುಖವಾಗಿ ಇರಬಹುದಾಗಿತ್ತು, ಎಂಬ ಯೋಚನೆ ಮಾತ್ರ ಎಷ್ಟೋ ಬಾರಿ ಸುಳಿದುಹೋಗಿ, ಹೃದಯದಲ್ಲಿ ತಳಮಳವನ್ನುಂಟುಮಾಡುತ್ತಿತ್ತು. ತಾವಿಬ್ಬರೂ ಗಂಡಹೆಂಡಿರು ಸೇರಿ ಸುಖವಾಗಿ ಇರಬೇಕೆಂದೆ ವಸಂತ ಯತ್ನಿಸು ತ್ತಿರಲಿಲ್ಲವೆ ? ಎಂಥ ಉದಾರ ಹೃದಯ ! ಎಂದು, ಅವನನ್ನು ಎಷ್ಟೋ ಬಾರಿ ಕೊಂಡಾಡಿಯೂ ಆಗಿತ್ತು.

ಆದರೆ ನಡುನಡುವೆ ಭೀತಿಯೊಂದು ಇಣಿಕಿ ನೋಡಿ ಹೋಗುತ್ತಿತ್ತು. ವಸಂತನೊಡನೆ ತಾನು ಕುಳಿತು ಮಾತನಾಡಿದ್ದು ಯಾರಿಗಾದರೂ ತಿಳಿದು ಬಂದರೆ ? ಮನೆಗೆ ತಡಮಾಡಿ ಹೋಗುವಂತಿಲ್ಲ. ಕಾಲೇಜನ್ನು ತಪ್ಪಿಸುವಂತಿಲ್ಲ. ಕಾಲೇಜನ್ನು ತಪ್ಪಿಸಿದರೂ ವಸಂತನೇನು ಬೇಕಾದಾಗ, ಬೇಡಿದಾಗ ಸಿಗುವ ವಸ್ತುವೆ ? ಹೀಗಾಗಿ, ವಸಂತನನ್ನು ಕಾಣಬೇಕೆಂಬ ಆಸೆ ಅವಳನ್ನು ಆತನೆಡೆಗೆ ಮುಂದೂಡುತ್ತಿದ್ದರೂ, ಯಾರಾದರೂ ನೋಡಿ ಹೊಸದೊಂದು ಕಷ್ಟಪರಂಪರೆಗೆ ತನ್ನನ್ನು ಈಡುಮಾಡಬಹುದೆಂಬ ಭೀತಿ ಅವಳನ್ನು ಹಿಂದೆಳೆಯುತ್ತಿತ್ತು. ಆದರೆ ಮರುಕ್ಷಣದಲ್ಲಿಯೆ ಹೇಳಿಕೊಳ್ಳುತ್ತಿದ್ದಳು—' ನಾವಿಬ್ಬರೂ ಸೇರಿ ಅಂಥ ಯಾವ ಪಾಪವನ್ನು ಮಾಡಬಯಸುತ್ತಿದ್ದುದು ? ವಸಂತನ ಪ್ರಯತ್ನದ ಫಲವಾಗಿ ಆನಂದ ಸಂಪೂರ್ಣವಾಗಿ ತನ್ನೆಡೆಗೆ ತಿರುಗುವಂತಾದರೆ ಒಳ್ಳೆಯದೆ ಅಲ್ಲವೆ ? ' ಈ ಎಲ್ಲ ವಿಚಾರಗಳ ಮೂಲಕ ಮೋಹಿನಿ ಬುಧವಾರದ ಸಾಯಂಕಾಲವನ್ನೇ ಮುನ್ನೋಡುತ್ತಿದ್ದಳಲ್ಲದೆ ವಸಂತನ ವಿಷಯದಲ್ಲಿ ಅವಳು ಯಾವ ಸಂತೋಷ ವನ್ನೂ ಇಟ್ಟುಕೊಂಡಿರಲಿಲ್ಲ.

ಸರಿಯಾಗಿ ಐದೂವರೆಗೆ ದಾದರ್ ನಿಲ್ದಾಣದ ಒಂದನೆಯ ಪ್ಲಾಟ್‌ಫಾರ್ಮಿನ ಮೇಲೆ ಮೋಹಿನಿ ವಸಂತನ ಬರವಿಗಾಗಿ ಇದಿರುನೋಡುತ್ತಿದ್ದಳು. ನೇರವಾಗಿ ಕಾಲೇಜಿನಿಂದ ಬಂದವಳಾದ್ದರಿಂದ ಕೈಯಲ್ಲಿ ಒಂದೆರಡು ನೋಟ್ ಬುಕ್ಕುಗಳು, ಒಂದೆರಡು ಪುಸ್ತಕಗಳು ಇದ್ದವು. ಐದೂಮುಕ್ಕಾಲಾದರೂ ವಸಂತ ಬರಲಿಲ್ಲ; ಮೋಹಿನಿಗೆ ನಿರಾಶೆಯೆನಿಸತೊಡಗಿತು. ಮೊದಲ ಸಲ ಭೆಟ್ಟಿಯಾದಾಗ ವಸಂತ ತನಗಾಗಿ ಸುಮಾರು ಮುಕ್ಕಾಲು ಗಂಟೆ ಕಾದಿರಲಿಲ್ಲವೆ? ಅದಕ್ಕೆ ಪ್ರತಿಯಾಗಿ ಇದು ಉತ್ತರವಿರಬಹುದೆ? ಎಂಬ ವಿಚಾರವೂ ಸುಳಿದುಹೋಯಿತು. ಹಾಗೆ ನೋಡಿದರೆ ವಸಂತ ಬೇಕೆಂತಲೆ ತಡಮಾಡಿರಲಿಲ್ಲ. ಬೆಳಗಿನಿಂದಲೂ ಅದನ್ನೇ ಯೋಚಿಸುತ್ತಿದ್ದ ವಸಂತ ಸಾಧ್ಯವಾದಷ್ಟು ಬೇಗನೆ ದಾದರಿಗೆ ಬಂದುಬಿಡಬೇಕೆಂದುಕೊಂಡಿದ್ದ. ಆದರೆ ಅಂದು ಆಫೀಸಿನಲ್ಲಿ ವಿಪರೀತ ಕೆಲಸ. ಐದು ಗಂಟೆಯಾದರೂ ಒತ್ತಾಯದ ಕೆಲಸ ಬರುತ್ತಲೇ ಇತ್ತು. ಪ್ರತಿ ನಿಮಿಷವೂ ವಸಂತ ಗಡಿಯಾರದೊಡನೆ ಹೋರಾಡುತ್ತಿದ್ದ. ಆಫೀಸು ಬಿಡುವುದು ಸರಿಯಾಗಿ ಐದೂವರೆಗಾದರೂ, ಆ ದಿನ ಒಂದು ಗಂಟೆ ಮೊದಲೇ ಹೊರಡಬೇಕೆಂದಿದ್ದವನಿಗೆ ಸರಿಯಾಗಿ ಐದೂವರೆಗೆ ಹೊರಡುವುದೂ ಕಷ್ಟವಾಯಿತು.

ಆರು ಗಂಟೆಯಾದರೂ ವಸಂತ ಬಾರದಿದ್ದುದನ್ನು ನೋಡಿ ಮೋಹಿನಿ ತೀರ ಹತಾಶಳಾದಳು. ಒಮ್ಮೊಮ್ಮೆ ತನ್ನ ನಿರಾಶೆ ತನಗೇ ವಿಚಿತ್ರವೆನಿಸುತ್ತಿತ್ತು. ಯಾಕೆ ನಿರಾಶಳಾಗಬೇಕು? ಎಂದು ಕೇಳಿಕೊಳ್ಳುತ್ತಿದ್ದಳು. ಆದರೆ ಅವಳಿಗೆ ತಿಳಿಯದಲೇ ಅವಳ ಮನಸ್ಸು ವಸಂತನ ಬರವನ್ನು ಬೇಡುತ್ತಿತ್ತು. ಇನ್ನೇನು ಆತ ಬರಲಿಕ್ಕಿಲ್ಲ, ಎಂದು ನಿರ್ಧರಿಸಿಕೊಂಡು ಅತ್ತಿತ್ತ ಸುಳಿದಾಡಿದಳು. ಬಾರದೇ ಇದ್ದರೆ—ಬಾರದೇ ಇದ್ದರೆ ಇಲ್ಲ! ಯಾರ ದುಃಖ ಯಾರಿಗೆ? ಎಂದೊಮ್ಮೆ ಅನಿಸುತ್ತಿತ್ತು. ಆದರೆ ಬಂದರೆ—ಬಂದರೆ ಎಷ್ಟು ಚೆನ್ನ, ಎಂದೂ ಹೇಳುತ್ತಿತ್ತು ಅದೇ ಮನಸ್ಸು! ಆಚೆಯ ಪ್ಲಾಟ್‌ಫಾರ್ಮಿನ ಮೇಲೆ 'ಫಾಸ್ಟ್' ಗಾಡಿಯೊಂದು ಬಂದಿತು. ಎರಡನೆಯ ವರ್ಗದೊಳಗಿನಿಂದ ವಸಂತ ಹೊರಬರುತ್ತಿದ್ದುದನ್ನು ನೋಡಿ ಮೋಹಿನಿಯ ಕಾಲುಗಳು ಪಾವಟಿಗೆಗಳ ಕಡೆಗೆ ಹೊರಳಿದವು. ವಸಂತನ ಕಣ್ಣುಗಳು ಮೋಹಿನಿಯನ್ನೇ ಹುಡುಕುತ್ತಿದ್ದವು. ಪಾವಟಿಗೆಗಳನ್ನಿಳಿಯುತ್ತಿರುವಾಗಲೆ ಅಡಿಯಲ್ಲಿ ನಿಂತ ಮೋಹಿನಿಯನ್ನು ಕಂಡು ನಸುನಕ್ಕು

ಕೈಸನ್ನೆ ಮಾಡಿದ. ಕೆಳಗಡೆ ಬಂದು,

"ಬಹಳ ತಡವಾಯಿತು, ಅಲ್ಲವೆ?" ಎಂದ.

"ಯಾಕೆ, ಗಾಡಿ ಸಿಕ್ಕಲಿಲ್ಲವೇನು?"

"ಗಾಡಿ ಸಿಕ್ಕದೇನು? ವಿಪರೀತ ಕೆಲಸ ಇವತ್ತು ಆಫೀಸಿನಲ್ಲಿ."

"ಹೀಗೊ? ನಾನಂದೆ, ಬರುತ್ತೇನೆಂದು ಹೇಳಿದ್ದನ್ನು ಪೂರ್ತಿ ಮರೆತೇ ಬಿಟ್ಟಿರೊ ಏನೋ ಎಂದು...."

"ಮರೆಯುವುದು ಸಾಧ್ಯವೇ ಇರಲಿಲ್ಲ. ಹಾಗೆ ನೋಡಿದರೆ ಇವತ್ತು ನಾನು ಆಫೀಸನ್ನು ನಾಲ್ಕೂವರೆಗೆ ಬಿಡಬೇಕೆಂದುಕೊಂಡಿದ್ದೆ. ಆದರೆ ಐದೂವರೆ ಯಾದರೂ ಬಿಡುಗಡೆಯಾಗಲಿಲ್ಲ."

"ನಾನಂತೂ ತೀರ ನಿರಾಶಳಾಗಿದ್ದೆ."

"ಯಾಕೆ, ನೀವು ಬಂದು ಬಹಳ ಹೊತ್ತಾಯಿತೇನು?"

"ಐದೂವರೆಗೆ ಸರಿಯಾಗಿ ಬಂದುಬಿಟ್ಟೆ, ಹೇಳಿದ ವೇಳೆಗೆ...."

"ಆಯಿತು, ಹೋದ ಸಾರೆ ನೀವು ತಡ ಮಾಡಿದ್ದಿರಿ...."

"ಅಂತೇ ಈ ಸಲ ನೀವು ತಡ ಮಾಡಿದಿರೇನು?"

"ಹಾಗೇನೂ ಅಲ್ಲ. ಕೆಲಸವಿದ್ದಿತೆಂದು ಹೇಳಿದೆನಲ್ಲ...."

"ಅಂತೂ ಹೋದ ಸಾರೆ ನಾನು, ಈ ಸಾರೆ ನೀವು. ಇಬ್ಬರೂ ಜೋಡು!"

ಮೋಹಿನಿ ಸಹಜವಾಗಿಯೆ ಮಾತನ್ನಾಡಿಬಿಟ್ಟಿದ್ದಳು. ಅವಳ ಕೊನೆಯ ಮಾತು ವಸಂತನಿಗೆ ವಿಚಿತ್ರವಾಗಿ ಭಾಸವಾಯಿತು. ಆದರೆ ಅಂಥ ಯಾವ ಸೂಚನೆಯೂ ಅವಳ ಮುಖದಲ್ಲಿರಲಿಲ್ಲ. ಗೇಟಿನೊಳಗಿಂದ ಹೊರಬೀಳುತ್ತಿರು ವಾಗ ವಸಂತನೆಂದ:

"ಮೊದಮೊದಲು ಬರಬಾರದೆಂದೇ ಮಾಡಿದ್ದೆ...."

"ಯಾಕೆ?"

"ಮಾಡಬೇಕಾದ ಮುಖ್ಯ ಕೆಲಸವನ್ನು ಮಾಡಿರಲಿಲ್ಲ."

"ಏನದು ಕೆಲಸ?"

"ಆನಂದರಾಯನನ್ನು ಕಾಣುವುದು."

"ಓ! ಯಾಕೆ, ಅವರು ಸಿಕ್ಕಲಿಲ್ಲವೇನು?"

"ಇಲ್ಲ. ಅಂತೆಯೆ ಬಂದಾದರೂ ಮಾಡುವುದೇನು ಅಂದುಕೊಂಡಿದ್ದೆ."

" ನೀವು ಬಂದಿರದಿದ್ದರೆ...."

" ಏನಾಗುತ್ತಿತ್ತು ? "

" ಆಗುವುದೇನು ? ಒಂದು ಗಂಟೆ ಕಾದು ಕಾದು ಬೇಸತ್ತು, ನಿರಾಶೆ ಯಿಂದ ತಿರುಗಿ ಹೋಗುತ್ತಿದ್ದೆ...."

" ನಿರಾಶೆ ಯಾಕೆ ? "

' ನೀವು ಬಾರದಿದ್ದುದಕ್ಕೆ....' ಎಂದು ಹೇಳಬೇಕೆಂದಿದ್ದ ಮೋಹಿನಿ ನಸುನಕ್ಕಳು. ಆ ನಗುವಿನಲ್ಲಿ ಅವಳ ಮಾತಿನಲ್ಲಿಯಕಿಂತ ಹೆಚ್ಚಿನ ಅರ್ಥ ವಿದ್ದಂತೆ ವಸಂತನಿಗೆನಿಸಿತು. ವಸಂತನ ಪ್ರಶ್ನೆಗೆ ನೇರವಾಗಿ ಉತ್ತರ ಹೇಳುವುದು ಮೋಹಿನಿಗೆ ಸಾಧ್ಯವೆನಿಸಲಿಲ್ಲ. ಮಾತು ತಪ್ಪಿಸಬೇಕೆಂದು ಬೇಕೆಂತಲೇ ಕೇಳಿದಳು :

" ಯಾರಾದರೂ ಬರುತ್ತೇನೆಂದು ಹೇಳಿ ಬರದಿದ್ದರೆ ಅವರಿಗಾಗಿ ದಾರಿ ಕಾಯುವವರಿಗೆ ನಿರಾಶೆಯಾಗುವುದಿಲ್ಲವೆ ? " ಎಂದು ಕಿಲಕಿಲನೆ ನಕ್ಕಾಗ ಅವಳ ಮೋಹನರೂಪ ಯಾರನ್ನೂ ಮೈಮರೆಸುವಂತಿತ್ತು. ಆ ನಗುವಿನ ಪರಿಣಾಮ ವಸಂತನ ಮನಸ್ಸಿನ ಮೇಲೆ ಆ ಕ್ಷಣಕ್ಕೆ ಆಗದಿರಲಿಲ್ಲ. ವಸಂತ ಕೇಳಿದ :

" ಎಲ್ಲಿಗೆ ನಾವೀಗ ಹೊರಟದ್ದು ? "

" ಎಲ್ಲಿಯೇನು ? ಈಗಲೇ ತಡವಾಗಿದೆ. ಒಂದಿಷ್ಟು ಚಹ ತೆಗೆದು ಕೊಂಡು ಹೊರಟುಬಿಡಬೇಕು...."

" ಇಷ್ಟೇನು ಅವಸರ ? "

" ನಿಮಗೇನು ಗೊತ್ತು ? ನಮ್ಮ ನಾದಿನಿ ಗಡಿಯಾರ ಹಿಡಿದುಕೊಂಡೇ ಹಾದೀ ನೋಡುತ್ತಿರುತ್ತಾರೆ."

" ಯಾತಕ್ಕೆ ? "

" ನನ್ನನ್ನು ಬಂದ ಕೂಡಲೆ ವಿಚಾರಿಸಲಿಕ್ಕೆ . ."

" ಏನೆಂದು ? "

" ನಾನು ತಡವಾಗಿ ಹೋದ ಪ್ರತಿಯೊಂದು ನಿಮಿಷಕ್ಕಾಗಿಯೂ ಕಾರಣ ಹೇಳಬೇಕು. ಇಲ್ಲವಾದರೆ. .."

" ಇಲ್ಲವಾದರೆ ಏನು ? "

" ಇಲ್ಲವಾದರೆ ತಕ್ಕ ಸಂಭಾವನೆ ! "

" ಅಂತೂ ಒಳ್ಳೇದೇ ಆಯಿತಲ್ಲ? ತಡ ಮಾಡಿ ಹೋದರೆ ಸಂಭಾವನೆ ಎಂದಮೇಲೆ.. "

" ಅಷ್ಟೇನೂ ಆಸೆ ಪಡಬೇಕಾದ ಸಂಭಾವನೆಯಲ್ಲ ಅದು. ಶನಿವಾರ ಬೇಕಾದಷ್ಟಾಗಿ ಹೋಯಿತು "

ಇಬ್ಬರೂ ಒಂದು ಚಹದ ಅಂಗಡಿಯನ್ನು ಸೇರಿ ಒಬ್ಬರಿಗೊಬ್ಬರಿಗೆ ಇದಿರಾಗಿ ಕುಳಿತಾಗ ಮೋಹಿನಿಯ ಮುಖ ಕೊಂಚ ಗಂಭೀರವಾಗಿತ್ತು. ಶನಿವಾರದ ಪ್ರಕರಣ ಅವಳ ಮನಸ್ಸನ್ನು ನೋಯಿಸಿತ್ತು. ಆ ನೋವೇ ಅವಳ ಮುಖದ ಮೇಲೆ ಸ್ಪಷ್ಟವಾಗಿ ಒಡೆದುಕಾಣುತ್ತಿತ್ತು. ಆ ಸಾಯಂಕಾಲ ನಡೆದ ಇತಿವೃತ್ತವನ್ನೆಲ್ಲ ವಸಂತನಿಗೆ ಸ್ವಲ್ಪದರಲ್ಲಿ ವಿವರಿಸಿದಾಗ ವಸಂತ ತುಂಬ ನೊಂದುಕೊಂಡ. ಅವನಂದ :

" ಹಾಗಾದರೆ ನೀವು ಇಲ್ಲಿಗೆ ಇಂದು ಬರಬಾರದಾಗಿತ್ತು."

" ಬರಬಾರದಾಗಿತ್ತೆ ? "

" ಹೌದು."

" ಯಾಕೆ ? "

" ನನ್ನಿಂದ ನಿಮಗೆ ಅಷ್ಟು ತೊಂದರೆಯಾಯಿತು ! "

" ಅಂಥ ಪ್ರಸಂಗ ಹೆಚ್ಚುಕಡಿಮೆ ಪ್ರತಿನಿತ್ಯ ನಡೆಯುತ್ತದೆ ! "

" ಆದರೆ ನಡೆಯಗೊಡಬಾರದು. ಅಲ್ಲವೆ ? "

" ನಡೆಯಬಾರದು—ಅದಕ್ಕೆ ನಾನೇನು ಮಾಡಬಲ್ಲೆ ? "

" ನೀವು ತುಸು ಮೆತ್ತಗಾಗಿ ಉತ್ತರ ಕೊಟ್ಟಿದ್ದರೆ ಎಲ್ಲವೂ ಸರಿಯಾಗಿರುತ್ತಿತ್ತೇನೊ."

" ಆಯಿತು. ಬಾಯಿಂದಾದರೂ ಅವರನ್ನು ಸುಮ್ಮನಾಗಿರಿಸುತ್ತೇನೆಂದು ಬದುಕಿಯಾದರೂ ಇದ್ದೇನೆ. ಇಲ್ಲವಾದರೆ ಏನಾಗುತ್ತಿದ್ದೆನೊ ? "

ಮೋಹಿನಿಯ ಮಾತು ಸುಳ್ಳಲ್ಲವೆನಿಸಿತು ವಸಂತನಿಗೆ. ಮೆತ್ತಗೆ ಕಂಡಲ್ಲಿ ಮೊಳಕೈಯಿಂದ ಅಗಿಯುವ ಜಗತ್ತಿನಲ್ಲಿ ವಸಂತನಿಗಾದರೂ ತನ್ನ ಸ್ವಭಾವದ ಮಾರ್ದವಕ್ಕೆ ಪ್ರತಿಯಾಗಿ ಎಷ್ಟೋ ಸಲ ಸಲ್ಲದ ಸಂಭಾವನೆ ಸಿಕ್ಕುತ್ತಿತ್ತು. ಅವನಂದ :

" ನನಗೆ ಇದೇ ವಿಚಿತ್ರವೆನಿಸುತ್ತದೆ—ಮನುಷ್ಯ ಇಷ್ಟು ಕಠೋರವಾಗಿ ಹೇಗೆ ವರ್ತಿಸುತ್ತಾನೆ ? "

" ಮನುಷ್ಯರಾಗಿದ್ದವರಿಗೆ ಅದು ವಿಚಿತ್ರವೆನಿಸಬಹುದು. ಮನುಷ್ಯರಲ್ಲದವರಿಗೆ ಅದು ಸಹಜವೆ ಆಗಿ, ಕಠೋರತನ ಅವರ ಸ್ವಭಾವವಾಗಿಬಿಡುತ್ತದೆ... "

ಮೋಹಿನಿಯ ಮುಖದಲ್ಲಿ, ಮಾತಿನಲ್ಲಿ ನೋವಿತ್ತು. ಸಮಾಧಾನದ ದನಿಯಲ್ಲಿ ವಸಂತ ಹೇಳಿದ :

" ಹೋಗಲಿ, ಅವರವರ ದೋಷ ಅವರವರ ಪಾಲಿಗೆ. ನಾವೇನು ಮಾಡಬಹುದು ? ನಮ್ಮಷ್ಟಕ್ಕೆ ನಾವು ಸರಿಯಾಗಿ ಇದ್ದುಬಿಟ್ಟರೆ ಆಯಿತು... "

" ನಾವೇನೊ ಇರಬಹುದು. ಅವರ ಮಟ್ಟಿಗೆ ಅವರಿದ್ದರೆ ಯಾರಿಗೂ ತೊಂದರೆಯಿರಲಿಲ್ಲ. ಆದರೆ ಇನ್ನೊಬ್ಬರ ದುಷ್ಟತನ ನಮ್ಮ ಸುಖವನ್ನು ಹಾಳು ಮಾಡಿದಾಗ ಮಾತ್ರ ಸಹನೆ ತಪ್ಪುತ್ತದೆ...."

ವಸಂತ ದೀರ್ಘವಾದ ಯೋಚನೆಯಲ್ಲಿದ್ದಂತೆ ಕಾಣುತ್ತಿತ್ತು. ಅವನಂದ :

" ನನಗಂತೂ ಒಮ್ಮೊಮ್ಮೆ ಅನಿಸುತ್ತದೆ, ಒಟ್ಟಿನಲ್ಲಿ ಯಾರು ಸರಿ, ಯಾರು ತಪ್ಪು ಹೇಳುವುದೆ ತೀರ ಕಠಿಣ ಎಂದು. ಯಾರಿಗೆ ಗೊತ್ತು ? ನಮ್ಮ ನಿಮ್ಮ ವಿಚಾರಸರಣಿಯೇ ತಪ್ಪಿರಬಹುದು. ಅವರದೇ ಸರಿಯಾಗಿದ್ದರೆ ? "

ವಸಂತನ ವಿಚಾರಸರಣಿ ಮೋಹಿನಿಗೆ ಒಪ್ಪಿಗೆಯಾಗಲಿಲ್ಲ. ಅವಳಂದಳು :

" ನಿಮ್ಮ ಮಾತನ್ನು ಒಪ್ಪಿದರೆ ಮುಗಿದೇಹೋಯಿತು. ಯಾರಿಗೂ ಬದುಕಿರುವುದೇ ಸಾಧ್ಯವಾಗಲಿಕ್ಕಿಲ್ಲ."

" ಹಾಗಾದರೆ ಪ್ರತಿಯೊಬ್ಬನಿಗೂ ತನಗೆ ತೋರಿದ್ದೇ ಸರಿಯಾದ ದಾರಿಯೆ ? "

" ಯಾಕಾಗಬಾರದು ? "

" ತನಗೆ ತೋರಿದ್ದೇ ಸರಿಯಾದ ದಾರಿ ಆಗಬಹುದು. ಆದರೆ ಅದು ತನ್ನ ಹೊರತು ಇನ್ನೂ ಹತ್ತು ಜನರಿಗೂ ಸರಿಯಾಗಿ ಕಂಡಿರಬೇಕು " ಎಂದ ವಸಂತ ಶಾಂತನಾಗಿ. ವಸಂತ ತನ್ನ ವಿರುದ್ಧವಾಗಿ ಏನಾದರೂ ಸೂಚಿಸುತ್ತಿರಬಹುದೆಂಬ ಸಂಶಯ ಮೋಹಿನಿಯ ಮನಸ್ಸಿನೆದುರು ಸುಳಿದುಹೋಯಿತೇನೊ. ಆದರೂ ಅದನ್ನು ತೋರಗೊಡದೆ ಕೇಳಿದಳು :

" ಹಾಗಾದರೆ ವಿಚಾರಸ್ವಾತಂತ್ರ್ಯಕ್ಕೆ ಅವಕಾಶವೇ ಇಲ್ಲವಾಯಿತು—

ಅಲ್ಲವೆ ? ”

“ ವಿಚಾರಸ್ವಾತಂತ್ರ್ಯವಿರಬಹುದು. ಆದರೆ ಅದರಿಂದ ಎರಡನೆಯವರ ಸುಖ ಹಾಳಾಗುತ್ತಿದ್ದರೆ ಅದು ಅವಿಚಾರಸ್ವಾತಂತ್ರ್ಯ....”

ಮೋಹಿನಿಗೆ ವಸಂತ ತನ್ನ ಪರವಾಗಿ ಮಾತಾಡುತ್ತಿದ್ದನೊ, ತನಗೆ ವಿರುದ್ಧವಾಗಿ ಮಾತಾಡುತ್ತಿದ್ದನೊ ತಿಳಿಯದಾಯಿತು. ತನ್ನ ವಿರುದ್ಧವಾಗಿ ಮಾತಾಡುತ್ತಿದ್ದನೆಂದು ಗ್ರಹಿಸಿಯೇ ಅವಳು ಕೇಳಿದಳು :

“ ನನ್ನಿಂದ ಉಳಿದವರಿಗೆ ತೊಂದರೆಯಾಗುತ್ತಿದೆಯೆಂದಮೇಲೆ ನನ್ನದೇ ತಪ್ಪು ಎಂಬುದೇ ನಿಮ್ಮ ಅಭಿಪ್ರಾಯ ? ”

“ ನಾನೆಲ್ಲಿ ಹಾಗೆ ಹೇಳಿದೆ ? ”

“ ಹಾಗಾದರೆ ಮತ್ತೇನು ? ”

“ ನಿಮ್ಮಿಂದ ಈಗ ಅವರಿಗೆ ತೊಂದರೆಯಾಗುತ್ತಿರಬಹುದು, ಅವರಿಂದ ನಿಮಗೆ ತೊಂದರೆಯಾಗುತ್ತಿದೆ. ಇಬ್ಬರೂ ದೋಷವನ್ನು ಒಪ್ಪುವಂತಿಲ್ಲ.... ಇದಕ್ಕೆ ಪರಿಹಾರವೇನು ? ”

“ ಇದಕ್ಕೆಲ್ಲಿಯ ಪರಿಹಾರ ? ಇಬ್ಬರಲ್ಲೊಬ್ಬರು ಇಲ್ಲವಾಗುವುದೇ ಪರಿಹಾರ ! ” ಮೋಹಿನಿ ಕಟುವಾಗಿ ಮಾತನಾಡುತ್ತಿದ್ದಳು. ಅವಳ ದನಿಯಲ್ಲಿ ಆವೇಶ ಬಂದಂತಿತ್ತು. ಮುಖ ಕೆಂಪೇರತೊಡಗಿತ್ತು. ಅವಳಂದಳು :

“ ನಾನು ನೂರು ಬಾರಿ ಯೋಚಿಸಿದ್ದೇನೆ. ಕಂಡವರ ಬೆನ್ನು ಹತ್ತಿ ಹತ್ತು ಗಳಿಗೆ ಮೋಜಿನಲ್ಲಿ ವೇಳೆ ಕಳೆಯುವುದೇ ನನ್ನ ಧ್ಯೇಯವಾಗಿಲ್ಲ. ನನ್ನ ಹೃದಯದಲ್ಲಿಯ ಕೋಲಾಹಲವನ್ನು ತಿಳಿದುಕೊಳ್ಳುವ ಯೋಗ್ಯತೆ ಅವರೊಬ್ಬರಲ್ಲಿಯೂ ಇಲ್ಲ. ಹೆಂಡತಿ ಎಂದ ಮಾತ್ರಕ್ಕೆ ಬೇಕಾದುದನ್ನು ಮಾಡಬಹುದೆ ? ಹೆಂಗಸು ಎಂದ ಮಾತ್ರಕ್ಕೆ ಬೇಕಾದ ಹಾಗೆ ಆಡಬಹುದೆ ? ಹೊಣೆಗಾರಿಕೆ ತಿಳಿಯದ ಹುಚ್ಚು ಹುಮ್ಮಸದ ಹುಡುಗಿಯಲ್ಲ ನಾನು ! ಇವರ ಕಠೋರತನಕ್ಕಿಂತಲೂ ಇವರ ವಿಚಾರಶೂನ್ಯತೆಗೆ ಹೇಸಿಹೋಗಿದೆ ನನ್ನ ಮನಸ್ಸು....”

ಮೋಹಿನಿ ತಟ್ಟನೆ ತಡೆದಳು. ಸಂತಾಪ ಅವಳ ಮುಖದ ಮೇಲೆ ಸ್ಪಷ್ಟವಾಗಿ ಕಾಣುತ್ತಿತ್ತು. ವಸಂತನಿಗೆ ಆ ಕ್ಷಣಕ್ಕೆ ಅವಳು ಆನಂದನ ಹೆಂಡತಿಯಾದ ಮೋಹಿನಿಯಾಗಿ ಕಾಣಲಿಲ್ಲ. ಗಂಡನ ಹುಚ್ಚು ಹೆಗ್ಗಳಿಗೆ ಬಲಿಯಾಗಿ, ನೆಲಕ್ಕೆ ಬಿದ್ದು, ಏಳಲಾರದೆ ನರಳುತ್ತಿರುವ ಸಾವಿರಾರು ಹೆಣ್ಣು ಹೃದಯಗಳ

ಸಂತಾಪಮೂರ್ತಿಯಾಗಿ, ಅವುಗಳ ನಿರಾಶೆಯ ಸಂಕೇತವಾಗಿ ಕಂಡಳು. ಅವಳ ಪ್ರತಿಯೊಂದು ಮಾತನ್ನೂ ವಸಂತ ಒಪ್ಪುತ್ತಿದ್ದ. ಆದರೆ ಅವಳ ಈ ವಿಚಾರಗಳು, ತೀರ ಸಾಮಾನ್ಯ ಸಾಮಾಜಿಕ ವಿಚಾರಗಳ ಆಶ್ರಯದಲ್ಲಿ ಬೆಳೆದಿದ್ದ ಆನಂದರಾಯನಿಗೆ, ಅವನ ಮನೆಯವರಿಗೆ ಸರಿಹೋಗುವುದು ಸಾಧ್ಯವಾಗಿ ಕಾಣಲಿಲ್ಲ. ಮೋಹಿನಿಗೆ ನಿರಾಶೆಯ ಹೊರತು ಬೇರೆ ದಾರಿಯಿಲ್ಲವೆನಿಸಿದಾಗ ಅವಳಿಗಾಗಿ ಅವನ ಹೃದಯ ಕಳವಳಪಟ್ಟಿತು. ವಸಂತ ಹೇಳಿದ :

"ನಿಮ್ಮ ಅಭಿಪ್ರಾಯವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಯಾವ ವಿಕೃತಿಯ ಫಲವಾಗಿಯೋ ಯಾರು ಬಲ್ಲರು, ವ್ಯಕ್ತಿಯ ಸುಖಕ್ಕೂ ಸಮಾಜದ ವಿಚಾರಕ್ಕೂ ಇಂದು ಪ್ರತಿಕ್ಷಣಕ್ಕೂ ತಿಕ್ಕಾಟ ನಡೆಯುತ್ತಿದ್ದಂತಿದೆ. ಮನುಷ್ಯ ತನ್ನ ವ್ಯಕ್ತಿತ್ವಕ್ಕೆ ಎರವಾದರೂ ಆಗಬೇಕು, ಇಲ್ಲವಾದರೆ ಸಮಾಜದ ಕುದುರೆಯ ಕಾಲಿಗೆ ಆಹುತಿಯಾದರೂ ಆಗಬೇಕು...."

"ಎರಡನೆಯ ಮಾರ್ಗ ನನ್ನಿಂದ ಸಾಧ್ಯವಿಲ್ಲ ..."

"ಹಾಗಾದರೆ ಸುಖದ ಆಸೆಯನ್ನು ಬಿಟ್ಟುಬಿಡಬೇಕು!"

"ಅದನ್ನೆಂದಿಗೋ ಬಿಟ್ಟಿದ್ದೇನೆ. ಆದರೂ ಏನೋ ಒಮ್ಮೊಮ್ಮೆ ಸುಖವಾಗಿದ್ದ ಗಂಡಹೆಂಡಿರನ್ನು ನೋಡಿದಾಗ ಎದೆ ಅಳುಕುತ್ತದೆ—ಇನ್ನೊಬ್ಬರಿಗಿದ್ದದ್ದು ನಮಗಿಲ್ಲವಲ್ಲಾ ಎಂದು—ನಾವೂ ಅಷ್ಟೇ ಸುಖವಾಗಿ ಇರಬಹುದಾಗಿತ್ತು ಎಂದು...."

ಕೆಲಹೊತ್ತು ಇಬ್ಬರೂ ಸುಮ್ಮನಾದರು. ಚಹ ಯಾವಾಗಲೊ ಮುಗಿದು ಹೋಗಿತ್ತು. ಮೋಹಿನಿ ಕೈಗಡಿಯಾರವನ್ನು ನೋಡಿ, ಇನ್ನು ಹೊರಡಬೇಕೆಂದು,

"ಹೊರಡೋಣವೆ ಇನ್ನು?" ಎಂದು ಕೇಳಿದಳು.

"ಹುಂ...." ಎಂದು ಅರೆನಿಮಿಷ ತಡೆದು ಹೇಳಿದ :

"ನನ್ನಿಂದ ನಿಮಗೆ ಯಾವ ಸಮಾಧಾನವೊ ನನಗಂತೂ ತಿಳಿಯದು. ನೀವು ಬಂದಾಗ ಮಾತ್ರ ಏನೋ ಮಾತಾಡಬಹುದು ಎನಿಸಿ ನನ್ನ ಏಕಾಂತ ಮಾತ್ರ ಎಷ್ಟೋ ಪಾಲಿಗೆ ಹಗುರಾಗುತ್ತದೆ. ಇದಕ್ಕಾಗಿ ನಾನು ನಿಮಗೆ ನಿಜವಾಗಿಯೂ ಕೃತಜ್ಞನಾಗಿದ್ದೇನೆ...."

"ಆ ಮಾತು ದಯಮಾಡಿ ಹೇಳಬೇಡಿರಿ. ಇಷ್ಟು ಉಪಚಾರದ ಮಾತಿಗೆ

ಆರಂಭವಾದರೆ ಭೆಟ್ಟಿಯಾಗುವುದೇ ಕಷ್ಟವಾದೀತು."

"ಇಲ್ಲ, ನಿಜವಾಗಿಯೂ ನನಗನಿಸಿದ್ದನ್ನು ಹೇಳಿದೆ."

"ಇರಬಹುದು. ನನ್ನ ಮಾತನ್ನೇ ನೀವು ಹೇಳಿದಿರಿ. ನಾನೇ ಆ ಮಾತನ್ನು ಹೇಳಬೇಕು. ಆದರೆ ಉಪಚಾರದ ಮಾತು ಬೇಡವೆಂದು ಸುಮ್ಮ ನಿದ್ದೆ. ನಿಜವಾಗಿಯೂ ನನ್ನ ದುಃಖವನ್ನು ಕೇಳಲಿಕ್ಕೆ ಇಡೀ ಪ್ರಪಂಚದಲ್ಲಿ ಒಬ್ಬರಾದರೂ ಸಿದ್ಧರಾದರಲ್ಲಾ ಎಂದು ನನಗೆ ಆದ ಸಮಾಧಾನವನ್ನು ಬಾಯಿಂದ ಹೇಳಲಾರೆ...."

ಮೋಹಿನಿಯ ಕಂಠ ಗದ್ಗದಿತವಾಗಿತ್ತು. ವಸಂತನೆಂದ :

"ಆ ದಿವಸ ನೀವು ಹೊರಟುಹೋದಮೇಲೆ ನನಗೆ ಏಕಾಂತ ಅಸಹ್ಯ ವಾಯಿತು. ಏನೇನನ್ನೋ ಯೋಚಿಸುತ್ತ ಹಾಗೆಯೆ ಚರ್ನಿರೋಡಿನ ವರೆಗೆ ಕಾಲೆಳೆಯುತ್ತ ಹೋದೆ...."

"ಆಮೇಲೆ ?"

"ಆಮೇಲೆ ದಾದರಿಗೆ ಹೋಗಿದ್ದೆ, ಒಬ್ಬ ಗೆಳೆಯನ ಹತ್ತಿರ....ಹೊ ! ಹೇಳಲಿಕ್ಕೆ ಮರೆತೇ ಇದ್ದೆ. ದಾದರಿನಲ್ಲಿ ನಿಮ್ಮ ಭಾಸ್ಕರರಾಯ ಸಿಕ್ಕಿದ್ದ."

"ಏನನ್ನುತ್ತಿದ್ದರು ?"

"ಏನನ್ನುವುದು ? ಅದೇ ಮಾತು, ಕೆಟ್ಟ ಮಾತು. ನನಗೆ ಎಷ್ಟೊ ಸರಿಬರಲಿಲ್ಲ."

"ಇನ್ನೂ ಗೊತ್ತಾಗಬಹುದು."

"ಎಲ್ಲಿ ಕೆಲಸ ಮಾಡುತ್ತಾರೆ ಅವರು ?"

"ಅವರು ಮಾಡದ ಕೆಲಸವೇ ಇಲ್ಲ. ಪರೇಳದಲ್ಲಿ ಎಲ್ಲಿಯೊ ಒಂದು ಶಾಲೆಯಲ್ಲಿ ಶಿಕ್ಷಕರಾಗಿದ್ದಾರೆ. ಅಲ್ಲಿ ಎಷ್ಟು ದಿವಸ ತಡೆಯಬೇಕಾಗಿದೆ ಅವರು ?"

"ಯಾಕೆ ?"

"ಎಲ್ಲಿ ಹೋದರೂ ಒಂದೇ ಹಾಡು. ಇದು ಅವರಿಗೆ ಮೂರನೆಯದೊ ನಾಲ್ಕನೆಯದೋ ಶಾಲೆ. ಎಲ್ಲೆಲ್ಲಿಯೂ ಅದೇ ಕಾರಣಕ್ಕಾಗಿಯೇ ಅರ್ಧಚಂದ್ರ ........ಈಗ ಕೂಡ ಹೆಣ್ಣು ಹುಡುಗಿಯರಿದ್ದ ಯಾವ ಕ್ಲಾಸನ್ನೂ ಇವರಿಗೆ ಕೊಟ್ಟಿಲ್ಲವಂತೆ...."

ಎಂದು ಭಾಸ್ಕರರಾಯನನ್ನು ಕುರಿತು ಮಾತನಾಡುತ್ತಲೆ ಇಬ್ಬರೂ ಚಹ

ದಂಗಡಿಯಿಂದ ಹೊರಬೀಳುತ್ತಿದ್ದಾಗ ಬಲಬದಿಯ ಬೀದಿಯ ಮೂಲೆಗೆ ಭಾಸ್ಕರ ರಾಯನೇ ನಿಂತಿದ್ದನ್ನು ಅವರಿಬ್ಬರೂ ನೋಡಲಿಲ್ಲ. ಯಾರ ಜೊತೆಯಲ್ಲಿಯೊ ಮಾತನಾಡುತ್ತ ನಿಂತಿದ್ದ. ಇವರಿಬ್ಬರೂ ಅಂಗಡಿಯಿಂದ ಹೊರಬಿದ್ದು ನೇರ ವಾಗಿ ಸ್ಟೇಶನ್ನಿನ ಕಡೆಗೆ ಸಾಗಿದ್ದನ್ನು ಆತ ನೋಡಿದನಲ್ಲದೆ ಜೊತೆಗಾರರನ್ನು ಅಲ್ಲಿಯೆ ಬಿಟ್ಟು ಅವಸರವಸರವಾಗಿ ದೂರಿನಿಂದಲೆ ಅವರನ್ನು ಹಿಂಬಾಲಿಸಿದ. ವಸಂತ ಕೇಳಿದ :

" ಹಾಗಾದರೆ, ಮತ್ತೆ ಯಾವಾಗ ಭೆಟ್ಟಿ ? "

ಪ್ರಶ್ನೆಯನ್ನು ಕೇಳಿದುದೇನೋ ನಿಜ. ಆದರೆ ಮರುಕ್ಷಣಕ್ಕೆ ಅವನಿಗೇ ಆಶ್ಚರ್ಯವೆನಿಸಿತು. ತನಗೆ ತಿಳಿಯದಲೇ ತಾನು ಅವಳ ಸಹವಾಸವನ್ನು ಬಯಸಿ ಬೇಡುತ್ತಿದ್ದೇನಲ್ಲಾ ಎಂದು.

" ಬೇಕಾದಾಗ. ನಿಮ್ಮ ಅನುಕೂಲ."

" ನನ್ನ ಅನುಕೂಲವಾಗಬಹುದು. ನಿಮಗೆ ಮಾತ್ರ ತೊಂದರೆ."

" ಏನೂ ತೊಂದರೆಯಿಲ್ಲ. ಯಾವಾಗ ? "

" ಶನಿವಾರ ? "

" ಆಗಬಹುದು."

" ಎಲ್ಲಿ ? "

" ನೀವೇ ಹೇಳಿಬಿಡಿರಿ. ಎಲ್ಲಿಯಾದರೂ ಸ್ವಲ್ಪ ದೂರವಾಗಿಯೆ ಹೋಗಿ ಕುಳಿತುಕೊಳ್ಳೋಣ. ಮತ್ತೆಮತ್ತೆ ಈ ಚಹದ ಅಂಗಡಿ ಬೇಸರವಾಗಿಬಿಡುತ್ತದೆ. ಅಲ್ಲದೆ ಸುತ್ತಲು ನಮ್ಮ ನಿಮ್ಮನ್ನು ಬಲ್ಲವರು ಎಷ್ಟು ಜನವೊ."

ಭಾಸ್ಕರ ಇಬ್ಬರನ್ನೂ ನೋಡುತ್ತಲೇ ಇದ್ದ. ಮಾತು ಮಾತ್ರ ಅವನಿಗೆ ಕೇಳಿಸುವುದು ಸಾಧ್ಯವಿರಲಿಲ್ಲ.

" ಎಲ್ಲಿಗೆ ಹೋಗಬಹುದು ? " ಎಂದು ವಸಂತ ಯೋಚನೆಯಲ್ಲಿದ್ದಂತೆ ಕೇಳಿದ.

" ಜುಹುಕ್ಕೆ ಹೋಗೋಣವೆ ? " ಎಂದು ಸೂಚಿಸಿದಳು ಮೋಹಿನಿ.

" ಜುಹು ಬೇಡ ! "

" ಯಾಕೆ ? "

" ಶನಿವಾರ ಅಲ್ಲಿ ವಿಪರೀತ ಜನ...."

" ಜನ ಬರುವುದು ಸಾಯಂಕಾಲ. ನಾವು ಅಲ್ಲಿಗೆ ಮೂರು ಗಂಟೆಗೇ ಹೋಗಿ ಐದರೊಳಗಾಗಿ ತಿರುಗಿ ಬಂದುಬಿಡಬಹುದು."

" ಹಾಗಾದರೆ ಆಗಬಹುದು. ನೀವು ಎಲ್ಲಿ ಕಾಯುವಿರಿ ? "

" ಸಾಂತಾಕ್ರುಸ್ ನಿಲ್ದಾಣದಲ್ಲಿರುವೆ. ಗಡಿಯಾರದ ಹತ್ತಿರ. ಆಂ? "

" ಆಲ್‌ರಾಯ್ಟ್...."

" ನೀವು ಎಷ್ಟೊತ್ತಿಗೆ ಬರುತ್ತೀರಿ ? "

" ಸುಮಾರು ಎರಡೂವರೆ. ಸರಿಯೆ ? "

" ಹುಂ...."

ಮೂರು-ನಾಲ್ಕು ಹೆಜ್ಜೆ ಮುಂದೆ ಹೋಗಿ ತಿರುಗಿ ವಸಂತನನ್ನೇ ನೋಡಿ, 'ನಾನಿನ್ನು ಹೊರಡುವೆ' ಎಂದು ಕೊರಳಲ್ಲಾಡಿಸಿ ಸೂಚಿಸಿದಳು. ವಸಂತ ನಾದರೂ ಕಣ್ಣಸನ್ನೆಯಿಂದಲೆ ಅನುಮತಿಯಿತ್ತ.

ನಿಲ್ದಾಣದಿಂದ ತಿರುಗಿ ಬರುತ್ತಿದ್ದ ವಸಂತ ತನ್ನನ್ನು ನೋಡಿಯಾನೆಂದು ಭಾಸ್ಕರ ನಿಂತ ಸ್ಥಳದಿಂದ ಹೊರಟು ಬೇರೆ ದಾರಿ ಹಿಡಿದ. ಬಲು ದಿವಸ ಕಾಯ್ದು ಸಾಧಿಸಿದ್ದ ಸಮಯ ಇಂದು ಅವನಿಗೆ ಸಿಕ್ಕಂತಾಗಿತ್ತು. ತನ್ನ ಕೈಯಲ್ಲಿ ಅಜೇಯವಾದ ಶಸ್ತ್ರವೊಂದು ಸಿಕ್ಕ ವಿಜಯೋತ್ಸಾಹ ಆತನನ್ನು ಉತ್ಸಾಹಿತನನ್ನಾಗಿ ಮಾಡಿತ್ತು. ಈ ಶಸ್ತ್ರದಿಂದ ಮೋಹಿನಿಯನ್ನು ನಿಸ್ಸಂದೇಹ ವಾಗಿ ಮಣಿಸಬಹುದೆಂದುಕೊಂಡ. ಆದರೆ ತಾನವಳನ್ನು ಮಣಿಸಬಹುದೆಂಬ ವಿಶ್ವಾಸವನ್ನು ತನ್ನ ಕಣ್ಣೆದುರಿಗೆಯೇ ವಸಂತ ಆಕೆಯೊಡನೆ ನಗುತ್ತ ಕೆಲೆಯು ತ್ತಿದ್ದನೆಂಬ ಅಸೂಯೆ ಕೆಣಕುತ್ತಿತ್ತು. ವಸಂತನ ಮೇಲೆ ಸಿಟ್ಟು ಬಂದಿತು ಭಾಸ್ಕರನಿಗೆ. ಒಳ್ಳೆಯ ಮಾತುಗಳನ್ನಾಡಿ ಕಳ್ಳತನ ಮಾಡುವವನಿವ ಎಂದು ನಿರ್ಧಾರಮಾಡಿದ. ಆಗಲೇ ಅವರಿಬ್ಬರೂ ಪರಸ್ಪರ ಸಂಬಂಧಗಳಲ್ಲಿ ಯಾವ ಮಟ್ಟವನ್ನು ಮುಟ್ಟಿರಬಹುದೊ ಎಂದು ಸಂಶಯಗೊಂಡ. ಆದರೆ ಅವನ ಸಂಶಯ-ಸಂತಾಪಗಳಲ್ಲಿ ಅಸೂಯೆ ಹೆಚ್ಚಾಗಿತ್ತೇ ಹೊರತು, ಮೋಹಿನಿ ಇನ್ನೊ ಬ್ಬರ ಜೊತೆಯಲ್ಲಿ ಸಲಿಗೆಯಿಂದ ನಡೆಯುತ್ತಿದ್ದ ಬಗ್ಗೆ ಸಾತ್ವಿಕವಾದ ರೋಷವಿರ ಲಿಲ್ಲ. ವಸಂತನ ಜೊತೆಯಲ್ಲಿ ಮೋಹಿನಿಯನ್ನು ಕಂಡಾಗಿನಿಂದ ಅವರಿಬ್ಬರಿಗೂ ಅಯೋಗ್ಯವಾದ ದಾರಿಯನ್ನು ಆಗಲೇ ತುಳಿದುಬಿಟ್ಟಿರಬೇಕೆಂದೇ ಗ್ರಹಿಸಿದ. ಗಂಡು-ಹೆಣ್ಣುಗಳ ನಡುವೆ ಕಾಮದ ಹೊರತು ಬೇರೆಯಾದ ಸಂಬಂಧವಿರಬಹು

ದೆಂಬ ವಿಚಾರ ಕೂಡ ಹೊಳೆಯದ ಭಾಸ್ಕರ ಅವರಿಬ್ಬರನ್ನೂ ಆಗಲೇ ವ್ಯಭಿಚಾರದ ಆರೋಪಕ್ಕೆ ಗುರಿಮಾಡಿದ್ದರೆ ಆಶ್ಚರ್ಯವಿರಲಿಲ್ಲ. ಆದರೆ ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದ ಈ ಸನ್ನಿವೇಶದ ಉಪಯೋಗವನ್ನು ಯಾವ ರೀತಿಯಲ್ಲಿ ಮಾಡಿಕೊಳ್ಳಬಹುದು ಎಂಬ ಯೋಚನೆ ಮೊದಲು ಹುಟ್ಟಿದ ಅಸೂಯೆಯನ್ನು ಕ್ಷಣದಲ್ಲಿ ಹೊಡೆದೋಡಿಸಿತು.

ತಾನು ಕಣ್ಣಾರೆ ನೋಡಿದುದನ್ನು ಆನಂದನಿಗೆ ತಿಳಿಸಬೇಕೋ ಬೇಡವೊ ಎಂಬ ಯೋಚನೆ ಭಾಸ್ಕರನನ್ನು ಎಷ್ಟೋ ವೇಳೆ ಕಾಡಿತು. ಇಂದಿಲ್ಲ ನಾಳೆ ತಿಳಿಸುವುದಂತೂ ಖಂಡಿತ. ಹೇಗಾದರೂ ಆಕೆಯನ್ನು ತವರಿಗೆ ಕಳಿಸುವುದೆಂದು ಗೊತ್ತಾಗಿತ್ತು. ಮರುದಿವಸವೇ ಹೊರಡುವವಳಿದ್ದಳು. ಜೊತೆಯಲ್ಲಿ ಯಾರು ಹೋಗತಕ್ಕದ್ದೆಂಬುದು ಮಾತ್ರ ಗೊತ್ತಾಗಿರಲಿಲ್ಲ. ಆದ್ದರಿಂದ ಆನಂದನನ್ನು ಕಂಡರೆ ಒಂದೆರಡು ವಿಷಯ ಗೊತ್ತಾದರೂ ಆಗಬಹುದು, ವಸಂತನ ಹೆಸರನ್ನು ಹೇಳದಿದ್ದರೂ ಇನ್ನಾರ ಜೊತೆಯಲ್ಲಿಯೋ ಆಕೆಯನ್ನು ನೋಡಿದೆ ಎಂಬುದನ್ನಾದರೂ ತಿಳಿಸಬಹುದು, ಎಂದು ಹಲವಾರು ಯೋಚನೆಗಳಲ್ಲಿ ಆನಂದನ ಕಡೆಗೆ ಹೋಗುವುದೆಂದು ಗೊತ್ತುಮಾಡಿದ. ಆದರೆ ಅವನ ಕೋಣೆಯ ವಿಳಾಸ ನಿಶ್ಚಿತವಾಗಿ ಗೊತ್ತಿರಲಿಲ್ಲ. ಕೊನೆಗೊಂದು ವಿಚಾರ ಹೊಳೆಯಿತು. ಸಾಯಂಕಾಲದ ಊಟಕ್ಕೆ ಆತ ಬರುವ ಹೋಟಲು ಆತನಿಗೆ ಗೊತ್ತಿತ್ತು. ಸರಸರನೆ ಅಲ್ಲಿಗೆ ಹೋಗಿ, ಆನಂದ ಬಂದಾಗ ಆತನಿಗೆ ತನಗಾಗಿ ಕಾಯಲು ಹೇಳಬೇಕೆಂದು ಮ್ಯಾನೇಜರನಿಗೆ ಕೇಳಿಕೊಂಡ.

ಎಂಟೂವರೆ ಗಂಟೆಗೆ ಆನಂದ ಹೋಟಲಿನಲ್ಲಿ ಅಣ್ಣನಿಗಾಗಿ ಕಾಯುತ್ತಿದ್ದ. ಅವನಿಗೆ ತುಂಬ ಎದೆಗುದಿ. ಇನ್ನೇನು ನಡೆಯಿತೋ, ಮತ್ತೆಲ್ಲಿ ನಾರಾಯಣ ರಾಯರು ಕರೆಯಿಸಿದರೋ ಎಂದು. ಹೇಗಿದ್ದರೂ ಮರುದಿವಸವೇ ಮೋಹಿನಿಯನ್ನು ಊರಿಗೆ ಕಳಿಸುವುದಿದೆ ಎಂಬುದರಿಂದ ಎಷ್ಟೋ ಸಮಾಧಾನ ತಂದುಕೊಂಡಿದ್ದ. ಭಾಸ್ಕರ ಬರುತ್ತಲೇ ಸರಕ್ಕನೆ ಎದ್ದುಬಂದು ಕೇಳಿದ :

" ಏನು ಭಾಸ್ಕರ್, ಏನು ವಿಶೇಷ ? "

" ಏನೂ ಇಲ್ಲ ! "

" ನನಗೆ ತುಂಬ ಗಾಬರಿಯಾಗಿಹೋಗಿತ್ತು."

" ಅಂಥದೇನೂ ಇಲ್ಲ. ಈ ಕಡೆಯಿಂದ ಹೊರಟಿದ್ದೆ. ಎರಡು–ಮೂರು

ದಿವಸ ಭೆಟ್ಟಿಯೂ ಆಗಿರಲಿಲ್ಲ. ನೋಡಿಕೊಂಡು ಹೋಗೋಣವೆಂದೆ...."

"ಇಷ್ಟೇ ತಾನೆ ?"

"ಅಲ್ಲ, ಮತ್ತೆ, ನಾಳೆ ಊರಿಗೆ ಹೋಗುವುದು ಏನು ಮಾಡಿದಿ? ಈಗ ಬರುವಿಯೇನು ಬೋರಿವಲಿಗೆ ?"

"ಇವತ್ತು ಮಧ್ಯಾಹ್ನ ಹೋಗಿದ್ದೆ. ಅಕ್ಕನೆದುರು ಹೇಳಿ ಬಂದಿದ್ದೇನೆ. ನಾಳೆ ಹನ್ನೊಂದರ ಗಾಡಿಗೆ ಹೋಗಲು ಸಿದ್ಧವಾಗಿರುವಂತೆ ಆಕೆಗೆ ತಿಳಿಸು —ಎಂದು."

"ನೀನೇ ಈಗ ಬಂದಿದ್ದರೆ ಚೆನ್ನಾಗಿರುತ್ತಿತ್ತು. ಅಕ್ಕನ ಮಾತು ಎಷ್ಟರ ಮಟ್ಟಿಗೆ ನಡೆಯಬೇಕು ?"

"ಮತ್ತೆ ನಾನು ಬರಲಾರೆ, ಭಾಸ್ಕರ. ಇಂದು ಮಧ್ಯಾಹ್ನವೂ ಓದು ಸಾಗಲಿಲ್ಲ. ಬಂದರೆ ಇವತ್ತು ರಾತ್ರಿಯೂ ಹಾಳು. ನಾಳೆ ಮತ್ತೆ ಪ್ರವಾಸ...."

"ಹಾಗಾದರೆ ನಾಳೆ ನೀನೇ ಹೋಗುವಿಯೇನು ?"

"ನೋಡಬೇಕು, ನಾಳೆ ಬಂದನಂತರ. ಒಬ್ಬಳೇ ಹೋಗುತ್ತೇನೆಂದರೆ ಹೋಗಬಹುದು. ಬಹಳವಾದರೆ ಕಲ್ಯಾಣದ ವರೆಗೆ ಹೋಗಿಬರುವೆ."

"ನಾಳೆ ನನಗೆ ಕೆಲಸವಿಲ್ಲ. ಬೇಕಾದರೆ ನಾನು ಅಲ್ಲಿಯವರೆಗೂ ಹೋಗಿ ಬರಬಹುದು...."

"ಯಾತಕ್ಕೆ ಸುಮ್ಮನೆ ? ಮತ್ತೆ ಗಾಡಿ ಹಾಸಲು ಹಾಳು. ಅಷ್ಟೇನು ದೂರದ ಪ್ರವಾಸವೂ ಅಲ್ಲ."

ಭಾಸ್ಕರನಿಗೆ ಮತ್ತೆ ನಿರಾಶೆಯಾಯಿತು. ಆದಿತ್ಯವಾರ ಮುಂಜಾನೆ ಮನೆಯಿಂದ ಹೊರಟು ಬಂದಾಗಿನಿಂದ ಮೋಹಿನಿಯನ್ನು ನೋಡಿರದ ಆನಂದ ನಿಗೆ ಅವಳು ಹೇಗಿದ್ದಾಳೆಂಬುದನ್ನು ತಿಳಿಯುವ ಕುತೂಹಲವಾಗಿತ್ತು. ತಾನು ಅಲ್ಲಿಂದ ಹೊರಟು ಬರುವಾಗ ಸಿಡಿಸಿಡಿಯಿಂದಲೇ ಬಂದಿದ್ದರೂ ಮತ್ತೆ ಒಂದೆ ರಡು ದಿವಸಗಳಲ್ಲಿ ಮನಸ್ಸು ಮೆತ್ತಗಾಗಿ, ಅಂದು ನಡೆದುದಕ್ಕೆಲ್ಲವೂ ತಾನೇ ಕಾರಣವೆಂದುಕೊಳ್ಳುವವರೆಗೂ ಬಂದಿತ್ತು. ಅಣ್ಣನನ್ನು ಕೇಳಿದ :

"ನೀನು ಹೋಗಿದ್ದೆಯೇನು ಅಕ್ಕನಲ್ಲಿ ?"

"ಯಾಕೆ ?"

"ನಾನಿಂದು ಮಧ್ಯಾಹ್ನ ಹೋದಾಗ ಮೋಹಿನಿ ಕಾಲೇಜಿಗೆ ಹೋಗಿದ್ದಳು.

ಹೇಗಿದ್ದಾಳೋ ಅನ್ನುತ್ತಿದ್ದೆ...."

"ಹೇಗೇನು? ಸುಖವಾಗಿಯೇ ಇದ್ದಾಳೆ, ಎಂದಿನಂತೆ. ಇದೇ ಈಗ ಹೋದಳು ಇಲ್ಲಿಂದ."

"ಇದೇ ಈಗ!"

"ಈಗೆಂದರೂ ಅರ್ಧ ಗಂಟೆಯಾಗಿರಬೇಕು, ಅಷ್ಟೆ."

ನಿಜವಾಗಿಯೂ ಮೋಹಿನಿ ದಾದರನ್ನು ಬಿಟ್ಟು ಸುಮಾರು ಎರಡು ಗಂಟೆಯಾಗಿಹೋಗಿತ್ತು. ಆದರೆ ಎಂದಿನಂತೆ ಆನಂದನ ಮನಸ್ಸಿನಲ್ಲಿ ವಿಷಬೀಜವನ್ನು ಬಿತ್ತಿ ಬೆಳಸುವ ಯೋಚನೆಯಲ್ಲಿಯೆ ಇದ್ದ ಭಾಸ್ಕರನಿಗೆ ಅದೊಂದು ಉತ್ತಮ ಸಂಧಿಯಾಗಿ ದೊರೆಯಿತು.

"ಇಲ್ಲಿ—ಯಾರಲ್ಲಿ ಬಂದಿದ್ದಳು?"

"ನನಗೇನು ಗೊತ್ತು?"

"ನೀನೆಲ್ಲಿ ನೋಡಿದಿ?"

"ಅದೇ, ಸ್ಟೇಶನ್ನಿನ ಹತ್ತಿರದ ಮೂಲೆಯಲ್ಲಿ ಯಾರ ಜೊತೆಯಲ್ಲಿಯೋ ಮಾತನಾಡುತ್ತ ನಿಂತಿದ್ದೆ. ಆಚೆಯ ಬದಿಯಿಂದ ಹಾಯ್ದುಹೋದರು."

"ಮತ್ತೆ ಯಾರಿದ್ದರು?"

"ಯಾರ ಜೊತೆಯಲ್ಲಿಯೋ ಮಾತನಾಡುತ್ತಲೇ ಸ್ಟೇಶನ್ನಿನೊಳಗೆ ಹೋದಳು. ಯಾರು—ನನಗೆ ಗೊತ್ತಾಗಲಿಲ್ಲ!"

"ನೀನು ಮುಂದಕ್ಕೆ ಹೋಗಿ ನೋಡಬೇಕಾಗಿತ್ತು, ಭಾಸ್ಕರ್."

"ಏನು ನೋಡುವುದು? ಅಲ್ಲಿಯೆ ಯಾರಾದರೂ ಗುರುತಿನವರು ಸಿಕ್ಕಿರಬಹುದು ಅಂದುಕೊಂಡೆ."

"ಹೀಗೆನ್ನುತ್ತೀಯ?"

ಆನಂದನ ಮನಃಸ್ಥಿತಿ ವಿಚಿತ್ರವಾಗುತ್ತಿತ್ತು. ಅವನ ಸಂಶಯ ಮೂರ್ತಸ್ವರೂಪ ತಾಳಿ ತನ್ನ ಭೀಕರ ಚಿತ್ರವನ್ನು ಅವನೆದುರಿಗೆ ಹಿಡಿಯುತ್ತಿರುವಂತಿತ್ತು. ಮೋಡ ಚಿಕ್ಕದಾದರೂ ಸೂರ್ಯನನ್ನೇ ಪೃಥ್ವಿಯಿಂದ ಮರೆಮಾಡಬಲ್ಲಂತೆ ಭಾಸ್ಕರನಿಂದ ತಿಳಿದುಬಂದ ಸಮಾಚಾರ ಆನಂದನ ಮನಸ್ಸನ್ನೆಲ್ಲ ವ್ಯಾಪಿಸಿಬಿಟ್ಟಿತ್ತು. ಅವನೇನೂ ಮಾತನಾಡದಿದ್ದುದನ್ನು ನೋಡಿ, ಭಾಸ್ಕರ ಅವನ ಮನಃಸ್ಥಿತಿಯನ್ನು ತಿಳಿದು, ಸೋಗಿನ ಸಮಾಧಾನದಿಂದ ಹೇಳಿದ :

" ಅಂಥದೇನೂ ಇರಲಿಕ್ಕಿಲ್ಲ, ಆನಂದ. ಸುಮ್ಮನೆ ಯೋಚನೆಯಲ್ಲಿ ಬೀಳ ಬೇಡ. ಅಲ್ಲದೆ, ಹೇಗಾದರೂ ನಾಳೆ ಊರಿಗೆಯೆ ಹೋಗುತ್ತಾಳಲ್ಲ ? "

" ಹೋದರೇನಾಯಿತು ? ನಾಳೆ ಬೆಳಗ್ಗೆ ಬಂದಾಗ್ಗೆ ಕೇಳಿಯೇ ಬಿಡುತ್ತೇನೆ.

" ಹುಚ್ಚ ನೀನು, ಆನಂದ. ಕೇಳಿದರೆ ಏನಾಗಬೇಕಾಗಿದೆ? ಮತ್ತೆ ಜಗಳ. ಯಾವ ನಿಷ್ಕರ್ಷೆಯೂ ಆಗುವಂತಿಲ್ಲ. ಹಾಗೆ ನಿನಗೆ ಸಂಶಯವೇ ಇದ್ದರೆ ಇನ್ನು ನಾಲ್ಕು ದಿನ ತಡೆದು ನೋಡುವಿಯಂತೆ. ದುಡುಕಿದರೆ ಯಾವ ಪ್ರಯೋಜನವೂ ಇಲ್ಲ."

ಆನಂದ ಬೆವರೊರಸಿಕೊಂಡ. ಅವನ ಮನಸ್ಸು ಒಂದೇ ಒಂದು ಪ್ರಶ್ನೆಯ ಸುತ್ತಲೂ ತಿರುಗುತ್ತಿತ್ತು. 'ಅವಳ ಜೊತೆಯಲ್ಲಿ ಯಾರಿದ್ದಿರಬಹುದು ?' ಎಂದು.

" ನಾನೂ ಈಗಲೆ ಬಂದುಬಿಡುವೆ, ಭಾಸ್ಕರಾ. ನನ್ನಿಂದ ತಡೆಯುವುದೂ ಶಕ್ಯವಿಲ್ಲ."

" ಹುಚ್ಚನಂತೆ ಮಾಡಬೇಡ, ಆನಂದಾ. ನಾನೇ ನಿನಗೆ ಹೇಳಬಾರದಾಗಿತ್ತು ನೋಡು, ಆ ಮಾತನ್ನು—ಏನೋ ಮಾತಿನಲ್ಲಿ ಬಂದಿತು ಹೇಳಿಬಿಟ್ಟೆ. ಕಡ್ಡಿಯನ್ನು ಗುಡ್ಡವನ್ನಾಗಿ ಮಾಡಿಕೊಂಡು ಸುಮ್ಮನೇ ಮನಸ್ತಾಪ ಮಾಡಿಕೊಳ್ಳಬೇಡ. ಮೊದಲೇ ಪರೀಕ್ಷೆ ಸಮೀಪ ಬಂದಿದೆ...."

" ಹಾಗಾದರೆ ಈಗ ಬರಬೇಡ ಎನ್ನುತ್ತೀಯಾ ? "

" ಬೇಡ. ನಾಳೆ ಬಂದಾಗಲೂ ಆ ಮಾತನ್ನೆತ್ತಬೇಡ."

" ನೋಡೋಣ."

" ನಾಳೆ ನಾನೂ ಸ್ಟೇಶನ್ನಿಗೆ ಬರಲೇನು ? "

" ಯಾತಕ್ಕೆ ? ಅವಳು ಹೋಗುವುದು ಹತ್ತು ಹದಿನೈದು ದಿವಸ, ಅಷ್ಟೇನು ಸಾಮಾನೂ ಇರುವುದಿಲ್ಲ."

" ತಿಕೀಟು ? "

" ನಾಳೆ ತೆಗೆಯಬಹುದಲ್ಲ ? ಹನ್ನೊಂದರ ಪ್ಯಾಸೆಂಜರಿಗೆ ಅಷ್ಟೇನು ಗದ್ದಲವೂ ಇರುವುದಿಲ್ಲ."

" ನಾನು ನಾಳೆ ಬೆಳಗ್ಗೆ ದಾದರಿಗೆ ಬರುವವನಿದ್ದೇನೆ. ನಾನು ತಿಕೀಟು ತೆಗೆದು ಇಟ್ಟಿರುತ್ತೇನೆ. ಸುಮ್ಮನೆ ಆಯತ್ತವೇಳೆಗೆ ತೊಂದರೆ ಬೇಡ."

" ಸರಿ, ಹಾಗಾದರೆ ನೀನು ಅಲ್ಲಿಯೆ ಸ್ಟೇಶನ್ನಿನಲ್ಲಿಯೇ ಇರುತ್ತೀಯಾ ? "

" ಹುಂ, ನೀವು ಬಂದುಬಿಡಿರಿ. ನಾನು ಪ್ಲಾಟ್‌ಫಾರ್ಮು ಮೇಲೆಯೇ ಇರುವೆ."

ಜೊತೆಯಲ್ಲಿ ಊರಿಗೆ ಹೋಗಲು ಸಾಧ್ಯವಾಗದಿದ್ದರೂ ಸ್ಟೇಶನ್ ಮೇಲೆ ಯಾದರೂ ಕಾಣಬಹುದೆಂದು ನೆಪವೊಂದನ್ನು ಹೂಡಿ ಯಶಸ್ವಿಯಾದ, ಭಾಸ್ಕರ. ಆ ವಿಚಾರದಲ್ಲಿ ತಿಕೀಟು ಕೊಳ್ಳುವುದು ಒಂದೋ ಎರಡೋ ಎಂಬು ದನ್ನು ಕೇಳಲು ಮರೆತುಬಿಟ್ಟ. ಅದೇ ಹೊರಟಿದ್ದ ಆನಂದನನ್ನು ಕರೆದು ಮತ್ತೆ ಕೇಳಿದ :

" ಆನಂದಾ, ತಿಕೀಟು ಎಷ್ಟು ಹೇಳಲೆ ಇಲ್ಲವಲ್ಲ ? "

" ಒಂದೇ ತೆಗೆದುಕೊ ಮೊದಲು. ಆಮೇಲೆ ನೋಡೋಣವಂತೆ."

ಭಾಸ್ಕರ ಆನಂದನನ್ನು ಮತ್ತೊಮ್ಮೆ ಎಚ್ಚರಿಸಿದ :

" ಸುಮ್ಮನೆ ಯೋಚನೆಯಲ್ಲಿ ಬೀಳಬೇಡ, ಆನಂದಾ. ಅದರಲ್ಲಿ ಏನೂ ವಿಶೇಷವಿರಲಿಕ್ಕಿಲ್ಲ "

ಎಂದು ಬಾಯಿಂದ ಹೇಳಿದರೂ ' ಅಂತೂ ಕೆಲಮಟ್ಟಿಗಾದರೂ ಕೆಲಸ ವಾಯಿತಲ್ಲ ' ಎಂಬ ದುಷ್ಟ ಸಮಾಧಾನವನ್ನು ಪಡೆಯುತ್ತಿತ್ತು, ಆತನ ನೀಚ ಮನಸ್ಸು. ಆನಂದ ಹೆಜ್ಜೆಹಾಕುತ್ತಲೇ ಇದ್ದ. ಹೆಜ್ಜೆಹೆಜ್ಜೆಗೂ ' ಯಾರು ? ಯಾರು ? ' ಎಂದು ಪ್ರತಿಧ್ವನಿಸುತ್ತಿತ್ತು ಮನಸ್ಸು.

ಆನಂದ ಕೋಣೆಗೆ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡ. ಎಷ್ಟು ಪರಿ ಯಿಂದ ಸಮಾಧಾನ ತಂದುಕೊಂಡರೂ ಮನಸ್ಸು ಸ್ತಿಮಿತಕ್ಕೆ ಬರಲಿಲ್ಲ. ಒಂದು ಕ್ಷಣ—ಮೋಹಿನಿ ನಿಜವಾಗಿಯೂ ಕೆಟ್ಟವಳು, ಹಾದಿತಪ್ಪಿದವಳು, ಅವಳನ್ನು ಚೆನ್ನಾಗಿ ದಂಡಿಸಬೇಕೆಂದುಕೊಳ್ಳುತ್ತಿದ್ದ. ಆದರೆ ಮತ್ತೊಂದು ಕ್ಷಣದಲ್ಲಿ— ಹಾಗಿರಲಿಕ್ಕಿಲ್ಲ, ಇರುವುದು ಸಾಧ್ಯವಿಲ್ಲ, ಎನಿಸುತ್ತಿತ್ತು. ಆದರೆ ಸಂಶಯದ ಬೀಜ ಹೆಮ್ಮರವಾಗತೊಡಗಿತ್ತು. ಯಾರಿರಬಹುದು ?....ಯಾರಿದ್ದರೇನು ? ಅವಳ ಗೊಡವೆಯನ್ನೇ ಬಿಟ್ಟುಬಿಟ್ಟರಾಯಿತು. ಏನು ಬೇಕಾದುದನ್ನು ಮಾಡಿ ಕೊಳ್ಳಬಹುದು ಆಕೆ, ಎಂದೆನಿಸುತ್ತಿತ್ತು ಇನ್ನೊಂದು ಕ್ಷಣ. ಆದರೆ ಆಕೆಯನ್ನು ಬಿಟ್ಟುಬಿಡುವುದು ಅಷ್ಟು ಸುಲಭವಾಗಿ ಕಾಣಲಿಲ್ಲ. ಮೋಹಿನಿ ಆಕೆ ! ಮದುವೆ ಯಾಗಿ, ಮನೆಯೊಡತಿಯಾಗಿ, ಹೃದಯದರಸಿಯಾಗಲೆಂದು ಬಂದವಳು. ತನ್ನ

ಕನಸುಗಳಿಗೆ ಕಳಸವನ್ನಿಟ್ಟವಳು. ಇಂದು ಆ ಇಡೀ 'ಕನಸಿನ ಮನೆ' ಕುಪ್ಪ ಳಿಸಿ ಬೀಳುವಂತಾಗಿತ್ತು. ಸೊಗಸಿನ ಆ ಮನೆಯನ್ನು ಸೊಗಸಿನ ಮನೆಯೊಡತಿ ಯಾದ ಮೋಹಿನಿ ತನ್ನ ಕೈಯಿಂದಲೇ ಕೆಡಹುತ್ತಿದ್ದಳು. ಆನಂದನಿಗೆ ಅಪಾರ ದುಃಖವಾಯಿತು. ಇನ್ನೊಬ್ಬರ ಬಗ್ಗೆ ಅಸೂಯೆ, ತನ್ನ ಬಗ್ಗೆ ಕನಿಕರ, ಇಡೀ ಪ್ರಪಂಚದ ಬಗ್ಗೆ ರೋಷ—ಅವನ ಹೃದಯದಲ್ಲಿ ಆ ಕ್ಷಣಕ್ಕೆ ಹೋರಾಡುತ್ತಿದ್ದವು.

ಮೋಹಿನಿಯ ಬಗೆಯಲ್ಲಿ ಏನಾದರೊಂದು ನಿರ್ಧಾರಕ್ಕೆ ಬರಬೇಕೆಂದು ತೊಳಲಾಡುತ್ತಿದ್ದ ಆನಂದನ ಮನಸ್ಸು ಸಂಕಟಪಡುತ್ತಿತ್ತು. ಮಧ್ಯಾಹ್ನ ಓದಲಿಕ್ಕಾಗಿರಲಿಲ್ಲವೆಂದು ರಾತ್ರಿ ಒಂದೆರಡು ಗಂಟೆ ಹೆಚ್ಚಿಗೆ ಓದುವ ಕಾರ್ಯ ಕ್ರಮವನ್ನಿಟ್ಟುಕೊಂಡವ, ಈಗ ಹಾಸಿಗೆಯಲ್ಲಿ ನಿದ್ರೆಯೂ ಇಲ್ಲದೆ ಓದೂ ಇಲ್ಲದೆ ಹೊರಳಾಡುತ್ತಿದ್ದ. ಕೋಣೆಯಲ್ಲಿಯ ಸಂಗಡಿಗನಿಗೆ ಚೇಷ್ಟೆ ಮಾಡಲಿಕ್ಕೆ ಮಾತ್ರ ಅನುವಾಯಿತು.

"ಏನು ಆನಂದ, ಇವತ್ತು ಓದಿಗೆ ರಜೆಯೇನು?"

"ಯಾಕೊ, ಅಷ್ಟು ಸ್ವಸ್ಥವಿಲ್ಲ ಇವತ್ತು...." ಆನಂದನ ಸುಳ್ಳು ಉತ್ತರ.

"ದೇಹದಲ್ಲಿಯೊ, ಮನಸ್ಸಿನಲ್ಲಿಯೋ?" ಮಿತ್ರನ ಸವಾಲು.

"ಮನಸ್ಸಿಗೇನು ಧಾಡಿ?" ಎಂದು ಹುಸಿ ಪ್ರಶ್ನೆಯನ್ನು ಎಸೆದ ಆನಂದ.

"ಇಲ್ಲ. ಮದುವೆಯಾದವರ ಮನಸ್ಸು....ಅದಕ್ಕೆ ಕೇಳಿದೆ" ಮಿತ್ರ ನಕ್ಕ.

"ಹೌದು, ನೀನೆನ್ನುವುದೂ ನಿಜವೆ. ಮದುವೆಯಾದಮೇಲೆ ಓದುವುದು ಇರಬಾರದು...."

"ಅಥವಾ, ಓದಬೇಕೆನ್ನುವವರು ಮದುವೆಯಾಗಬಾರದು; ಅಂತೇ ನಾನಿನ್ನೂ ಮದುವೆಯ ವಿಚಾರವನ್ನು ಕೂಡ ಮಾಡಿಲ್ಲ, ನೋಡು...."

"ಹಾಗೆ ನೋಡಿದರೆ, ಮದುವೆಯ ವಿಚಾರವನ್ನು ಯಾವಾಗಲೂ ಮಾಡದೆ ಇರುವುದೇ ಒಳ್ಳೆಯದೆಂದು ಕಾಣುತ್ತದೆ!"

"ಓಹೋ! ಮದುವೆಯಾದನಂತರ ಎಲ್ಲರೂ ಹೇಳುವ ವಿಷಯ ಅದು. ಮದುವೆಯಾಗುವ ವರೆಗೆ ಅದರ ಸತ್ಯಾಸತ್ಯತೆ ತಿಳಿಯುವಂತಿಲ್ಲ!"

"ಆದಮೇಲೆ ತಿಳಿದೂ ಉಪಯೋಗವಿಲ್ಲ" ಎಂದು ಆನಂದ ನಕ್ಕುಬಿಟ್ಟ. ಆದರೆ ಆ ನಗೆ ಹಗುರು ಹೃದಯದಿಂದ ಹೊರಬಿದ್ದಿರಲಿಲ್ಲ. ಬೇಡವಾಗಿದ್ದರೂ ಪಾಲಿಗೆ ಬಂದ ಯಾವುದೋ ಅನುಭವದ ಪಡಿನೆಳಲ ಮ್ಲಾನತೆ ಇತ್ತು ಅದರ

ಮೇಲೆ. ಬಾಡಿಹೋದ ಹೂವಿನ ನಿರಾಶೆಯ ನಿಟ್ಟುಸಿರಿನಂತಿತ್ತು. ಆನಂದ ಸುಮ್ಮನಾದದ್ದನ್ನು ನೋಡಿ ಅವನ ಗೆಳೆಯ ಆತನನ್ನು ಕೆಣಕಬೇಕೆಂದೇ ಮತ್ತೆ ಮೊದಲುಮಾಡಿದ :

" ನೀನಿವತ್ತು ಸಾಯಂಕಾಲ ಸುಮ್ಮನೆ ಬೋರಿವಲಿಗೆ ಹೋಗಬೇಕಿತ್ತು ನೋಡು."

" ಯಾಕೆ ? "

" ಯಾಕೇನು ? ಮನಸ್ಸು ಅಲ್ಲಿ, ದೇಹ ಇಲ್ಲಿ ಆದರೆ, ಓದು 'ಹೇಗೆ ಸಾಗಬೇಕು ? " ಆನಂದನೆಂದುಕೊಂಡ : ' ಹೌದು, ಮನಸ್ಸು ಅಲ್ಲಿ, ನಿಜ. ಆದರೆ ನೀನು ತಿಳಿದುಕೊಂಡ ಅರ್ಥದಲ್ಲಿ ಅಲ್ಲ ! ' ಎಂದು.

" ಅದೆಲ್ಲ ಮದುವೆಯಾಗದಿದ್ದವರ ಹುಚ್ಚು ಕಲ್ಪನೆ ! "

" ಇರಬಹುದು. ಆ ಹುಚ್ಚಿನ ಮೂರ್ತಿಯೇ ನನ್ನೆದುರಿಗಿದೆ ! "

ಆನಂದ ಮತ್ತೆ ಸುಮ್ಮನಾದ. ಗೆಳೆಯನಿಗೆ ಇನ್ನೂ ನಿದ್ರೆ ಬಂದಂತೆ ಕಾಣಲಿಲ್ಲ. ಅವನಂದ :

" ಸುಮ್ಮನೆ ಇಲ್ಲಿ ಬಿದ್ದುಕೊಂಡರೆ ಏನಂತೆ ? ಎಲ್ಲಿಯಾದರೂ ಒಂದು ಪಿಕ್ಚರಿಗಾದರೂ ಹೋಗೋಣ, ನಡೆ. ನೀನಂತೂ ಇವತ್ತು ಓದುವ ಹಾಗಿಲ್ಲ."

" ಒಲ್ಲೆ. ನನಗೆ ತುಂಬ ಬೇಸರವಾಗಿದೆ."

" ಆಗಿದೆಯಾದರೂ ಏನೊ ನಿನಗೆ, ಅಂಥ ಬೇಸರ ಬರಲಿಕ್ಕೆ ? "

ಆನಂದನೆಂದುಕೊಂಡ : ' ನನ್ನ ಸಂಕಟ ನಿನಗೇನು ಗೊತ್ತು ? ' ಎಂದು. ಆದರೆ ಬಹಿರಂಗವಾಗಿ ಬೇರೆ ಉತ್ತರ ಕೊಟ್ಟ : " ಏನಾಗಿದೆಯೊ, ಯಾಕೋ, ಯಾವುದಕ್ಕೂ ಮನಸ್ಸಿಲ್ಲ."

" ಯಾವುದಕ್ಕೂ ? " ಗೆಳೆಯ ನಸುನಕ್ಕು ಕೇಳಿದ.

" ಹೌದು...."

" ಬೋರಿವಲಿಗೆ ಹೋಗಲಿಕ್ಕೆ ? "

" ನಿನಗೊಂದು ಹುಚ್ಚು ! "

ಗೆಳೆಯ ಸುಮ್ಮನಾದ. ಯಾವುದೋ ಕಾದಂಬರಿಯನ್ನು ಓದುತ್ತ ಮಲಗಿದವ ಹಾಗೆಯೆ ನಿದ್ರೆಹೋದ. ಅವನ ನಿದ್ರೆಯ ಬಗ್ಗೆ ಆನಂದನಿಗೆ ಅಸೂಯೆಯೆನಿಸಿತು.

ಯೋಚಿಸಿದಂತೆ ಸಮಸ್ಯೆ ಜಟಿಲವಾಗುತ್ತಿತ್ತೇ ಹೊರತು ಬಗೆಹರಿಯುವ ಲಕ್ಷಣ ಕಾಣಲಿಲ್ಲ. ಹೊರಗೆ ಗ್ಯಾಲರಿಯಲ್ಲಿ ಬಂದು ನಿಂತ. ಭವ್ಯವಾದ ಬೀದಿ ಬರಿದಾಗಿ ಭಯಾನಕವಾಗಿ ಕಾಣುತ್ತಿತ್ತು. ಆದರೆ ಅದರ ಶಾಂತತೆಯಲ್ಲಿ ಆನಂದನಿಗೆ ಏನೋ ಒಂದು ತರದ ಆಕರ್ಷಣೆ ಕಂಡಿತು. ಇನ್ನೊಬ್ಬರಿಗಾಗಿ ದುಡಿದು ದಣಿದು ಗಾಢನಿದ್ರೆಹೋದವನ ನಿದ್ರೆಯ ಶಾಂತತೆಯಂತಿತ್ತು, ಆ ಬೀದಿಯಲ್ಲಿ. ಆನಂದನ ಮನಸ್ಸು ಅಂಥ ಶಾಂತತೆಗಾಗಿ ಹಾತೊರೆಯುತ್ತಿತ್ತು.

ಮೋಹಿನಿಯ ಮನಸ್ಸಿನಾಳವನ್ನು ತಿಳಿಯುವುದು ತನ್ನಿಂದ ಸಾಧ್ಯವಿಲ್ಲ ವೆಂಬುದನ್ನು ಗ್ರಹಿಸಿಕೊಂಡೇ ಆನಂದ ಎಷ್ಟೋ ಸಲ ತಮ್ಮಿಬ್ಬರಲ್ಲಿ ತಪ್ಪು ತಿಳಿವು ಬೆಳೆಯಲಿಕ್ಕೆ ಆಸ್ಪದ ಮಾಡಿಕೊಡುತ್ತಿದ್ದ. ತಾನು ಮೋಹಿನಿಗೆ ಬೇಡ ವಾಗಿರಬಹುದೆ ಎಂಬ ಸಂಶಯದ ಜೊತೆಗೆ ಇಂದು ಮೋಹಿನಿಗೆ ಇನ್ನಾರೊಬ್ಬರು ಬೇಕಾಗಿರಬಹುದೆ ಎಂಬ ವಿಚಾರ ಕೆಣಕಿ ಕಾಡುತ್ತಿತ್ತು. ತನಗೆ ಮೋಹಿನಿ ಬೇಕಾಗಿದ್ದಳು. ಆದರೆ ತನ್ನನ್ನು ಬೆಳೆಸಿ ಬದುಕಿನಲ್ಲಿ ಒಂದು ದಾರಿಗೆ ತಂದು ಬಿಟ್ಟವರಾದ ಅಕ್ಕ, ಅಕ್ಕನ ಗಂಡ, ಅಣ್ಣ—ಬೇಡವಾಗಿರಲಿಲ್ಲ. ಅವರಿಂದ ದೂರವಾಗಿರುವುದೆಂದರೆ ಅವರಿಗೆ ಕೃತಘ್ನನಾದಂತೆ ಎಂದುಕೊಂಡ. ಮೋಹಿನಿ ಯನ್ನು ತಾನು ನಡಸಿಕೊಳ್ಳಬೇಕಾದ ರೀತಿಯಲ್ಲಿ ನಡಸಿಕೊಳ್ಳುತ್ತಿರಲಿಲ್ಲವೆಂಬು ದನ್ನೂ ಆತ ತಿಳಿದಿದ್ದ. ಇಂದಿಲ್ಲ ನಾಳೆ ಮೋಹಿನಿ ತನ್ನ ಮನಸ್ಸನ್ನು ತಿಳಿಯ ಬಲ್ಲವಳಾಗಿ, ತನ್ನೆಡೆಗೆ ಬರಬಹುದೆಂಬ ಆಸೆಯಲ್ಲಿಯೆ ದಿನಗಳನ್ನು ಕಳೆಯುತ್ತಿದ್ದ. ಆದರೆ ಭಾಸ್ಕರ ಹೇಳಿದ್ದರ ಮೇಲಿಂದ ಆ ಆಸೆ ಸುಟ್ಟುಹೋಗುವುದರಲ್ಲಿತ್ತು.

ಏನಾದರೂ ಆಗಲಿ, ಮರುದಿನ ಬೆಳಗ್ಗೆ ಹೋದಾಗ ಆಕೆಯನ್ನು ಸಾಧ್ಯ ವಾದಷ್ಟು ತನ್ನೆಡೆ ಒಲಿಸಿಕೊಂಡು, ಅವಳಿಂದ ನಿಜವಾದ ಸಂಗತಿಯನ್ನು ತಿಳಿದುಕೊಳ್ಳಲೇಬೇಕೆಂದು ಮನಸ್ಸುಮಾಡುತ್ತಿರುವಾಗಲೇ ಆನಂದನ ಕಣ್ಣು ಬಾಡಿತು.

ಅದೇ ವೇಳೆಗೆ ವಸಂತ ಬೋರಿವಲಿಯಲ್ಲಿಯ ತನ್ನ ಕೋಣೆಯಲ್ಲಿ ಏನನ್ನೋ ಓದುತ್ತ ಮಲಗಿಕೊಂಡಿದ್ದ. ಸಾಯಂಕಾಲ ದಾದರ್ ನಿಲ್ದಾಣದಲ್ಲಿ ಮೋಹಿನಿಯನ್ನು ಬೀಳ್ಕೊಟ್ಟಾಗಿನಿಂದ ಅವಳನ್ನು ಕುರಿತು ಎಷ್ಟೋ ಬಾರಿ ಯೋಚಿಸಿದ್ದ. ಮನಸ್ಸು ಯಾವುದೋ ಒಂದು ಅಸ್ಪಷ್ಟವಾದ ಉಲ್ಲಾಸದ ಸುಳಿವಿನಲ್ಲಿ ಸುಖಪಡುತ್ತಿರುವಂತಿತ್ತು. ಮೋಹಿನಿಯ ಬಗೆಯಲ್ಲಿ ಆತನಿಗೆ

ಆದರ ಹುಟ್ಟಿಕೊಂಡಿತ್ತು. ತನ್ನ ವ್ಯಕ್ತಿತ್ವವನ್ನು ಬಲಿಕೊಡಲು ಸಿದ್ಧರಾಗದವರನ್ನು ಕಂಡಾಗಲೆಲ್ಲ ವಸಂತನಿಗೆ ಅಂಥವರ ಬಗ್ಗೆ ಆತ್ಮೀಯತೆಯೆನಿಸುತ್ತಿತ್ತು. ಆ ಆತ್ಮೀಯಭಾವವೇ ಮೋಹಿನಿಯನ್ನು ವಸಂತನ ಹೃದಯಕ್ಕೆ ಹತ್ತಿರದವಳನ್ನಾಗಿ ಮಾಡಿತ್ತು. ಆದರೆ ಅವಳು ಹಿಡಿದ ದಾರಿಯಲ್ಲಿ ಅವಳಿಗೆ ಯಶಸ್ಸು ಸಿಕ್ಕೀತೆಂಬ ಭರವಸೆ ಇಲ್ಲದುದನ್ನು ನೆನೆದಾಗ ವಸಂತ ಕಳವಳಪಡುತ್ತಿದ್ದ. 'ಅವಳು ಸುಖವಾಗಿರಬೇಕು. ಅಂಥ ಚೆಲುವು ಸುಖದಲ್ಲಿದ್ದರೆ ಮಾತ್ರ ರತ್ನ ಕಾಂಚನದೊಡನೆ ಕೂಡಿದಂತೆ! ಇಲ್ಲವಾದರೆ ಏನು ಬಂತು! ಅಷ್ಟೊಂದು ಸೃಷ್ಟಿಯ ಕೌಶಲ ಹಾಳು!' ಎಂದುಕೊಳ್ಳುತ್ತಿದ್ದ. ರಾತ್ರಿಯಾಯಿತೆಂದು ಪುಸ್ತಕವನ್ನು ಮಡಿಸಿಟ್ಟು ದೀಪವನ್ನಾರಿಸಿದ. ಮನಸ್ಸು ಮತ್ತೆ ಮೋಹಿನಿಯನ್ನರಸಿ ಓಡಿತು. ಆಕೆಯನ್ನು ನೆನೆದಾಗಲೆಲ್ಲ ವಸಂತ ತನ್ನನ್ನೇ ಕೇಳಿಕೊಳ್ಳುತ್ತಿದ್ದ: ಮೋಹಿನಿ ತನ್ನನ್ನು ಇಷ್ಟೊಂದು ವಿಶ್ವಾಸದಿಂದ ಯಾಕೆ ಕಾಣುತ್ತಿರಬಹುದು? ತನ್ನನ್ನು ಮತ್ತೆ ಮತ್ತೆ ಭೆಟ್ಟಿಯಾಗಬೇಕೆಂಬ ಸ್ಪಷ್ಟವಾದ ಆಸೆ ಅವಳಲ್ಲಿ ಯಾಕೆ ಇರಬೇಕು? ಎಂದು. ಆ ವಿಚಾರದೊಡನೆಯೆ ತನ್ನ ವಿಷಯವಾಗಿಯೆ ಅಭಿಮಾನವನ್ನು ತಾಳುತ್ತಿದ್ದ. ಒಮ್ಮೊಮ್ಮೆ ಮನಸ್ಸು ಬಲುದೂರ ಓಡಿ ಏನೇನನ್ನೋ ಯೋಚಿಸುತ್ತಿತ್ತು. ಒಮ್ಮೊಮ್ಮೆ ಹೆದರುತ್ತಲೂ ಇತ್ತು: ಮೋಹಿನಿ ಕೇತಕಿಯ ಕುಸುಮ, ಅದಕ್ಕೆ ಮುಳ್ಳು ಬಹಳ, ಎಂದು; ಕೇತಕಿಯ ಬನದಲ್ಲಿ ಹಾವುಗಳೂ ಬಹಳ, ಎಂದು. ಆದರೆ ಎಷ್ಟು ಹಾವು ಮುಳ್ಳುಗಳಿದ್ದರೂ ಕೇತಕಿಯ ಸೌರಭಕ್ಕೆ ಅದೇನು ಕುಂದೇ? ಎಂದುಕೊಳ್ಳುತ್ತಿದ್ದ. ಒಟ್ಟಿನಲ್ಲಿ, ಮೋಹಿನಿಯನ್ನು ನೆನೆದಾಗ ವಸಂತ ಮೈಮರೆಯುವಂತಾಗುತ್ತಿದ್ದ. ಯೋಚಿಸುತ್ತಿರುವಾಗಲೇ ತನಗೆ ತಿಳಿಯದಲೇ ಆಕೆಯನ್ನು ತಾನು ಕಾಣುತ್ತಿರುವ ದೃಷ್ಟಿಯಲ್ಲಿ ಯಾವುದೋ ಒಂದು ಆಸೆ ಒಡಮೂಡುತ್ತಿರಬಹುದು ಎಂಬುದನ್ನು ಮರೆಯುತ್ತಿದ್ದ. ಆ ಸಂಶಯ ಬಂದಾಗಲೇ ಆಸೆಯನ್ನು ತಡೆಹಿಡಿದು, ಮೋಹಿನಿ ಹೃದಯವನ್ನು ತಣಿಸುವ, ಕುಣಿಸುವ—ಬದುಕಿನಲ್ಲಿಯ ಒಂದು ಶಕ್ತಿ, ಒಂದು ಬಿಡಿಸಲಾಗದ ಸಮಸ್ಯೆ, ಎಂದುಕೊಳ್ಳುತ್ತಿದ್ದ. ಆನಂದನಿಗಾದಂತೆ, ಮೋಹಿನಿ ವಸಂತನಿಗಾದರೂ ಒಂದು ಒಡೆಯದ ಒಗಟವಾಗಿದ್ದಳು. ಆದರೆ ಆ ಒಗಟು ಮನಸ್ಸಿನೆದುರು ನಿಂತಾಗ ಆನಂದನ ಹೃದಯ ನಿರಾಶೆಪಡುತ್ತಿತ್ತು; ವಸಂತನ ಹೃದಯ ಸೊಗದ ಸಿರಿಯ ಕನಸನ್ನು ಕಾಣುತ್ತಿತ್ತು!

ಮರುದಿನ ಮುಂಜಾನೆ ಆನಂದ ಬೋರಿವಲಿಗೆ ಬಂದಾಗ ಸುಮಾರು ಎಂಟೂವರೆಯಾಗಿರಬಹುದು. ಮೋಹಿನಿ ಏನೋ ಕೆಲಸದಲ್ಲಿದ್ದಳು. ಆನಂದ ಮನೆಯಲ್ಲಿ ಕಾಲಿಡುತ್ತಿರುವಾಗ ಹಲವಾರು ಯೋಚನೆಗಳು ಅವನನ್ನು ಪೀಡಿಸುತ್ತಿದ್ದವು. ಅಕ್ಕನ ಮಾತಿಗೆ ಸರಿಯಾಗಿ ಮೋಹಿನಿ ಹೊರಡುವ ಸಿದ್ಧತೆಯನ್ನು ಮಾಡಿರದಿದ್ದರೆ? ಊರಿಗೆ ಹೋಗುವುದೇ ಇಲ್ಲವೆಂದು ಹಟಹಿಡಿದರೆ? ಅಲ್ಲದೆ, ತಾನವಳಿಗೆ ಕೇಳಬೇಕಾಗಿದ್ದ ಪ್ರಶ್ನೆಯಿಂದ ಅವಳು ಕೋಪಿಸಿಕೊಂಡು ಮತ್ತೆ ರಾದ್ಧಾಂತಮಾಡಿದರೆ? ಆದರೆ ನಡುಮನೆಯಲ್ಲಿಯ ಸಾಮಾನುಗಳ ಅವ್ಯವಸ್ಥೆಯನ್ನು ನೋಡಿದಾಗ ಮೋಹಿನಿ ಹೊರಡುವುದರಲ್ಲಿದ್ದಾಳೆ ಎಂದೆನಿಸಿತು. ಮನಸ್ಸಿಗೆ ಎಷ್ಟೋ ಹಗುರೆನಿಸಿತು. ಅಡಿಗೆಮನೆಯ ಬಾಗಿಲ ಹತ್ತಿರ ಮೋಹಿನಿಯನ್ನು ಸಂಧಿಸಿ ಹೇಳಿದ :

" ಸರಿಯಾಗಿ ಹತ್ತು ಗಂಟೆಗೆ ಹೊರಡಬೇಕು. ಆಂ ? "

ಮೋಹಿನಿ ಉತ್ತರ ಕೊಡಲಿಲ್ಲ. ಆನಂದನಿಗೆ ಒಂದು ಕ್ಷಣ ವಿಚಿತ್ರವೆನಿಸಿತು. ಅಡಿಗೆಮನೆಯೊಳಗೆ ಅಕ್ಕ ಅಡಿಗೆಯಲ್ಲಿ ತೊಡಗಿದ್ದರು. ನಾರಾಯಣರಾಯ ಸ್ನಾನಕ್ಕಿಳಿಯುವುದರಲ್ಲಿದ್ದರು. ಆನಂದ ಪಡಸಾಲೆಗೆ ಬಂದು ಮೋಹಿನಿಯನ್ನು ಕೈಸನ್ನೆಯಿಂದ ಕರೆದ.

" ಊರಿಗೆ ಹೋಗುವುದೆಂದು ನಿನಗೆ ಯಾವಾಗ ಹೇಳಿದರು ? "

" ನಿನ್ನೆ ಸಾಯಂಕಾಲ."

" ನಿನ್ನೆ ಸಾಯಂಕಾಲ ! ಆದಿತ್ಯವಾರವೇ ನಾನು ಹೊರಡುವಾಗಲೇ ಅಕ್ಕನಿಗೆ ತಿಳಿಸಹೇಳಿದ್ದೆ. ನಿನ್ನೆ ನಾನು ಕೇಳಿದಾಗ ತಿಳಿಸಿಯಾಗಿದೆ ಎಂದಳು."

" ನನಗೆ ಹೇಳಿದ್ದಂತೂ ನಿನ್ನೆ ಸಾಯಂಕಾಲ...."

ಆನಂದನಿಗೆ ಆಶ್ಚರ್ಯವೆನಿಸಿತು. ಮೂರು ದಿವಸದ ಮಟ್ಟಿಗೆ ಯಾವ ಕಾರಣಕ್ಕಾಗಿ ಅಕ್ಕ ಮೋಹಿನಿಯಿಂದ ಆ ಸಮಾಚಾರವನ್ನು ಬಚ್ಚಿಟ್ಟಿರಬಹುದೋ ಆನಂದನಿಗೆ ತಿಳಿಯಲಿಲ್ಲ. ಊರಿಗೆ ಹೊರಡುವ ವಿಚಾರವನ್ನು ಕೊನೆಯ ಗಳಿಗೆಗೆ ತನಗೆ ತಿಳಿಸಿದ್ದರೂ ಮೋಹಿನಿ ಯಾವ ಮರುಮಾತನ್ನೂ

ಆಡದೆ ತನ್ನ ಸಿದ್ಧತೆಯಲ್ಲಿಯೇ ಇದ್ದಳು. ಆದರೆ ಒಂದು ಹೆದರಿಕೆ ಮಾತ್ರ ಹೃದಯವನ್ನು ಕೊರೆಯುತ್ತಿತ್ತು. ತಾಯಿಯ ಕಡೆಗೆ ತಾನು ಹೋಗುತ್ತೇನೆಂದಾಗಲೆಲ್ಲ ಆನಂದ ಖಂಡಿತವಾಗಿ ಹೇಳಿದ್ದ : 'ಅಲ್ಲಿ ಹೋದರೆ ಅಲ್ಲಿಯೇ ಇರಬೇಕು. ತಿರುಗಿ ಬರುವಂತಿಲ್ಲ' ಎಂದು. ಮೋಹಿನಿಯನ್ನು ಆವರಿಸಿದ ಭೀತಿಯೆಂದರೆ ಅದೇ. ಅದೇ ಕೊನೆಯ ಬಿಡುಗಡೆಯಾಗಬಹುದೆ? ಎಂದು. ಅದಕ್ಕಾಗಿಯೇ ಹೋಗಬಾರದೆಂದೂ ಯೋಚಿಸಿ ನೋಡಿದಳು. ಆದರೆ ತಾಯಿಯನ್ನು ನೋಡಿ ಬಲುದಿನವಾಗಿತ್ತು. ಅಲ್ಲದೆ ಇಲ್ಲಿ ಪ್ರತಿನಿತ್ಯವೂ ಒಂದಿಲ್ಲೊಂದು ರೀತಿಯಲ್ಲಿ ಮನೆಯವರ ಕೂಡ ಹೋರಾಟ ನಡಸುವುದಕ್ಕಿಂತ ಕೆಲವು ದಿವಸಗಳನ್ನಾದರೂ ಸುಖವಾಗಿಯಲ್ಲದಿದ್ದರೂ ಶಾಂತವಾಗಿ ಕಳೆಯಬಹುದಲ್ಲ ಎಂಬ ವಿಚಾರದಿಂದ ಹೋಗುವುದಕ್ಕೆ ಒಪ್ಪಿದ್ದಳು. ಆದರೆ ತಾನು ಊರಿಗೆ ಹೊರಡಬೇಕಾಗಿದ್ದುದನ್ನು ತನಗೇ ಕೊನೆಯ ಗಳಿಗೆಯವರೆಗೂ ತಿಳಿಸಬಾರದೆಂದರೆ? ತನ್ನನ್ನು ನಡಸಿಕೊಳ್ಳುವ ಅವರ ಕೀಳುತನಕ್ಕೆ ಒಂದು ಕ್ಷಣ ಮೋಹಿನಿ ಕೆರಳಿದ್ದರೂ ತಾಯಿಯನ್ನು ಕಾಣುವ ಹಂಬಲದಲ್ಲಿ ಆ ಅವಮಾನವನ್ನೂ ಮರೆತಿದ್ದಳು. ಅಲ್ಲದೆ, ನಾರಾಯಣರಾಯರ ಒತ್ತಾಯಕ್ಕಾಗಿಯೆ ಆನಂದ ತನ್ನನ್ನು ಕಳಿಸಲು ಸಿದ್ಧನಾಗಿದ್ದನೆಂಬುದೂ ಸ್ಪಷ್ಟವಾಗಿತ್ತು. ಆದರೂ ಆನಂದನ ಯೋಚನೆ ಇದ್ದಿರಬಹುದೆಂಬುದನ್ನು ತಿಳಿಯುವ ಕುತೂಹಲವೂ ಇದ್ದುದರಿಂದ ಮೋಹಿನಿ ಅವನ ಕೈನನ್ನೆಗೆ ಸರಿಯಾಗಿ ಪಡಸಾಲೆಗೆ ಬಂದಿದ್ದಳು. ಆನಂದ ಕೇಳಿದ :

"ನಿನ್ನ ಪರೀಕ್ಷೆ ಇನ್ನೂ ಎಷ್ಟು ದಿವಸ ?"

"ಮೂರು ವಾರ."

"ಆ ಸುಮಾರಿಗೆ ನೀನು ಇಲ್ಲಿಗೆ ಬಂದುಬಿಡಬಹುದು. ಇಂದಿಗೊಂದು ತಿಂಗಳಿಗೆ ನನ್ನ ಪರೀಕ್ಷೆಯೂ ಮುಗಿದುಹೋಗಿರುತ್ತದೆ. ಆಮೇಲೆ ವಿಚಾರ ಮಾಡೋಣ."

"ಏನು ವಿಚಾರ ?"

"ಮುಂದೆ ಹೇಗೆ ಮಾಡುವುದೆಂಬುದು."

"ಹೇಗೆಂದರೇನು ಮಾಡಬೇಕಾಗಿದೆ ?"

"ಮೊನ್ನೆ ರಾತ್ರಿ ಏನು ಹೇಳಿದರು ಕೇಳಲಿಲ್ಲವೆ ನೀನು ?"

" ಕೇಳಿದೆ. ಆದರೆ ನೀವು ಮಾಡುವುದೇನು ? "

" ನೋಡಬೇಕು. ಈಗಲೇ ಯಾಕೆ ? ಇನ್ನೂ ಒಂದು ತಿಂಗಳಿದೆ."

" ಇಂಥ ತಿಂಗಳು ಎಷ್ಟು ಬಂದು ಹೋದುವೊ...."

ಆನಂದ ಸುಮ್ಮನಾದ. ಒಂದು ನಿಮಿಷ ತಡೆದು ಕೇಳಿದ :

" ನಿನ್ನ ಎಲ್ಲ ಸಾಮಾನು ಕಟ್ಟಿಕೊಂಡಾಯಿತೆ ? "

" ಎಲ್ಲ ಸಾಮಾನು ? "

ಆ ಪ್ರಶ್ನೆ ಮೋಹಿನಿಯ ಮನಸ್ಸಿನ ಹಿಂದೆ ಅಡಗಿದ್ದ ಭೀತಿಯನ್ನು ವ್ಯಕ್ತ ಮಾಡುತ್ತಿತ್ತು. ಆಕೆ ಆನಂದನ ಮುಖವನ್ನೇ ನೋಡುತ್ತಿದ್ದಳು. ನಸುನಕ್ಕು ಆತ ಹೇಳಿದ :

" ಅಂಥದೇನೂ ಇಲ್ಲ. ಸಾಮಾನು ಕಟ್ಟಿಯಾಯಿತೆ—ಇಷ್ಟೇ ಅರ್ಥ ! "

ತುಸು ಗಂಭೀರಳಾಗಿ ಮೋಹಿನಿ ಕೇಳಿದಳು :

" ಈಗ ನಾನು ಊರಿಗೆ ಹೋಗಲೇ ಬೇಕೆ ? "

" ಹೌದು."

" ಯಾಕೆ ? "

" ಅವರಿಗೆ ತೊಂದರೆಯಾಗುತ್ತಿದೆಯಂತೆ."

" ಹಾಗಾದರೆ ನಾನು ತಿರುಗಿ ಬರಕೂಡದೆ ? "

" ಯಾರು ಹೇಳಿದರು ಹಾಗೆ ? "

" ಯಾರು ಯಾತಕ್ಕೆ ಹೇಳಬೇಕು ? "

" ಹಾಗೇನೂ ಇಲ್ಲ. ಮುಂದಿನ ಯೋಚನೆ ಆಮೇಲೆ ತಿಳಿಸುವೆ...."

ಎನ್ನುವಷ್ಟರಲ್ಲಿಯೆ ನಾರಾಯಣರಾಯರು ಪಡಸಾಲೆಗೆ ಬಂದದ್ದರಿಂದ ಮೋಹಿನಿ ಒಳಗಡೆ ಹೋದಳು. ನಾರಾಯಣರಾಯರು ಕೇಳಿದರು :

" ಏನು ಆನಂದ, ಜೊತೆಯಲ್ಲಿ ನೀನೇ ಹೋಗುತ್ತೀಯಲ್ಲವೇನು ? "

" ಇಲ್ಲ."

" ಹಾಗಾದರೆ, ಭಾಸ್ಕರ ಹೋಗುತ್ತಾನೇನು ? "

" ಭಾಸ್ಕರ ಹೋಗಲೇನೆಂದು ಕೇಳಿದ್ದ...."

" ಹೋಗುತ್ತಿದ್ದರೆ ನೀನು ಹೋಗು— ನಿನ್ನ ಓದಿಗೆ ತೊಂದರೆಯಾಗ ದಿದ್ದರೆ. ಭಾಸ್ಕರನನ್ನು ಕಳಿಸಬೇಡ."

ಆನಂದನಿಗೆ ವಿಚಿತ್ರವೆನಿಸಿತು. ಆದರೂ ನಾರಾಯಣರಾಯರು ಅಣ್ಣನ ವಿಚಾರದಲ್ಲಿ ದೂಷಿತರಿದ್ದುದು ತಿಳಿದಿದ್ದರಿಂದ ವಿಷಯವನ್ನು ಆನಂದ ಬೆಳೆಸ ಲೆಳಸಲಿಲ್ಲ. ಅವನಂದ:

"ನೋಡುತ್ತೇನೆ. ಹೋದರೆ ನಾನೇ ಹೋಗಿಬರುತ್ತೇನೆ. ಇಲ್ಲವಾದರೆ ಒಬ್ಬಳೇ ಹೋದರೂ ಹೋಗಬಹುದು."

"That is all right (ಅದು ಸರಿ.)....ನಡೆ, ನೀನೂ ಊಟ ಮಾಡಿಬಿಡು...." ಎಂದು ಅಡಿಗೆಮನೆಗೆ ಸಾಗಿದರು. ಅವರ ಹಿಂದಿನಿಂದಲೇ ಆನಂದನೂ ಹೊರಟ.

ಆನಂದ ನಾರಾಯಣರಾಯರಿಬ್ಬರೂ ಊಟಕ್ಕೆ ಕುಳಿತಾಗ ಅಕ್ಕ ಮೋಹಿನಿಯನ್ನುದ್ದೇಶಿಸಿ ಹೇಳಿದಳು:

"ನೀನೂ ಒಂದು ತಟ್ಟೆ ತೆಗೆದುಕೊಂಡು ಬಂದುಬಿಡು. ಬಡಿಸುವ ಕೈಯಲ್ಲಿ ಬಡಿಸಿಬಿಡುತ್ತೇನೆ. ಆಮೇಲೆ ತಡವಾದೀತು...."

ಮೋಹಿನಿಯ ವಿಚಾರದಲ್ಲಿ ಆನಂದನ ಅಕ್ಕ ಯಾವ ಸದಭಿಪ್ರಾಯ ವನ್ನಿಟ್ಟುಕೊಂಡಿರದಿದ್ದರೂ ಅವಳನ್ನು ಹೀಗೆ ತಟ್ಟನೆ ಊರಿಗೆ ಕಳಿಸುವುದರಲ್ಲಿ ಅವಳ ಮನಸ್ಸು ಅಳುಕುತ್ತಿತ್ತು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಶನಿ ವಾರ ರಾತ್ರಿ ನಡೆದ ಪ್ರಕರಣದ ಪರಿಣಾಮ ಆನಂದನ ಮನಸ್ಸಿನ ಮೇಲೆ ಹೆಚ್ಚಾಗಿದೆ ಎಂಬುದನ್ನು ಅವಳು ತಿಳಿದಿರಲಿಲ್ಲ. ಮೊದಲ ದಿನ ಮಧ್ಯಾಹ್ನ ಆನಂದ ಬಂದಾಗ ಎಷ್ಟೋ ರೀತಿಯಿಂದ ಕೆಣಕಿ ಮಾತನಾಡಿಸಿದ್ದರೂ ಆನಂದ ತನ್ನ ಮನಸ್ಸನ್ನು ಬಿಚ್ಚಿ ತೋರಿಸಿರಲಿಲ್ಲ. ಆದ್ದರಿಂದ ಅವಳ ನಡೆಯಂತೆ ನುಡಿ ಯಲ್ಲಿಯೂ ಒಂದು ತರದ ಸಂಕೋಚ ಕಾಣಬರುತ್ತಿತ್ತು. ಆ ಸಂಕೋಚವನ್ನು ದೂರಮಾಡಿಕೊಳ್ಳುವುದಕ್ಕಾಗಿಯೆ ಅವಳು ಆನಂದನನ್ನು ಮೆತ್ತನೆ ಮಾತಾಡಿಸು ತ್ತಿರುವಂತಿತ್ತು.

"ನೀನೇ ಒಂದಿಷ್ಟು ಆಕೆಗೆ ಹೇಳಿದ್ದರೂ ಆಗುತ್ತಿತ್ತು. ಸುಮ್ಮನೆ ಈಗ ಊರಿಗೆ ಹೋಗಿ ಮತ್ತೆ ಬರಬೇಕು. ಸುಳ್ಳೇ ಧಾವತಿ."

"ಅದರಲ್ಲೇನು ಅಕ್ಕ? ಅವಳಿಗೂ ಬಹಳ ದಿವಸದಿಂದ ತಾಯಿಯ ಕಡೆಗೆ ಹೋಗಬೇಕಿತ್ತು. ಹೋಗಿಬರುವಳು."

"ಸುಸೂತ್ರ ಹೋಗಿದ್ದರೆ ಎಲ್ಲ ಒಳ್ಳೆಯದಿತ್ತು. ಯಾರು ಬೇಡ ಅನ್ನು ತ್ತಿದ್ದರು?"

ತನ್ನ ವಿರುದ್ಧವಾಗಿ ಮೋಹಿನಿ ಊರಿಗೆ ಹೋದನಂತರ ಅಲ್ಲಿ ಎಲ್ಲರಿಗೂ ಹೇಳುವಳು, ಅದು ತಪ್ಪಬೇಕಿತ್ತು, ಎಂಬ ಅಭಿಪ್ರಾಯವನ್ನು ಮೋಹಿನಿ ಆ ಮಾತಿನಲ್ಲಿ ಕಂಡಳು. ಅಂತೆಯೆ ಅವಳಂದಳು :

" ನಾನೇನೂ ಯಾರ ವಿರುದ್ಧ ಚಾಡಿ ಹೇಳಬೇಕೆಂದು ಹೊರಟಿಲ್ಲ ಈಗ ಊರಿಗೆ ! " ಮೋಹಿನಿಯ ಮಾತಿನಿಂದ ಮೂವರೂ ನೊಂದುಕೊಂಡರು. ಆದರೆ ಮಾತು ಬೆಳಸುವುದರಲ್ಲಿ ಅರ್ಥವಿಲ್ಲವೆಂದು ಎಲ್ಲರೂ ಒಂದು ನಿಮಿಷ ಸುಮ್ಮ ನಾದರು. ಅಕ್ಕನಿಗೆ ಮಾತ್ರ ತಡೆಯುವುದು ಕಷ್ಟವಾಗಿತ್ತು. ಸಿಡುಕಿನಲ್ಲಿಯೆ ಅವಳಂದಳು :

" ಮನೆಯೊಳಗೆ ಮಾತನಾಡುವುದೇ ಕಷ್ಟವಾಗಿದೆ. ಏನಾದರೂ ಅನ್ನ ಬೇಕು, ಅನ್ನಬಾರದು ? ಯಾವಾಗಲೂ ಅದಕ್ಕೊಂದು ಕೊಂಕು ಅರ್ಥವೆ...."

" ನೀನು ಮಾತನಾಡಬೇಡ ಎಂದು ಹತ್ತುಸಾವಿರ ಬಾರಿ ಹೇಳಿದೆ...." ಎಂದು ನಾರಾಯಣರಾಯರು ಹೆಂಡತಿಯನ್ನು ಸುಮ್ಮನಾಗಿಸಿದರು. ಆನಂದ ಎಲೆ ನೋಡಿ ಊಟ ಮಾಡುತ್ತಿದ್ದ.

ಆನಂದ ಮೋಹಿನಿಯರು ಮನೆ ಬಿಟ್ಟಾಗ್ಗೆ ನಾರಾಯಣರಾಯರು ಆಫೀಸಿಗೆ ಹೊರಟುಹೋಗಿದ್ದರು. ಹೊರಡುವಾಗ ಮೋಹಿನಿ ನಾದಿನಿಗೆ ಒಂದು ಮಾತನ್ನು ಕೂಡ ಹೇಳಲಿಲ್ಲ. ಆನಂದನಿಗೆ ತುಸು ಸಂಕೋಚವೆನಿಸಿತ್ತು. ಆದ್ದ ರಿಂದಲೇ ಲೋಕಲ್ ಗಾಡಿಯಲ್ಲಿ ಬಂದು ಕುಳಿತ ಕೂಡಲೇ ಮೋಹಿನಿಯನ್ನು ಕೇಳಿದ :

" ಹೊರಡುವಾಗ ಅಕ್ಕನಿಗೆ ಹೇಳಿ ಬರಬಾರದೆ? ಒಂದು ಮಾತನ್ನೂ ಆಡಲಿಲ್ಲ ಆಕೆಯ ಕೂಡ."

" ಏನೆಂದು ಹೇಳುವುದು ? "

" ಎಲ್ಲರೂ ಊರಿಗೆ ಹೋಗುವ ಮುಂದೆ ಏನು ಹೇಳುತ್ತಾರೆ ? "

" ಅದು ಹೇಳುವವರಿಗಿಂತ ಹೇಳಿಸಿಕೊಳ್ಳುವವರ ಮೇಲೆ ಅವಲಂಬಿ ಸಿರುತ್ತದೆ."

" ಏನಿದ್ದರೂ ನೀನು ಒಂದು ಮಾತು ಹೇಳಿದ್ದರೆ ಆಕೆಗೆ ಎಷ್ಟೋ ಸಂತೋಷವೆನಿಸುತ್ತಿತ್ತು. ನೋಡಲಿಲ್ಲವೆ ಎಷ್ಟು ಚಿಕ್ಕ ಮೋರೆ ಮಾಡಿದ್ದಳು ? "

" ಚಿಕ್ಕ ಮೋರೆ ಚಿಕ್ಕ ಮನಸ್ಸಿಗಾಗಿ ; ನನಗಾಗಿ ಅಲ್ಲ. ಅಲ್ಲದೆ ನನ್ನಿಂದ

ಬೇಸತ್ತುಹೋದವರಿಗೆ ತಿರುಗಿ ಮತ್ತೆ ಬರುತ್ತೇನೆಂದು ಹೇಳಿದರೆ ಯಾವ ಸಂತೋಷ ? "

ಆನಂದ ಸುಮ್ಮನಾದ. ಮೋಹಿನಿಯು ಕೂಡ ಮಾತನಾಡಿದಾಗಲೆಲ್ಲ ತನಗೆಯೇ ಸುಮ್ಮನಾಗಬೇಕಾಗುತ್ತಿತ್ತೆಂಬುದು ಆನಂದನಿಗೆ ನೋವನ್ನುಂಟು ಮಾಡುತ್ತಿತ್ತು. ಮನಸ್ಸು ರೊಚ್ಚಿಗೇಳುತ್ತಿತ್ತು. ಆ ಭಾವನೆಯೇ ಒಂದಿಲ್ಲೊಂದು ರೀತಿಯಲ್ಲಿ ಮೋಹಿನಿಯನ್ನು ಮಣಿಸಬೇಕೆಂದು ಹಂಬಲಿಸುತ್ತಿತ್ತು. ಸಣ್ಣಪುಟ್ಟ ನೂರು ವಿಷಯಗಳಲ್ಲಿ ತಾನು ಸಹಿಸಿದ ಸೋಲನ್ನು ಮರೆಯಲು ತಿಳಿಸುತ್ತಿತ್ತು. ಆದರೆ ಮೋಹಿನಿಯನ್ನು ಮಣಿಸುವುದು ಕಷ್ಟಸಾಧ್ಯವಾದಂತೆಯೇ ಆಕೆಯ ಮೇಲೆ ವಿಜಯ ಸಂಪಾದಿಸಬೇಕೆಂಬ ಆತುರ ಆನಂದನಲ್ಲಿ ಬೆಳೆದು ನಿಲ್ಲುತ್ತಿತ್ತು. ಆ ಆತುರಕ್ಕೆ ಸರಿಯಾಗಿ ಮುನ್ನಾದಿನ ಭಾಸ್ಕರ ಹೇಳಿದ ಸಮಾಚಾರವನ್ನು ಕುರಿತು ಕೇಳಬೇಕೆಂಬ ಕುತೂಹಲ ಬಲವಾಗತೊಡಗಿತ್ತು. ಆ ವಿಷಯವನ್ನು ಹೇಗೆತ್ತಬೇಕೆಂಬ ಯೋಚನೆಯಲ್ಲಿಯೇ ಇದ್ದ. ಮೋಹಿನಿ ಎಂದಳು :

" ನಾನೀಗ ಊರಿಗೆ ಹೊರಡಬಾರದಾಗಿತ್ತು."

" ಯಾಕೆ ? "

" ಯಾಕೇನು ? ಪರೀಕ್ಷೆ ಇನ್ನು ಹದಿನೈದು ಇಪ್ಪತ್ತು ದಿನಗಳಲ್ಲಿ ಬಂದು ಬಿಟ್ಟಿತು. ಎಷ್ಟೋ ದಿವಸಗಳನಂತರ ನಾನಲ್ಲಿ ಹೋಗುತ್ತಿದ್ದೇನೆ. ಎಂದಮೇಲೆ ಓದು ಸಾಗುವುದು ಹೇಗೆ ? "

" ಓದೇನು, ಇಲ್ಲಿಯೂ ಸಾಗುವುದಿಲ್ಲ ! "

ಆಗ ಮೋಹಿನಿ ಆನಂದನನ್ನು ತೀಕ್ಷ್ಣವಾಗಿ ನೋಡಿದಳು. ಅವನ ಮಾತಿನಲ್ಲಿ ಮೋಹಿನಿ ಬೇರೆಯಾದ ಅರ್ಥವನ್ನು ಕಂಡಿದ್ದಳು. ಆದರೂ ಸಮಾಧಾನದಿಂದಲೇ ಕೇಳಿದಳು :

" ಇಲ್ಲಿ ಸಾಗದೆ ಏನು ? "

" ಅಷ್ಟಕಷ್ಟೆ ! "

" ಅಷ್ಟಕಷ್ಟೆ ಯಾಕೆ ? "

ಆನಂದ ಒಂದು ನಿಮಿಷ ತಡೆದ. ತನ್ನ ಮನಸ್ಸಿನಲ್ಲಿ ಕುದಿಯುತ್ತಿದ್ದ ವಿಷಯವನ್ನೆತ್ತಲು ಸಮಯ ಬಂದಿದೆಯೆಂಬುದನ್ನು ತಿಳಿದು ಅದಕ್ಕಾಗಿ ದಾರಿ ಕಡಿಯತೊಡಗಿದ. ಅವನಂದ :

" ಹೇಗೆ ಸಾಧ್ಯ ? ಕಾಲೆಜ್ ಮುಗಿದಮೇಲೆ ಅಲ್ಲಿ ಇಲ್ಲಿ ಎಂದು ಒಂದೆರಡು ಗಂಟೆ ಕಾಲ ಕಳೆಯುತ್ತೀ. ಮನೆಗೆ ಹೋದಮೇಲೆ ಮತ್ತೆ ಇದ್ದೇ ಇದೆಯಲ್ಲ...."

ಮೋಹಿನಿಗೆ ಆನಂದನ ಮಾತಿನ ಮರ್ಮ ಹೊಳೆಯಿತು.

" ಕಾಲೇಜು ಬಿಟ್ಟಮೇಲೆ ನಾನು ನೇರವಾಗಿ ಮನೆಗೆ ಹೋಗುವುದಿಲ್ಲ ವೆಂದು ಯಾರು ಹೇಳುವರು ? "

" ಯಾರು ಯಾತಕ್ಕೆ ಹೇಳಬೇಕು ? ಮೊನ್ನೆಯೆ ನಡೆಯಿತಲ್ಲ ಪ್ರಸಂಗ."

" ಒಂದು ದಿವಸ ಒಂದರ್ಧ ಗಂಟೆ ತಡವಾದರೆ ನಿತ್ಯವೂ ಹಾಗೆಯೆ ಎಂದು ಯಾಕೆ ತಿಳಿಯಬೇಕು ? "

" ಹಾಗಾದರೆ ನಿನ್ನೆ ಮತ್ತೆ ಯಾಕೆ ತಡವಾಯಿತು ? "

ಈ ಪ್ರಶ್ನೆ ಬರಬಹುದೆಂದು ಮೋಹಿನಿ ಎಣಿಸಿರಲಿಲ್ಲ. ತಟ್ಟನೆ ವಿದ್ಯುತ್ತಿನ ತಂತಿಯನ್ನು ಮುಟ್ಟಿದಂತಾಗಿ ಉತ್ತರ ಹೇಳುವುದು ಕೂಡಲೆ ಸಾಧ್ಯವಾಗಲಿಲ್ಲ. ಕೂಡಲೇ ಉತ್ತರ ಬಾರದಿದ್ದುದನ್ನು ನೋಡಿ ಆನಂದನಿಗೆ ಮೋಹಿನಿ ತನ್ನ ಕೈಯಿಂದ ಇನ್ನು ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ ಎನಿಸಿತು. ಮೋಹಿನಿ ಕೇಳಿದಳು :

" ನಿನ್ನೆ ತಡವಾಗಿ ಹೋದೆನೆಂದು ಯಾರು ಹೇಳಿದರು ? "

" ಯಾರೇ ಹೇಳಲಿ, ತಡವಾಗಿ ಹೋದೆಯೋ ಇಲ್ಲವೊ ? "

" ಅಷ್ಟೇನೂ ತಡವಾಗಿರಲಿಲ್ಲ. ಒಂದರ್ಧ ಮುಕ್ಕಾಲು ಗಂಟೆಯಾಗಿರ ಬಹುದು."

" ಅಷ್ಟಾದರೂ ಯಾಕೆ ? "

ಪ್ರಶ್ನೆ ಮೋಹಿನಿಯ ಆತ್ಮಗೌರವಕ್ಕೆ ಏಟು ಕೊಟ್ಟಿತು. ಇಂಥ ಪ್ರಶ್ನೆ ಗಳೇ ಅವರಿಬ್ಬರಲ್ಲಿರಬಹುದಾಗಿದ್ದ ಹೊಂದಿಕೆಗಳನ್ನು ಹಾಳುಮಾಡಿದ್ದವು. ಇಂಥ ಪ್ರಶ್ನೆಗೆ ಉತ್ತರ ಹೇಳಿಯೇನು ಹೇಳದಿದ್ದರೇನು, ಎಂದು ಸಂತಾಪದಲ್ಲಿ ಮೋಹಿನಿ ಸುಮ್ಮನಾದಳು. ಆದರೆ ಆನಂದ ಅವಳ ಮೌನವನ್ನು ವಿಪರೀತವಾಗಿ ಅರ್ಥ ಮಾಡಿಕೊಂಡ. ಪ್ರಶ್ನೆಗೆ ಸರಿಯಾಗಿ ಏನಾದರೊಂದು ಸುಳ್ಳು ಕಥೆಯನ್ನು ಆಕೆ ಕಟ್ಟುತ್ತಿರಬಹುದು ಎಂದುಕೊಂಡ. ಆನಂದ ಮತ್ತೆ ಕೇಳಿದ :

" ಯಾಕೆ ? ನಿನ್ನೆ ಯಾಕೆ ತಡವಾಯಿತು ? "

" ಇಂಥ ಪ್ರಶ್ನೆಗಳನ್ನು ನೀವು ಕೇಳಬಾರದು...."

" ಹೌದು, ನೀನು ಏನು ಬೇಕಾದ್ದನ್ನು ಮಾಡಬೇಕು. ನಾನು ಕೇಳ ಬಾರದು, ಅಲ್ಲವೆ ? "

ಆನಂದನಿಗೆ ಕೋಪ ತಡೆಯಲಿಕ್ಕಾಗಲಿಲ್ಲವೆಂದೇ ಹಾಗೆ ಆವಾದಿಸಿದ್ದ. ಮೋಹಿನಿಯ ಮುಖ ಕೆಂಪೇರಿಹೋಗಿತ್ತು.

" ಏನು ಬೇಕಾದ್ದು ಎಂದರೆ ಏನು ಮಾಡಿದೆ ? ಇಷ್ಟು ಸಂಶಯ ನಿಮಗಿದ್ದರೆ ನಿಮ್ಮ ಜೊತೆಯಲ್ಲಿ ನನಗೆ ಮಾತನಾಡಬೇಕಿಲ್ಲ."

" ಸರಿಯಾಗಿ ಉತ್ತರ ಹೇಳಿ ನನ್ನ ಸಂಶಯವನ್ನು ದೂರ ಮಾಡಬಹುದು ! "

" ನಿಮ್ಮ ಸಾವಿರ ಸಂಶಯಗಳನ್ನು ದೂರ ಮಾಡುವುದರಲ್ಲಿಯೇ ನನ್ನ ಜನ್ಮ ಹೋಗುವ ಹಾಗೆ ಕಾಣುತ್ತದೆ."

" ಅದಕ್ಕೆ ನಾನೇನು ಮಾಡಬಹುದು ? ಎಲ್ಲವೂ ನಿನ್ನದೇ ..."

" ಏನು ಮಾಡಿದೆ ನಾನು ? "

" ಹಾಗಾದರೆ ನಿನ್ನೆ ತಡವೇಕೆ ಆಯಿತು ? ಹೇಳು."

" ಎಷ್ಟು ತಡವಾಗಿದ್ದೀತು ನಿನ್ನೆ ? ಕಾಲೇಜು ಬಿಟ್ಟ ಕೂಡಲೆ ದಾದರಿಗೆ ಬಂದು ನೇರವಾಗಿ ಪೇಟೆಯಲ್ಲಿ ಹೋದೆ. ಬಳೆ ತೆಗೆದುಕೊಳ್ಳಬೇಕಾಗಿತ್ತು. ಸ್ಟೇಶನ್ನಿಗೆ ಬರುವಷ್ಟರಲ್ಲಿ ಬೋರಿವಲಿ ಲೋಕಲ್ ಹೊರಟುಹೋಗಿತ್ತು. ಅರ್ಧ ಗಂಟೆ ತಡೆಯಬೇಕಾಯಿತು."

" ಸ್ಟೇಶನ್ನಿನ ಹತ್ತಿರ ಯಾರು ಸಿಕ್ಕಿದ್ದರು ? "

" ಯಾರು ಸಿಗಬೇಕು ? ಎದುರಿನ ಕಟ್ಟೆಯ ಹತ್ತಿರ ವಸಂತರಾಯರಿದ್ದರು."

" ಯಾವ ವಸಂತರಾಯ ? "

" ನಮ್ಮ ಮನೆಯ ಹತ್ತಿರ ಇರುತ್ತಾರಲ್ಲ—ಅವರು."

" ಅವರೂ ನೀನೂ ಕೂಡಿಯೇ ಬಂದಿರಾ ? "

" ಎಲ್ಲಿಯದು ? ಒಂದೆರಡು ನಿಮಿಷ ಸ್ಟೇಶನ್ನಿನೆದುರು ನಿಂತಿರಬೇಕು ಮಾತಾಡುತ್ತ, ಅಷ್ಟೇ. ಅವರೆಲ್ಲಿಯೋ ದಾದರಿನಲ್ಲಿ ಹೋಗಬೇಕಾಗಿತ್ತಂತೆ."

" ಹಾಗಾದರೆ ನಿನ್ನೆ ನೀನು ಸ್ಟೇಶನ್ನಿನ ಹತ್ತಿರ ಮಾತಾಡಿದ್ದು ವಸಂತರಾಯನ ಕೂಡವೆ ? "

" ಹೌದು ! "

" ಇಷ್ಟು ಮೊದಲೇ ಏಕೆ ಹೇಳಿಬಿಡಲಿಲ್ಲ, ಮಹಾರಾಯಿತಿ ? "

" ಅಂಥದೇನು ಮಹತ್ವದ ವಿಷಯ ಎಂದು ಹೇಳಬೇಕಾಗಿತ್ತು ? "

" ನನ್ನ ಕಲ್ಪನೆ ತಪ್ಪಾಯಿತು."

" ಬೆಂಕಿ ಬಿತ್ತು ನಿಮ್ಮ ಕಲ್ಪನೆಗೆ ! "

ಮೋಹಿನಿಯ ವಿವರಣೆಯಿಂದ ಆನಂದನಿಗೆ ಸಮಾಧಾನವಾದಷ್ಟೂ ಮೋಹಿನಿಗೆ ಅಸಮಾಧಾನವಾಯಿತು. ಇವರನ್ನು ಬಾಧಿಸುತ್ತಿರುವ ಸಂಶಯ ಪಿಶಾಚಿಯನ್ನು ಹೊಡೆದೋಡಿಸುವುದು ಸಾಧ್ಯವಿಲ್ಲವೆನಿಸಿ ನಿರಾಶೆ ಅವಳ ಮನಸ್ಸನ್ನು ಆವರಿಸಿತು. ಕ್ಷಣಕ್ಷಣಕ್ಕೂ ತನ್ನ ನಡೆಯ ಬಗೆಯಲ್ಲಿ ಎಲ್ಲರೂ ಸೇರಿ ಅದಕ್ಕೊಂದು ವಿಪರೀತಾರ್ಥವನ್ನು ಕೊಡುವುದರಲ್ಲಿಯೆ ತೊಡಗಿದರೆ ಅದರ ನಿವಾರಣೆಯನ್ನು ಮಾಡುವುದರಲ್ಲಿಯೆ ತನ್ನ ಮನಶ್ಶಾಂತಿಯೆಲ್ಲ ವೆಚ್ಚವಾಗ ಬೇಕಾದಾಗ ಸುಖವಾಗಿರಲಿಕ್ಕೆ ಅವಕಾಶವೆಲ್ಲಿಂದ ಬರಬೇಕು ? ಎಂದುಕೊಂಡಳು. ಆನಂದನಿಗೆ ಮಾತ್ರ ಇಡೀ ರಾತ್ರಿ ಕಾಡಿದ ವ್ಯಥೆ ಕ್ಷಣಾರ್ಧದಲ್ಲಿ ಮಾಯವಾಯಿತು. ವಸಂತರಾಯನ ಬಗ್ಗೆ ಭಿನ್ನಾಭಿಪ್ರಾಯಕ್ಕೆ ಅವನ ಮನಸ್ಸಿನಲ್ಲಿ ಅವಕಾಶವೇ ಇರಲಿಲ್ಲ. ಬೋರಿವಲಿಯ ತಮ್ಮ ಮನೆಯ ಅನುಪಾಸಿನಲ್ಲೆಲ್ಲ ವಸಂತರಾಯನಂಥ ಸದ್ಗೃಹಸ್ಥನಿಲ್ಲವೆಂಬ ಅಭಿಪ್ರಾಯ ಹರಡಿಕೊಂಡಿದ್ದಂತೆ ಆನಂದನ ಮನಸ್ಸಿನಲ್ಲಿಯೂ ಆ ಅಭಿಪ್ರಾಯ ತುಂಬಿಕೊಂಡಿತ್ತು. ಮೋಹಿನಿ ನಡುವೆಯೆ ತ್ರಸ್ತಳಾಗಿ ಕೇಳಿದಳು :

" ನಿಮಗೆ ಯಾರು ಹೇಳಿದರು ಇದನ್ನೆಲ್ಲ ? "

" ಭಾಸ್ಕರ."

" ಅವರಿಗೆ ವಸಂತರಾಯರ ಪರಿಚಯ ಇಲ್ಲವೇನು ? "

" ಇರದೆ ಏನು ? "

" ಹಾಗಾದರೆ ನಾನು ಮಾತನಾಡಿದ್ದು ವಸಂತರಾಯರ ಕೂಡ ಎಂಬುದನ್ನೇಕೆ ಅವರು ಹೇಳಲಿಲ್ಲ ? "

ಆನಂದನಿಗೆ ಕೂಡ ವಿಚಿತ್ರವೆನಿಸಿತು. ವಸಂತನನ್ನು ಸಹಜವಾಗಿಯೆ ಗುರುತಿಸಬಲ್ಲ ಭಾಸ್ಕರ ಅವನ ಹೆಸರನ್ನು ಯಾಕೆ ಹೇಳಿರಲಿಕ್ಕಿಲ್ಲವೆಂಬುದು ತಿಳಿಯದೆ ಹೋಯಿತು.

" ಏನೋ, ಅಷ್ಟು ಸೂಕ್ಷ್ಮವಾಗಿ ನೋಡಿರಲಿಕ್ಕಿಲ್ಲ! "

ಮೋಹಿನಿ ಸಂತಾಪದಿಂದ ಉರಿದು ಬೀಳುತ್ತಿದ್ದಳು.

" ಹೌದು, ನೋಡಿರಲಿಕ್ಕಿಲ್ಲ! ನಿಮಗೆ ಇನ್ನಾದರೂ ತಿಳಿಯಬೇಕು, ಹೇಗೆ ಕಡ್ಡಿ ಗುಡ್ಡವಾಗುತ್ತದೆ ಎಂಬುದು. ಇಷ್ಟು ವರಿಯಿಂದ ಮನುಷ್ಯನನ್ನು ಕಾಡಬಾರದು...."

ಮೋಹಿನಿಯ ಮನಸ್ಸು ತೀರ ನೊಂದಿತ್ತು. ವಸಂತನಿಂದ ಎರವಲು ತಂದಂತಿದ್ದ ಸ್ಥೈರಣೆಯ ಸಂಚಯವೂ ಬರಿದಾಗತೊಡಗಿತ್ತು.

ದಾದರ್ ನಿಲ್ದಾಣದಲ್ಲಿ ಭಾಸ್ಕರ ಅವರಿಗಾಗಿ ಕಾಯುತ್ತಿದ್ದ. ಅವನನ್ನು ನೋಡಿ ಮೋಹಿನಿ ಕಿಡಿಕಿಡಿಯಾದಳು. ತೀರ ಹತ್ತಿರ ಹತ್ತಿರ ಸುಳಿಯುತ್ತಿದ್ದ ಅವನನ್ನು ಕಂಡು ಮೋಹಿನಿ ಕೆಂಡವಾಗಿದ್ದಳು. ನಿಷ್ಕಾರಣವಾಗಿ ತನ್ನನ್ನು ಮಾತನಾಡಿಸಬೇಕೆಂಬ ಆತನ ಹಂಬಲವನ್ನು ಮೋಹಿನಿ ತಿರಸ್ಕಾರದ ಮೌನ ದಿಂದ ಹತ್ತಿಕ್ಕಿರಿಸುತ್ತಿದ್ದಳು. ಭಾಸ್ಕರ ಆನಂದನಿಗೆ ಹೇಳಿದ :

" ಒಂದೇ ಟಿಕೆಟನ್ನು ತೆಗೆದುಕೊಂಡಿದ್ದೇನೆ, ಆನಂದ, ನೀನು ಹೇಳಿದ ಹಾಗೆ. ನೀನು ಹೋಗುವುದು ಏನು ಮಾಡಿದಿ ? "

ಆನಂದ ಮೋಹಿನಿಯ ಮುಖವನ್ನು ನೋಡಿದ, ' ನಾನು ನಿನ್ನ ಜೊತೆ ಯಲ್ಲಿ ಬರಲೆ ? ' ಎಂದು ಕೇಳುತ್ತಿರುವಂತೆ.

ಮೋಹಿನಿ ಸಿಡುಕಿನಿಂದಲೇ,

" ನನ್ನ ಕೂಡ ಯಾರೂ ಬರುವ ಕಾರಣವಿಲ್ಲ "

ಎಂದು ಹೇಳಿ ಸುಮ್ಮನಾದಳು. ಯಾರು ಬಂದರೇನು, ಬರದಿದ್ದರೇನು ಎನ್ನುವಂತಿತ್ತು ಅವಳ ಭಾವ. ಅವಳ ದನಿಯಲ್ಲಿಯ ತೀಕ್ಷ್ಣತೆ ಮಾತ್ರ ಭಾಸ್ಕರನನ್ನು ಸಂಪೂರ್ಣವಾಗಿ ಸುಮ್ಮನಾಗಿರಿಸಿತು. ಕೆಲವು ನಿಮಿಷ ತಡೆದು ಆನಂದ ಕೇಳಿದ :

" ಮುಂದಿನ ವಾರ ನಾನೊಮ್ಮೆ ಪುಣೆಗೆ ಬಂದು ಹೋಗಬೇಕೆಂದಿದ್ದೇನೆ."

" ಯಾತಕ್ಕೆ ? "

" ಸುಮ್ಮನೆ ! ಬರಲಾ ? "

" ಅಲ್ಲಿ ಬಂದೇನು ಪ್ರಯೋಜನ ? ಅಲ್ಲಿ ನಿಮಗೆ ಮೂಕವ್ರತ ! ಯಾರೂ ನಿಮ್ಮ ಕೂಡ ಮಾತಾಡುವಂತಿಲ್ಲ. ಅಲ್ಲದೆ, ನಿಮಗೆ ಓದು ಹಾಳು ! "

ಮೋಹಿನಿ ಕಟುವಾಗಿ ಮಾತಾಡುತ್ತಿದ್ದಳು.

ವೇಳೆಗೆ ಸರಿಯಾಗಿ ರೈಲು ಬಂದಿತು. ಅಷ್ಟೇನೂ ಗದ್ದಲವಿರದ್ದರಿಂದ ಮೋಹಿನಿಗಾಗಿ ಒಳ್ಳೆಯ ಜಾಗವೊಂದನ್ನು ಆನಂದ ಹುಡುಕಿಕೊಟ್ಟು ಕುಳ್ಳಿರಿಸಿದ. ಮೋಹಿನಿಗೆ ಯಾವುದರಲ್ಲಿಯೂ ಉತ್ಸಾಹವಿದ್ದಂತೆ ಕಾಣುತ್ತಿರಲಿಲ್ಲ. ಅವಳ ಮನಸ್ಸು ಅವಳಿಗೆ ಹೇಳುತ್ತಿತ್ತು : ' ಈಗ ನೀನು ಇಲ್ಲಿಂದ ಹೊರಟದ್ದು ನಿನ್ನ ಸೋಲು. ಇಷ್ಟು ಸಹಜವಾಗಿ ಸೋಲನ್ನು ಒಪ್ಪಬಾರದಾಗಿತ್ತು ' ಎಂದು. ಆನಂದ ಕೇಳಿದ :

" ತಿರುಗಿ ಯಾವಾಗ ಬರುತ್ತೀ ? "

" ಪರೀಕ್ಷೆಯ ಮುನ್ನಾದಿನ."

" ಹೋದಮೇಲೆ ಕಾಗದ ಬರೆಯುವೆಯಾ ? "

" ಏನೆಂದು ? "

ಆನಂದನಿಗೆ ಪ್ರಶ್ನೆ ವಿಚಿತ್ರವೆನಿಸಿತು. ಅದನ್ನು ತಪ್ಪಿಸಲೆಂದು ಬೇರೆಯಾಗಿ ಕೇಳಿದ :

" ನಾನು ಬರೆದುದಕ್ಕೆ ಉತ್ತರ ಬರೆಯುವೆಯಾ ? "

" ಹುಂ...."

ಗಾಡಿ ಹೊರಡುವುದರಲ್ಲಿತ್ತು. ಆನಂದನಿಗೆ ಏನೇನನ್ನೋ ಹೇಳಬೇಕಾಗಿದ್ದು ಬಾಯಿಗೆ ಮಾತು ಬಾರದಂತಾಗಿತ್ತು. ಅವನನ್ನು ನೋಡಿ ಮೋಹಿನಿಗೆ ಒಂದು ಕ್ಷಣ ಕನಿಕರವೆನಿಸಿತು. ಆದರೆ ಮರುಕ್ಷಣದಲ್ಲಿಯೆ ವಿಚಾರ ಹೊಳೆಯಿತು. ' ಇಂಥವರಿಗೆ ಇವೇ ಪ್ರತಿಫಲ. ಇಷ್ಟು ಮನಃಸ್ಥೈರ್ಯವಿಲ್ಲದವರಿಗೆ ಬದುಕಿನಲ್ಲಿ ಇನ್ನೇನು ಸಿಕ್ಕೀತು ? ' ಎಂದು.

ಗಾಡಿ ಬಿಡುವವರೆಗೂ ಆನಂದ–ಭಾಸ್ಕರರಿಬ್ಬರೂ ನಿಂತಿದ್ದರು. ವಿಶೇಷ ಯಾವ ಮಾತೂ ನಡೆಯಲಿಲ್ಲ. ಭಾಸ್ಕರ ಒಂದೇ ಸವನೆ ತನ್ನನ್ನೇ ನೋಡುತ್ತಿದ್ದನೆಂಬುದನ್ನು ತಿಳಿದ ಮೋಹಿನಿ ಆತನನ್ನು ಕಣ್ಣೆತ್ತಿಯೂ ನೋಡಿರಲಿಲ್ಲ. ಗಾಡಿ ಹೊರಡುವಾಗ ಕಿಟಕಿಯಲ್ಲಿಟ್ಟ ಅವಳ ಮೊಳಕೈಯ ಮೇಲೆ ಮೆತ್ತಗೆ ಕೈ ಸವರುತ್ತ ಆನಂದ ಕೇಳಿಕೊಂಡಿದ್ದ : " ಹೋದ ಕೂಡಲೆ ಕಾಗದ ಬರೆಯುವೆಯಾ ? " ಎಂದು. ಮೋಹಿನಿ ಮಾತನಾಡಿರಲಿಲ್ಲ.

ತಾಯನ್ನು ಕಾಣಬೇಕೆಂದು ಮೋಹಿನಿಗೆ ಕಳೆದ ನಾಲ್ಕಾರು ತಿಂಗಳಲ್ಲಿ

ಎಷ್ಟೋ ಸಲ ಆತುರವೆನಿಸಿದ್ದರೂ ಪುಣೆಗೆ ಹೋಗುವುದೆಂದರೆ ಆಕೆಗೆ ತೀರ ಬೇಸರವೆನಿಸುತ್ತಿತ್ತು. ಅಲ್ಲಿಯೇ ಹುಟ್ಟಿ ಅಲ್ಲಿಯೇ ಮದುವೆಯಾಗುವ ವರೆಗೆ ಬೆಳೆದಿದ್ದರೂ ಅಲ್ಲಿಗೆ ತಿರುಗಿ ಹೋಗಲು ಆಕೆಯ ಮನಸ್ಸು ಯಾತಕ್ಕಾಗಿಯೋ ಹಿಂಜರಿಯುತ್ತಿತ್ತು. ಹಾಗೆ ನೋಡಿದರೆ, ಕಳೆದ ವರ್ಷದಲ್ಲಿ ಆನಂದನ ಕೂಡ ವಿಪರೀತ ಮನಸ್ತಾಪವಾದ ಒಂದೆರಡು ಸಂದರ್ಭದಲ್ಲಿ ಆಕೆ ಪುಣೆಗೆ ಹೋಗ ಬೇಕೆಂದಿದ್ದಳು. ಆದರೆ ಪುಣೆಯೆಂದರೆ ಅವಳಿಗೆ ಅವಳ ಮತ್ತು ಅವಳ ತಾಯಿಯ ಭೂತಕಾಲದ ಸಂಕೇತವಾದಂತಿತ್ತು. ಆ ಭೂತಕಾಲದಲ್ಲಿ ಸುಖಕ್ಕಿಂತಲೂ ದುಃಖದ ಅಂಶ ಹೆಚ್ಚಾಗಿದ್ದರಿಂದಲೋ, ಅಲ್ಲಿಯ ಹಿಂದಿನ ಒಂದೆರಡು ನೆನಹು ಗಳು ಆಕೆಯ ಮನಸ್ಸನ್ನು ಕಾಡುತ್ತಿದ್ದುದರಿಂದಲೋ ಮೋಹಿನಿಗೆ ತನ್ನ ತಾಯಿಯ ಹತ್ತಿರ ಹೋಗುವುದಕ್ಕೆ ಅಷ್ಟೊಂದು ಮನಸ್ಸಾಗುತ್ತಿರಲಿಲ್ಲ. ಪುಣೆ ಯನ್ನು ನೆನೆದಾಗಲೆಲ್ಲ ತನ್ನ ತಾಯಿಯ ದುರ್ದೈವ, ಅವಳು ಬಾಳಿನಲ್ಲಿ ಪಟ್ಟ ಕಷ್ಟ ಒಂದು ದೊಡ್ಡ ಹೊರೆಯಾಗಿ ಅವಳ ಮನಸ್ಸನ್ನು ಹೇಳಲಾರದ ಸಂಕಟಕ್ಕೆ ಈಡುಮಾಡುತ್ತಿದ್ದವು.

ದಾದರಿನಿಂದ ಹೊರಟ ರೈಲು ಮೋಹಿನಿಯನ್ನು ಬೇಡವಾದ ಆ ಭೂತ ಕಾಲದ ಕಡೆಗೆ ಕರೆದೊಯ್ಯುತ್ತಿತ್ತು. ಅವಳ ಮನಸ್ಸು ಆಗಲೇ ಎರಡು ವರ್ಷ ಗಳಾಚೆ ಹಾರಿಹೋಗಿತ್ತು. ಹೊರಗೆ ಬಿಸಿಲು ರಣರಣ ಉರಿಯುತ್ತಿತ್ತು. ಒಲವನ್ನು ಕಾಣದ ಹೃದಯದ ಕಣ್ಣೀರಿನಂತೆ ಮೈಮೇಲೆ ಬೆವರು ನಿಧಾನವಾಗಿ ಇಳಿಯುತ್ತಿತ್ತು.

* * * *

ಆಗ ಮೋಹಿನಿಗೆ ಮದುವೆಯ ವಯಸ್ಸು. ತಂದೆಯ ಮುಖವನ್ನು ನೋಡಿರದ ಆಕೆ, ಅಣ್ಣನ ಆಶ್ರಯದಲ್ಲಿದ್ದ ತನ್ನ ತಾಯಿಯ ನಲಿಗೆಯಲ್ಲಿ ಬೆಳೆದು ನಿಂತಿದ್ದಳು. ತಾಯಿ, ತಾಯಿಯ ತಂದೆ ಇಬ್ಬರಿಗೂ ಆದಷ್ಟು ಬೇಗ ಮೋಹಿ ನಿಯ ಮದುವೆಯನ್ನು ಮುಗಿಸಿಯೇಬಿಡಬೇಕೆಂಬಂತಾಗಿತ್ತು. ಆದರೆ ಇಬ್ಬರ ಕಾರಣಗಳೂ ಬೇರೆಯಾಗಿದ್ದವು. ಮುದುಕ ಅತ್ಯಂತ ಜಿಪುಣ. ತನ್ನ ಮನೆ ಮಾರಿನಿಂದ ಬಂದ ಆಸ್ತಿಯೆಲ್ಲವನ್ನೂ ಶೇಖರಿಸಿ ಇಡುವುದೇ ಆತನ ಜೀವಿತದ ಧ್ಯೇಯವಾದಂತಿತ್ತು. ಹಾಗೆ ನೋಡಿದರೆ ಮಗಳು, ಮೊಮ್ಮಗಳ ಹೊರತಾಗಿ ತನಗೆ ಯಾರಿಲ್ಲದಿದ್ದರೂ ಇದ್ದ ಅನುಕೂಲಗಳನ್ನು ಅನುಭವಿಸಿ ತನ್ನ ಕೊನೆಯ

ದಿನಗಳನ್ನು ಸುಖದಲ್ಲಿ ಕಳೆಯುವುದಕ್ಕಿಂತ, ಇದ್ದು ಬಿದ್ದುದನ್ನೆಲ್ಲ ಯಾರಿಗಾಗಿಯೋ ಕಲೆಹಾಕುವ ಯತ್ನದಲ್ಲಿರುತ್ತಿದ್ದ. ಅವನ ದೃಷ್ಟಿಯಿಂದ ಮೋಹಿನಿಯೂ ಒಂದು ತರದ ಸೊತ್ತಾಗಿದ್ದಳು. ಮೋಹಿನಿಯನ್ನು ಯಾವನಾದರೊಬ್ಬ ಸಿರಿವಂತನಿಗೆ ಮದುವೆ ಮಾಡಿಕೊಟ್ಟರೆ ತಮಗೂ ಅನುಕೂಲವೆಂಬ ಕಾರ್ಪಣ್ಯ ಮುದುಕನ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತು. ಆ ದೃಷ್ಟಿಯಿಂದ ತಮ್ಮ ಮನೆಯ ಸಮೀಪದಲ್ಲಿಯೆ ಇರುತ್ತಿದ್ದ ನಡುವಯಸ್ಸಿನ ದಿನಕರರಾಯನೊಡನೆ ಮಾತುಕತೆ ನಡಸಿಯೂ ಇದ್ದ. ದಿನಕರರಾಯನದು ಊರಿನಲ್ಲಿ ದೊಡ್ಡದೊಂದು ಜವಳಿ ಅಂಗಡಿ ಇತ್ತು. ಬೇಕಾದಷ್ಟು ಅನುಕೂಲವಂತನಿದ್ದ. ಆದರೆ ಮೊದಲ ಹೆಂಡತಿಯಿಂದ ಆತನಿಗೆ ಐದು ಮಂದಿ ಮಕ್ಕಳು. 'ಮಕ್ಕಳಿದ್ದರೇನಂತೆ, ಅವನಿಗೇನು ಕಡಿಮೆ, ಆಳುಗಳನ್ನಿಟ್ಟುಕೊಳ್ಳಬಹುದು. ದಿನಕರರಾಯನಂಥ ಗಂಡ ಸಿಕ್ಕರೆ—ಮೋಹಿನಿಯ ದೈವ!' ಎಂದುಕೊಳ್ಳುತ್ತಿದ್ದನಲ್ಲದೆ ತನ್ನ ಮಗಳಿಗೂ ತನ್ನ ಅಭಿಪ್ರಾಯವನ್ನು ಹತ್ತು ಸಾರೆ ಹೇಳಿಯೂ ಇದ್ದ.

ಆದರೆ ದಿನಕರರಾಯನಂಥ ದಿನಕಳೆದವನಿಗೆ ಮೋಹಿನಿಯನ್ನು ಒಪ್ಪಿಸುವುದು ಮೋಹಿನಿಯ ತಾಯಿಗೆ ಸುತರಾಂ ಒಪ್ಪಿಗೆಯಿಲ್ಲ. ತಾರುಣ್ಯದಲ್ಲಿಯೆ ಗಂಡನನ್ನು ಕಳೆದುಕೊಂಡ ಆಕೆಗೆ ತರುಣ ಹೃದಯದ ನಿರಾಶೆಯ ದುಃಖ ಗೊತ್ತಿತ್ತು. ದೇಹದ ಬೇಡಿಕೆ ಎಷ್ಟು ಕಠೋರವಾಗಬಹುದು, ಯಾವ ಅನುಕೂಲವೂ ಅದನ್ನು ಸೆರೆಹಿಡಿದು ನಿಲ್ಲಿಸಲು ಸಮರ್ಥವಾಗಲಿಕ್ಕಿಲ್ಲವೆಂಬುದನ್ನು ತಿಳಿದ ಮೋಹಿನಿಯ ತಾಯಿ, ಮಗಳನ್ನು ಅಂಥ ಪರಿಸ್ಥಿತಿಗೆ ಬಲಿಕೊಡಲು ಸಿದ್ಧಳಾಗಿರದಿದ್ದರೆ ಆಶ್ಚರ್ಯವಿರಲಿಲ್ಲ. ದಿನಕರರಾಯನಿಂದ ಮೋಹಿನಿಯನ್ನು ಉಳಿಸಿಕೊಳ್ಳಲೆಂದೇ ಮಗಳ ಮದುವೆಯನ್ನು ಇನ್ನೆಲ್ಲಾದರೂ ಗೊತ್ತುಪಡಿಸಲು ಹವಣಿಸುತ್ತಿದ್ದಳು. ಆ ವಿಷಯದಲ್ಲಿ ತಾಯಿಗೂ ಮುದುಕನಿಗೂ ಎಷ್ಟೋ ಸಲ ವಾಗ್ಯುದ್ಧ ನಡೆದಿತ್ತು. ಮಾತಿನಿಂದಲಾದರೂ ಮುದುಕ ದಿನಕರರಾಯನಲ್ಲಿ ಆಸೆ ಹುಟ್ಟಿಸಿದ್ದ. ಮೋಹಿನಿಯ ಸ್ಫುರದ್ರೂಪವನ್ನು ಕಂಡ ದಿನಕರರಾಯ ಅವಳಿಗಾಗಿ ಏನನ್ನು ಕೊಡಲೂ ಸಿದ್ಧನಿದ್ದ. ಮೊದಮೊದಲು ಮೋಹಿನಿಗೆ ಈ ವಿಷಯ ಗೊತ್ತಿರಲಿಲ್ಲ. ಎಂದಿನಂತೆ ಕಾಲೇಜಿಗೆ ಹೋಗಿ ಚೆಲ್ಲಾಟದಲ್ಲಿರುತ್ತಿದ್ದಳು. ಹತ್ತಾರು ಜನರ ಲಕ್ಷ್ಯವನ್ನು ತಾನು ಸೆಳೆಯುತ್ತಿದ್ದೇನೆಂಬುದರ ಅರಿವು ಮೋಹಿನಿಯ ಮನಸ್ಸಿನಲ್ಲಿ ಮೂಡಿ ಒಂದು ರೀತಿಯ ಆತ್ಮಪ್ರೌಢಿಮೆ

ಆಕೆಯಲ್ಲಿ ಬೆಳೆಯುತ್ತಿದ್ದರೂ ತನ್ನ ಹಿಂದೆಯೆ ಸುಳಿದಾಡುತ್ತಿದ್ದ ಹತ್ತಾರು ಯುವಕರಲ್ಲಿ ಒಬ್ಬರ ಕಡೆಗೂ ಮೋಹಿನಿ ಗಮನಕೊಟ್ಟಿರಲಿಲ್ಲ. ಆಗಾಗ ಯಾವುದೋ ಒಂದು ಸರಸ ಮಧುರ ಭಾವ ಅವಳ ಹೃದಯದಲ್ಲಿ ಕಲ್ಲೋಲವನ್ನೆಬ್ಬಿಸುತ್ತಿತ್ತು. ಆದರೆ ಎಷ್ಟೋ ಸಲ ದಿನಕರರಾಯನನ್ನು ನೋಡಿದ್ದರೂ ಆಕೆಯ ಆ ಭಾವನೆಯ ಕನಸಿನಲ್ಲಿ ದಿನಕರರಾಯನಿಗೆ ಯಾವ ಸ್ಥಾನವೂ ಇರಲಿಲ್ಲ. ದಿನಕರರಾಯ ಅವಳ ಕಲ್ಪನೆಯ ವರ್ತುಲಕ್ಕೆ ಬಾಹಿರನಾಗಿದ್ದನೆಂದರೂ ಸರಿ.

ರೈಲು ಬಲು ವೇಗವಾಗಿ ಸಾಗಿತ್ತು. ಗತಕಾಲದಲ್ಲಿ ಸಿಲುಕಿದ ಆಕೆಯ ಮನಸ್ಸು ಅಲ್ಲಿಂದ ಸಹಜವಾಗಿ ಕಾಲುಕೀಳಲಸಮರ್ಥವಾಗಿತ್ತು. ಚಿತ್ರ ಸರಕ್ಕನೆ ಬದಲಾಯಿಸಿತು. ದಿನಕರರಾಯ ತನ್ನನ್ನು ಸ್ಪಷ್ಟವಾಗಿ ಮನವೊಲಿಸಲು ಮಾಡಿದ ಪ್ರಯತ್ನಗಳನ್ನು ನೆನೆದಾಗ ಮೋಹಿನಿಯ ಹೃದಯ ತಳಮಳಗೊಳ್ಳುತ್ತಿತ್ತು. ಅಜ್ಜ ಒಂದು ದಿನ ಹೇಳಿದ್ದರು: ' ನಿನಗಾಗಿ ಎರಡು ಹೊಸ ಸೀರೆ ನೋಡಿ ಇಟ್ಟು ಬಂದಿದ್ದೇನೆ, ಮೋಹಿನಿ. ಆದರೂ ನೀನೇ ನೋಡಿಕೊಂಡು, ನಿನಗೆ ಒಪ್ಪಿಗೆಯಾದರೆ, ತೆಗೆದುಕೊಂಡು ಬಾ ' ಎಂದು ಹೇಳಿದ್ದರು. ಹೊಸ ಬಟ್ಟೆಯೆಂದರೆ ಹತ್ತು ಮೈಲಿ ಓಡಿಬರುವ ಮೋಹಿನಿ ಗಾಳಿಯಂತೆ ದಿನಕರರಾಯನ ಅಂಗಡಿಗೆ ಓಡಿದ್ದಳು. ಮೋಹಿನಿ ಅಂಗಡಿಗೆ ಸ್ವತಃ ಬಂದುದನ್ನು ನೋಡಿ ದಿನಕರರಾಯನಿಗೆ ಸ್ವರ್ಗವೇ ಇಳಿದುಬಂದಂತಾಗಿತ್ತು. ಅಂಗಡಿಯಲ್ಲಿಯ ಉತ್ತಮೋತ್ತಮವಾದ ಬಟ್ಟೆಗಳನ್ನು ಆಕೆಯೆದುರು ಹರಡಿ, ಆಕೆ ಯಾವುದನ್ನು ತೆಗೆದುಕೊಳ್ಳಲಿ ಯಾವುದನ್ನು ಬಿಡಲಿ, ಎನ್ನುವಂತೆ ಮಾಡಿದ್ದ.

' ಯಾವುದು ಬೇಕಾದುದನ್ನು ನೀನು ತೆಗೆದುಕೊಳ್ಳಬಹುದು! 'ಎಂದಿದ್ದ.

' ಓ! ನಾನು ಬೇಕಾದುದನ್ನು ಬೇಡಬಹುದು. ಅಜ್ಜ ಒಪ್ಪಬೇಕಲ್ಲ? ' ಎಂದು ತಾನು.

' ಇದರಲ್ಲಿ ಅಜ್ಜ ಅವರದೇನು ಸಂಬಂಧ? ಸೀರೆ ಉಟ್ಟುಕೊಳ್ಳುವವರು ಯಾರು? ನೀನೋ, ಅಜ್ಜನೊ? ' ಎಂದು ನಕ್ಕು ನಗಿಸಿದ್ದ.

' ಉಡುವವಳು ನಾನಾದರೂ ದುಡ್ಡು ಕೊಡುವವರು ಅವರು! '

' ಅಷ್ಟೇ ತಾನೆ? ಅವರಿಂದ ದುಡ್ಡು ತೆಗೆದುಕೊಳ್ಳಲು ನಾನು ಸಮರ್ಥನಿದ್ದೇನೆ. ನಿನಗೆ ಬೇಕಾದ ಸೀರೆಯನ್ನು ನೀನು ತೆಗೆದುಕೊಳ್ಳಬಹುದು '

ಎಂದು ಹೇಳಿ ನಯವಾದ ಎರಡು ಸೀರೆಗಳನ್ನು ಆಕೆಯೆದುರು ಇಟ್ಟಿದ್ದ. ಆ ಸೀರೆಗಳನ್ನು ಇಷ್ಟು ಸಹಜವಾಗಿ, ತನಗೆ ಆಗ್ರಹಪೂರ್ವಕವಾಗಿ, ದಿನಕರ ರಾಯ ಯಾಕೆ ಕೊಡುತ್ತಿರಬಹುದೆಂಬುದು ಮೋಹಿನಿಗೆ ಆಗ ಹೊಳೆಯಲಿಲ್ಲ. ಆದರೆ ಅವನ್ನು ತೆಗೆದುಕೊಂಡು ಮನೆಗೆ ಬಂದಾಗ ಮೋಹಿನಿಯ ತಾಯಿ ಮಾತ್ರ ತೀರ ವ್ಯಸನಗೊಂಡಿದ್ದರು.

' ಇಷ್ಟು ಬೆಲೆಯ ಸೀರೆಯನ್ನು ಯಾತಕ್ಕೆ ತಂದೆ, ಮೋಹಿನಿ ? '

' ನಾನು ಬೇಡವೆಂದೆ. ಅಜ್ಜ ಹೇಳಿದ್ದಾರೆ, ತೆಗೆದುಕೊಂಡು ಹೋಗು, ಎಂದರು.'

' ತಲೆ ಕೆಟ್ಟಿದೆ, ನಿಮ್ಮ ಅಜ್ಜನದು...." ಎಂದು ತಾಯಿ ತುಸು ಸಿಡುಕಿನಿಂದಲೇ ಅಂದಿದ್ದರು. ತನ್ನ ತಂದೆಯ ಇಂಗಿತವನ್ನು ಪೂರ್ಣವಾಗಿ ತಿಳಿದಿದ್ದ ತಾಯಿ ಹೇಳಿದ್ದರು :

' ಮೋಹಿನಿ, ಆ ಎರಡು ಸೀರೆಗಳನ್ನೂ ಈಗಿಂದೀಗಲೇ ತಿರುಗಿ ಕೊಟ್ಟು ಬಾ... "

' ಯಾಕೆ ? '

ಆ ಹೊಸ ಬಟ್ಟೆಗಳ ಮೇಲಿನ ಮೋಹವನ್ನು, ಅವುಗಳನ್ನು ಆದಷ್ಟು ಬೇಗ ಉಟ್ಟುಕೊಳ್ಳುವ ಉತ್ಸಾಹವನ್ನು ತಡೆಯುವುದು ಮೋಹಿನಿಗೆ ಕಷ್ಟವಾಗಿತ್ತು. ಕೈಗೆ ಬಂದುದನ್ನು ಬಾಯಿಂದ ಕಸಿದುಕೊಳ್ಳಲೆಳಸುತ್ತಿದ್ದ ತಾಯಿಯ ಮನಸ್ಸು ಆಕೆಗೆ ತಿಳಿಯದಾಗಿತ್ತು. ಅವಳೆಂದಿದ್ದಳು :

' ಯಾಕಮ್ಮ, ಅವರಾಗಿಯೇ ಆಗ್ರಹಪೂರ್ವಕ ಕೊಟ್ಟು, ಅಜ್ಜನನ್ನು ಕೂಡ ಒಪ್ಪಿಸುತ್ತೇನೆಂದು ಹೇಳಿದ್ದಾರೆ. ಒಂದು ಸಲವಾದರೂ ಒಳ್ಳೆಯ ಸೀರೆಗಳನ್ನುಡಬಾರದೇ ನಾನು ? ' ಎಂದುದಕ್ಕೆ ತಾಯಿ ಕಣ್ಣೀರು ತಂದು ಹೇಳಿದ್ದಳು :

' ನಿನಗೆ ತಿಳಿಯುವುದಿಲ್ಲ, ಮೋಹಿನಿ. ನಾನು ಬೇಡ ಎಂದು ಹೇಳಿದರೆ ಬೇಡ.'

ಮಗಳಿಗೆ ಇದ್ದ ವಿಷಯವನ್ನು ಸವಿಸ್ತಾರವಾಗಿ ಹೇಳಿ ಯಾಕೆ ಆಕೆಯ ಮನಸ್ಸಿನ ನೆಮ್ಮದಿಯನ್ನು ಹಾಳುಮಾಡಬೇಕೆಂದು ತಾಯಿ ಹಾಗೆ ಹೇಳುತ್ತಿರುವಾಗಲೇ ಅಜ್ಜ ತಾಯಿ-ಮಗಳ ಸಂವಾದವನ್ನು ಕೇಳಿ ಅಟ್ಟದಿಂದ ಕೆಳಗಿಳಿದು ಬಂದು ಹೇಳಿದ್ದರು :

'ಯಾಕೆ ಸುಮ್ಮನೆ ಬೇಡ ಎಂದು ಹೇಳುತ್ತೀ? ನಾನೇ ಹೇಳಿ ಬಂದಿದ್ದೆ, ಮಗುವಿಗೆ ಹಬ್ಬಕ್ಕಾಗಿ ಎರಡು ಒಳ್ಳೆಯ ಸೀರೆ ಇರಲಿ, ಎಂದು.'

ತಾಯಿ ಉತ್ತರವಾಗಿ ಮಾತನಾಡಲಿಲ್ಲ. ಆದರೆ ಮನಸ್ಸಿನಲ್ಲಿಯೇ ಪರಿತಪಿಸಿ ಅಂದುಕೊಂಡಿದ್ದಳು: 'ಈ ಔದಾರ್ಯವನ್ನು ನಾನು ಬಲ್ಲೆ. ಆದರೆ ಈ ಸೀರೆಯ ಎಳೆಯಿಂದಲೇ ನನ್ನ ಮಗುವಿನ ಕುತ್ತಿಗೆ ಕೊಯ್ಯಬೇಡಿರಿ' ಎಂದು.

ಮುಂದೆ ನಾಲ್ಕೆಂಟು ದಿನಗಳಲ್ಲಿಯೇ ಇನ್ನೊಂದು ವಿಷಯ ನಡೆದು, ಮೋಹಿನಿಗೆ ದಿನಕರರಾಯನ ಔದಾರ್ಯದ ಅರ್ಥವಾಗಿತ್ತು. ಅಂದು ಸಾಯಂಕಾಲ ದಿನಕರರಾಯನ ಮನೆಯಲ್ಲಿ ಸತ್ಯನಾರಾಯಣನ ಪೂಜೆ ನಡೆದಿತ್ತು. ಮೋಹಿನಿಗಾಗಿ ಮನೆಯವರೆಲ್ಲರಿಗೂ ಔತಣ! ಮೋಹಿನಿಗೆ, ಬಂದ ಹೆಣ್ಣುಮಕ್ಕಳಿಗೆ ಅರಿಸಿನ ಕುಂಕುಮ ಕೊಡುವ ಕೆಲಸ. ತಿಳಿಹಸಿರು ಬಣ್ಣದ ಹೊಸ ಸೀರೆಯನ್ನುಟ್ಟ ಮೋಹಿನಿಯನ್ನು ನೋಡಿ ದಿನಕರರಾಯನ ಚಿತ್ತ ಚಲಿಸಿತ್ತು. ಮೋಹಿನಿಯ ಮೋಹ ಅವನ ದೇಹಾದ್ಯಂತವನ್ನೂ ನಡುಗಿಸಿತ್ತು. ಮೋಹಿನಿಯ ತಾಯಿ ಅಡಿಗೆಮನೆಯಲ್ಲಿದ್ದರು. ಬರುಹೋಗುವವರ ಗದ್ದಲವೂ ಕಡಿಮೆಯಾಗಿತ್ತು. ಅಟ್ಟದ ಪಾವಟಿಗೆಗಳ ಮೇಲೆ ನಿಂತು ದಿನಕರರಾಯ 'ಮೋಹಿನಿ—' ಎಂದ.

'ಏನು?' ಎಂದಳು ಮೋಹಿನಿ.

'ಮೇಲೆ ನಿನ್ನ ಅಜ್ಜ ಕರೆಯುತ್ತಾರೆ ಅಂತ ಕಾಣಿಸತದೆ' ಎಂದ.

'ಯಾತಕ್ಕಂತೆ?'

'ನನಗೇನು ಗೊತ್ತು? ಬಂದು ಕೇಳಿಕೊಂಡು ಹೋಗಬಾರದೆ?'

ಇಷ್ಟು ಹೇಳಿ ದಿನಕರರಾಯ ಅಟ್ಟದ ಮೇಲೇರಿ ಹೋದ. ಮುಂದಿನ ಹಾಲನ್ನು ದಾಟಿ ತನ್ನ ಕೋಣೆಯನ್ನು ನೇರಿ ನಿಂತುಕೊಂಡ. ಮೋಹಿನಿ ಅಟ್ಟವನ್ನೇರಿ ಬಂದು,

'ಎಲ್ಲಿದ್ದಾರೆ ಅಜ್ಜ?' ಎಂದು ಕೇಳಿದಳು.

'ಹಾಹಾ.... ಮೋಹಿನಿ, ಇದು ನೋಡು ...ಇಲ್ಲಿ' ಎಂದ ದಿನಕರರಾಯ.

ಮೋಹಿನಿಗೆ ಏನೂ ಅರ್ಥವಾಗಲಿಲ್ಲ. ನಾಲ್ಕು ಹೆಜ್ಜೆ ಮುಂದಕ್ಕೆ ಬಂದಳು. ಕೋಣೆಯ ಬಾಗಿಲ ಚೌಕಟ್ಟಿಗೆ ಕೈಯೂನಿಸಿ, ಕೊರಳು ಕೊಂಕಿಸಿ

ಇಣಿಕಿ ನೋಡಿ ಮತ್ತೆ ಕೇಳಿದಳು :

'ಎಲ್ಲಿದ್ದಾರೆ ?' ಎಂದು.

'ಹುಚ್ಚಿ, ಮೋಹಿನಿ....ನೀನು. ಸುಮ್ಮನೆ ಹೇಳಿದೆ ಹಾಗೆ' ಎಂದು ನಕ್ಕ.

'ಸುಮ್ಮನೆ ?'

'ಸುಮ್ಮನೇ ಅಲ್ಲ. • ನೀನು ಇಲ್ಲಿಗೆ ಬರಬೇಕೆಂದು ಹೇಳಿದೆ. ಬಾ, ಮೋಹಿನಿ, ಬಾ ಇತ್ತ ಕಡೆ....' ಎಂದು ಮೋಹಿನಿ ನಿಂತ ಕಡೆಗೆ ಬಂದ.

ಮೋಹಿನಿಗೆ ಭಯವಾಯಿತು. ತಟ್ಟನೆ ತಿರುಗಿ ಹೋಗಬೇಕೆಂದಳು. ಆದರೆ ಕಾಲು ಕೀಳಲಿಲ್ಲ. ದಿನಕರರಾಯ ತೀರ ಸಮೀಪಕ್ಕೆ ಬಂದು ಹೇಳಿದ :

'ಬಾ, ಮೋಹಿನಿ, ಈ ಕಡೆ ಬಾ....ಯಾಕೆ, ಹೆದರಿಕೆಯೇ ? ಬಾ ಇತ್ತ....'

'ಯಾತಕ್ಕೆ ?....' ಎಂದು ತಡವರಿಸಿದಳು ಮೋಹಿನಿ.

'ಇತ್ತ ಕಡೆಗೆ ಬಾ....ನಿನಗೊಂದು ಮಾತು ಹೇಳಬೇಕಾಗಿದೆ....'

'ಏನದು, ಇಲ್ಲಿಯೇ ಹೇಳಿರಿ....'

'ಈ ಸೀರೆ ಸೊಗಸಾಗಿದೆಯಲ್ಲವೆ ? ಸೇರಿತೇ ನಿನಗೆ ಅದು ?'

'ಹುಂ....'

'ಎಷ್ಟು ಸೊಗಸಾಗಿ ಕಾಣುತ್ತೀ ಮೋಹಿನೀ ನೀನು....'

ಎಂದವನೇ ದಿನಕರರಾಯ ಮೋಹಿನಿಯ ಕೈ ಹಿಡಿದು ಕೋಣೆಯೊಳಕ್ಕೆ ಎಳೆದುಕೊಂಡ. ಚಿಟ್ಟನೆ ಚೀರಬೇಕೆಂದಿದ್ದ ಮೋಹಿನಿಯ ಬಾಯ ಮೇಲೆ ದಿನಕರರಾಯ ಕೈಯಿಟ್ಟು ಸುಮ್ಮನಾಗಿರಿಸಿದ. ಮೋಹಿನಿಯ ಇಡೀ ದೇಹ ಗದಗದನೆ ನಡುಗಿ ಬೆವರೊಡೆಯಿತು. ದಿನಕರರಾಯನಿಗೆ ಉನ್ಮಾದ ತಡೆಯ ದಂತಾಗಿತ್ತು.

'ಬಿಡಿರಿ ನನ್ನನ್ನು, ನಾನು ಹೋಗುತ್ತೇನೆ....ಬಿಡಿರಿ....' ಎಂದು ಕಳವಳ ಪಟ್ಟುಕೊಂಡು ದಿನಕರರಾಯನ ಕೈಯಿಂದ ತನ್ನನ್ನು ಬಿಡಿಸಿಕೊಳ್ಳಲೆತ್ನಿಸುತ್ತಿದ್ದಳು. ಆತ ಬೇಡಿಕೊಳ್ಳುತ್ತಿದ್ದ :

'ಹುಚ್ಚಿಯಂತೆ ಮಾಡಬೇಡ, ಮೋಹಿನಿ. ನಿನಗೇನು ಬೇಕಾದುದನ್ನು ಕೊಡುವೆ. ನಿನಗೆ ನನ್ನ ಸರ್ವಸ್ವವನ್ನೂ ಕೊಡುವೆ, ಮೋಹಿನಿ....' ಎಂದು ಆಕೆಯನ್ನು ಇನ್ನೂ ತನ್ನ ಹತ್ತಿರ ಎಳೆದುಕೊಳ್ಳಲೆತ್ನಿಸಿದ. ದಿನಕರರಾಯ

ನಿಂದ ಬಿಡಿಸಿಕೊಳ್ಳುವುದು ಸಾಧ್ಯವಾಗಿ ಕಾಣಿಸಲಿಲ್ಲ. ಚಿಟ್ಟನೆ ಮತ್ತೆ ಚೀರ ಬೇಕೆಂದಳು. ಆದರೆ ಅಷ್ಟರಲ್ಲಿ ಅಡಿಗೆಮನೆಯಿಂದ 'ಮೋಹಿನಿ, ಮೋಹಿನೀ' ಎಂದು ತಾಯಿಯ ಕರೆ ಬಂದಿತು. ದಿನಕರರಾಯ ತಟ್ಟನೆ ಕೈ ಬಿಟ್ಟ. ಮಿಂಚಿ ನಂತೆ ಮೋಹಿನಿ ಕೆಳಗಡೆ ಓಡಿದಳು. ತಾಯಿ ಪಡಸಾಲೆಯಲ್ಲಿ ಬರುವಷ್ಟರಲ್ಲಿ ಮೋಹಿನಿ ಹೊರಬಾಗಿಲಲ್ಲಿ ಕಾಯುತ್ತಿದ್ದಳು. ಮುಖಚರ್ಯೆ ವಿಚಿತ್ರ ವಾಗಿತ್ತು!

ಮನೆ ಮುಟ್ಟಿದನಂತರ ಮೋಹಿನಿ ತಾಯ ಮಡಿಲಲ್ಲಿ ತನ್ನ ದುಃಖವನ್ನು ತೋಡಿಕೊಂಡಳು. ಕತೆಯನ್ನು ಕೇಳಿ ತಾಯಿಗೆ ತನ್ನ ಬದುಕಿನ ದುಃಖವೆಲ್ಲ ಮರುಕಳಿಸಿ ಬಂದಂತಾಗಿತ್ತು. ಅಸಹಾಯಸ್ಥಿತಿಯಲ್ಲಿ ಹೆಣ್ಣಾಗಿ ಬದುಕುವುದ ರಲ್ಲಿಯ ತನ್ನ ಕಷ್ಟದ ಚಿತ್ರಗಳು ಆಕೆಯೆದುರು ನಿಂತಾಗ ಆ ದುಃಖ ತನ್ನ ಮುದ್ದು ಮಗಳಾದ ಮೋಹಿನಿಯ ಪಾಲಿಗೂ ಬರುವಂತಾದ ಪರಿಸ್ಥಿತಿಯ ವಿಷಮತೆಯನ್ನು ಹಳಿದು ದುಃಖಿಸಿದಳು. ಆ ದುಃಖದ ಉದ್ವೇಗವೇ ಮೋಹಿನಿ ಯನ್ನು ಆದಷ್ಟು ಬೇಗ, ಯಾವ ಬಡವನಿಗಾದರೂ ಅಡ್ಡಿಯಿಲ್ಲ, ಮದುವೆ ಮಾಡಿಬಿಡಬೇಕೆಂಬ ನಿರ್ಧಾರವನ್ನು ಗಟ್ಟಿಮಾಡಿಸಿತು.

ಆ ಘಟನೆ ನಡೆದನಂತರವೂ ದಿನಕರರಾಯ ಸಾವಿರ ರೀತಿಯಲ್ಲಿ ಮೋಹಿನಿಯನ್ನು ಸೆಳೆಯಲೆತ್ನಿಸಿದ್ದ. ಸಾಮದಾನಭೇದೋಪಾಯಗಳಾವುವೂ ಫಲಕಾರಿಯಾಗದಿದ್ದಾಗ ದಿನಕರರಾಯ ತನ್ನ ಸೇಡಿಗೆ ನಿಂತ. ಮೋಹಿನಿಯ ತಾಯಿ ಚರಿತ್ರಹೀನೆಯೆಂತಲೂ, ಮೋಹಿನಿಯನ್ನು ಯಾವನೋ ಸಿರಿವಂತನ ಆಶ್ರಯದಲ್ಲಿಟ್ಟಿದ್ದಾಳೆಂದೂ ನಿಧಾನವಾಗಿ ಗುಲ್ಲನ್ನೆಬ್ಬಿಸಿದ. ತಿಂಗಳೊಪ್ಪತ್ತಿನಲ್ಲಿ ಆಚೆ ಈಚೆಯ ಜನ ಮಾತನಾಡಿಕೊಳ್ಳುವಂತಾಯಿತು. ಜನ ಯಾವಾಗಲೂ ಇಂಥ ಸಂದರ್ಭಗಳಿಗಾಗಿ ಕಾಯುತ್ತಿರುತ್ತದೊ ಏನೋ! ಎಳೆ ಸಿಕ್ಕರೆ ಕಥೆ ಕಟ್ಟಲಿಕ್ಕಾರಂಭ! ಮೋಹಿನಿಗೆ, ಅವಳ ತಾಯಿಗೆ—ಬದುಕು ಬೇಡವೆನ್ನುವಷ್ಟು ಬೇಸರವೆನಿಸತೊಡಗಿತು. ಮುದುಕ ಕೂಡ ದಿನಕರರಾಯನ ಹೇಸಿತನಕ್ಕೆ ಬೇಸರಪಟ್ಟು ಆದಷ್ಟು ಬೇಗ ಮೋಹಿನಿಯನ್ನು ಮದುವೆಮಾಡಿ ಕಳಿಸದ ಹೊರತು ಗತಿಯಿಲ್ಲವೆಂಬುದಕ್ಕೆ ಒಪ್ಪುವಂತಾಯಿತು. ಆದರೆ ತಂದೆ-ಮಗಳಿಗೆ ಆ ವಿಷಯದಲ್ಲಿ ಬೇಕಾದಷ್ಟು ಮನಸ್ತಾಪವಾಯಿತು.

'ಇದನ್ನೆಲ್ಲ ಇಷ್ಟಕ್ಕೆ ತಂದವಳು ನೀನೇ... ..' ಎಂದು ಮಗಳನ್ನು

ಮುದುಕ ಆಪಾದಿಸುತ್ತಿದ್ದ.

‘ ಹಾಗಾದರೆ ಅಂಥವನಿಗೆ ನಿಧಾನವಾಗಿ ಮೋಹಿನಿಯನ್ನು ಕೊಟ್ಟುಬಿಡ ಬೇಕಾಗಿತ್ತೆ ? ’

‘ ಏನು ಕೆಡಕಿತ್ತು ? ಸುಖವಾಗಿ ಇರುತ್ತಿದ್ದಳು. ಕೊಡಲಾರದ್ದಕ್ಕೇ ಈ ಅನರ್ಥ ! ’

‘ ಇಂದಲ್ಲ ನಾಳೆ ನಮ್ಮ ಹೆಸರಿಗೆ ತಗಲಿದ ಕಲಂಕ ಹೋದೀತು. ಆದರೆ ಆತನ ಯೋಗ್ಯತೆ ಮಾತ್ರ ತಿಳಿದುಹೋಯಿತು. ಇಂಥವನಿಗೆ ಮಗಳನ್ನು ಕೊಡುವುದಕ್ಕಿಂತ ಬಾವಿ ನೂಕಿದ್ದರೆ ಒಳ್ಳೆಯದು....ನೀಚ....’ ಎಂದು ತಾಯಿ ಹೇಳಿದ್ದಳು.

ಮನೆಯಲ್ಲಿಯ ಈ ಎಲ್ಲ ತಿಕ್ಕಾಟದಲ್ಲಿ ಮೋಹಿನಿಗೆ ಅನಿವಾರ್ಯವಾಗಿ ಮದುವೆಯನ್ನು ಕುರಿತು ಯೋಚಿಸಲೇಬೇಕಾಗುತ್ತಿತ್ತು. ಕನಿಷ್ಟಪಕ್ಷ ಬಿ.ಎ., ಪರೀಕ್ಷೆಯಾಗುವವರೆಗಾದರೂ ಮದುವೆಯ ಮಾತನ್ನೆತ್ತಕೂಡದೆಂದುಕೊಂಡಿದ್ದ ಮೋಹಿನಿಗೆ ತಾಯಿಯೊಡನೆ ಎಷ್ಟೋ ಬಾರಿ ವಾದವನ್ನು ನಡಸಬೇಕಾಯಿತು. ದಿನಕರರಾಯನ ನೀಚ ನಡತೆಯಿಂದ ಮೋಹಿನಿಯಲ್ಲಿ ಗಂಡಸಿನ ವಿಷಯದಲ್ಲಿ ಕೆಲವೊಂದು ಅಭಿಪ್ರಾಯಗಳು ದೃಢವಾಗತೊಡಗಿದವು. ಕೇವಲ ಕಾಮತೃಪ್ತಿ ಗಾಗಿ ಗಂಡನೊಬ್ಬ ತನ್ನನ್ನು ಒಪ್ಪಿ ಮದುವೆಯಾಗುವುದಾದರೆ ಆತ ತನ್ನ ಗಂಡ ನಾಗಲು ಅಯೋಗ್ಯ ಎಂದು ನಿರ್ಧಾರ ಮಾಡಿಕೊಂಡಿದ್ದಳು. ಆದರೆ ತನ್ನ ಗಂಡ ನಾಗಬೇಕಾದವನು ಎಂಥವನಿರಬಹುದು, ಅವನ ವಿಚಾರಗಳ ಮಟ್ಟವೇನಿರ ಬಹುದು, ಇದೆಲ್ಲ ಮೊದಲು ತಿಳಿಯುವುದೆಂತು ? ಒಬ್ಬರೊಬ್ಬರೊಡನೆ ಮಾತು ಕತೆಯಾಡಿ, ಒಬ್ಬರೊಬ್ಬರ ಮನಸ್ಸನ್ನು ತಿಳಿಯದ ಹೊರತು ಮದುವೆಯಂಥ ಮಹತ್ವದ ಸಂಬಂಧವನ್ನು ಬೆಳಸುವುದು ಕೇವಲ ಬುದ್ಧಿಗೇಡಿತನವೆಂದು ಖಂಡಿತ ವಾದ ಅಭಿಪ್ರಾಯವನ್ನೇ ಬೆಳಸಿಕೊಂಡು ಬಂದಿದ್ದರೂ ದಿನದಿನಕ್ಕೆ ತಾಯಿಯ ತೊಳಲಾಟವನ್ನು ತಡೆದುಕೊಳ್ಳಲಾಗದೆ ಸಂಪ್ರದಾಯದ ಮದುವೆಗೆ ಒಪ್ಪು ವಂತಾದಳು. ‘ ಮದುವೆಯಾದ ಮೇಲೆ ಎಲ್ಲವೂ ತಾನೇ ಸರಿಹೋಗುತ್ತದೆ ’ ಎಂದು ತಾಯಿ ಹೇಳುತ್ತಿದ್ದಳು. ಆದರೆ ಮೋಹಿನಿಗೆ ಮಾತ್ರ ತುಂಬ ಅನುಮಾನ ವೆನಿಸುತ್ತಿತ್ತು. ದಿನಕರರಾಯನ ಕುಟಿಲವನ್ನು ಮುಖ್ಯವಾಗಿ ತಪ್ಪಿಸಬೇಕಾಗಿತ್ತು. ಮದುವೆಗೊಪ್ಪಿದರೆ ಮುಂದೆ ಬೇಕಾದಷ್ಟು ಕಲಿಯಲೂ ಅನುಕೂಲವಾದೀತೆಂಬ

ಎಣಿಕೆಯಲ್ಲಿ ಮೋಹಿನಿ ತಾಯಿಯ ಯೋಚನೆಯನ್ನು ಮನ್ನಿಸುವಂತಾಗಿದ್ದಳು.

ತನ್ನ ಮತ್ತು ತನ್ನ ತಾಯಿಯ ವಿರುದ್ಧ ಆ ಕಾಲದಲ್ಲಿ ದಿನಕರರಾಯನು ಹೂಡಿದ ಅಪಪ್ರಚಾರವನ್ನು ನೆನೆದು ಮೋಹಿನಿ ಕಿಡಿಕಿಡಿಯಾದಳು. ಅಂದು ಮೊದಲಾದ ಮನಸ್ತಾಪ ಇಂದಿಗೂ ಮುಗಿಯಲಿಲ್ಲವಲ್ಲಾ ಎಂದು ಮರುಗಿದಳು. ಆದರೆ ಮರುಕ್ಷಣದಲ್ಲಿಯೆ ಅಂದುಕೊಂಡಳು: ಮರುಗಿ ಮೆತ್ತನಾಗಿ ಉಳಿದರೆ ಯಾವ ಅಳುಕೂ ಇಲ್ಲದೆ ಪ್ರಪಂಚ ತನ್ನನ್ನು ತುಳಿದು ಪಾತಾಳಕ್ಕೆ ಕಳಿಸುವುದು, ಎಂದು. ಆತನ ಅಪಪ್ರಚಾರವನ್ನು ಕೇಳಿದವರು ಕಣ್ಣು ಚಿವುಟಿ ತನ್ನ ವಿರುದ್ಧ ಪಿಸುಮಾತನಾಡಿದವರೆದುರು ಆಗ ತಾನು ಆತ್ಮವಿಶ್ವಾಸದ ಹಟದಿಂದ ನಿರ್ದಾಕ್ಷಿಣ್ಯವಾಗಿ ನಡೆದುಕೊಳ್ಳುತ್ತಿದ್ದುದನ್ನು ನೆನೆದಾಗ ಮೋಹಿನಿಗೆನಿಸಿತು: ಸಮಾಜ ತನ್ನನ್ನು ನಿಷ್ಕಾರಣವಾಗಿ ಆ ಪರಿಯಾಗಿ ಅಪಮಾನಿಸುತ್ತಿದ್ದಾಗ ತಾನಾದರೂ ಸಮಾಜದ ಪಿಸುಮಾತಿಗೆ ಏಕೆ ಕಿವಿಗೊಡಬೇಕು? ಎಂದುಕೊಂಡು, ತನಗೆ ನಿಸ್ಸಂದೇಹವಾಗಿ ಸರಿಯೆನಿಸಿದ ದಾರಿಯಲ್ಲಿಯೇ ನಡೆದುಕೊಳ್ಳುತ್ತಿದ್ದುದು ಸರಿಯಾದದ್ದೇ ಆಯಿತು, ಎಂದು. ಆ ಕಾಲದಲ್ಲಿ ತಾಯಿ ಪಟ್ಟ ದುಃಖ, ಒಳಮನಸ್ಸಿನಲ್ಲಿ ತನಗೆನಿಸುತ್ತಿದ್ದ ಅವಮಾನ—ಒಟ್ಟಿನಲ್ಲಿ ಮೋಹಿನಿಯಲ್ಲಿ ಆತ್ಮಾಭಿಮಾನವನ್ನು ಕೆರಳಿಸುವಂತಾಗಿದ್ದವು. ಮುಂಬಯಿಗೆ ಬಂದನಂತರವೂ ಅದೇ ಇತಿಹಾಸ ಇನ್ನೊಂದು ರೀತಿಯಲ್ಲಿ ಪುನರಾವೃತ್ತವಾದಾಗಲಂತೂ ಅಂಥ ವಿಚಾರಶೂನ್ಯತೆಗೆ ಆಸ್ಪದ ಕೊಡುವವರಿಗೆ ಇದಿರಾಗಿ ನಿಲ್ಲದೆ ಬೇರೆ ದಾರಿಯಿಲ್ಲವೆಂಬುದನ್ನು ಮೋಹಿನಿ ದಿಟವಾಗಿ ತಿಳಿದುಕೊಂಡಿದ್ದಳು. ಅಲ್ಲದೆ, ಆ ತಿಳಿವನ್ನು ತನ್ನ ಎಲ್ಲ ಕೃತಿಗಳಿಂದಲೂ ತೋರಿಸಿಕೊಡುತ್ತಿದ್ದಳು. ಇದನ್ನೆಲ್ಲ ನೆನೆದಾಗ ಮೋಹಿನಿಯಲ್ಲಿ ಆತ್ಮಗೌರವ ಉಕ್ಕಿಬಂದು, 'ಎಂಥ ಎಡರೂ ಬರಲಿ, ಇಂಥ ಅಂಥ ಬುದ್ಧಿಗೆ ನನ್ನ ವ್ಯಕ್ತಿತ್ವವನ್ನು ಬಲಿಯಾಗಿ ಕೊಡಲಿಕ್ಕಿಲ್ಲ' ಎಂದು ಅಂದುಕೊಳ್ಳುತ್ತಿದ್ದಳು. ಮುಂದೆ ಕೆಲವು ದಿನಗಳಲ್ಲಿಯೆ ಆನಂದರಾಯನ ಕೂಡ ಮೋಹಿನಿಯ ಮದುವೆ ಗೊತ್ತಾಗಿತ್ತು. ನೋಡಲಿಕ್ಕೆ ಬಂದಾಗಲೆ ಆನಂದ ತನ್ನ ಒಪ್ಪಿಗೆಯನ್ನು ಮುಕ್ತಕಂಠವಾಗಿ ಹೇಳಿಬಿಟ್ಟಿದ್ದ. ಆದರೆ ದಾಯಾದಿಯಂತೆ ದಿನಕರರಾಯ ಕಟ್ಟಿದ ಕಥೆಯೊಂದು—ನೋಡಲಿಕ್ಕೆ ಬಂದವರ ಕಿವಿ ಮುಟ್ಟುವಂತೆ ಮಾಡಿದ್ದ. ಹಾಲಿನ ಬಟ್ಟಲಲ್ಲಿ ಆಗಲೆ ಯಾರೋ ಉಪ್ಪನ್ನೆರಚಿದಂತಾಗಿತ್ತು. ಆದರೆ ಮೋಹಿನಿಗೆ ಮಾರುಹೋದ ಆನಂದ ಯಾರ ಮಾತಿಗೂ

ಸೊಪ್ಪು ಹಾಕುವ ಮನಃಸ್ಥಿತಿಯಲ್ಲಿರಲಿಲ್ಲ. 'ನೋಡು ಆನಂದ, ಇನ್ನೂ ವಿಚಾರ ಮಾಡು, ಜನ ಏನೇನನ್ನೋ ಮಾತನಾಡುತ್ತಾರೆ' ಎಂದು ಹೇಳಿದ್ದ ರಂತೆ ನಾರಾಯಣರಾಯರು. ಆದರೆ ಮುಂದೆ ತಿಂಗಳೊಪ್ಪತ್ತಿನಲ್ಲಿಯೆ ಮೋಹಿನಿ ಆನಂದನ ಮುದ್ದಿನ ಮಡದಿಯಾಗಿ ಮುಂಬಯಿಗೆ ಬಂದಿದ್ದಳು.

ರೈಲು ಘಟ್ಟವನ್ನೇರಿ ಮುಂದಕ್ಕೆ ಸಾಗಿತ್ತು. ಘಟ್ಟದ ಮೇಲಿನ ಹವೆ ಮುಂಬಯಿಯಲ್ಲಿಯಂತೆ ಉಸಿರು ಕಟ್ಟುವಂತಿರಲಿಲ್ಲ. ಮೋಹಿನಿಯ ಮನಃ ಸ್ಥಿತಿಯೂ ಮುಂಬಯಿ ಬಿಟ್ಟಾಗಿನಿಂದ ಬೇರೆಯಾಗಿತ್ತು. ದಿನಕರರಾಯ ತನ್ನ ವಿರುದ್ಧ ಹೂಡಿದ ಆಟ ಸಂಶಯಪಿಶಾಚಿಯಾಗಿ, ಕಳೆದ ಎರಡು ವರ್ಷದ ತನ್ನ ವೈವಾಹಿಕಜೀವನವನ್ನು ಬೆನ್ನಟ್ಟಿ, ಅದನ್ನು ಸಂಪೂರ್ಣವಾಗಿ ಹಾಳುಮಾಡು ವುದರಲ್ಲಿತ್ತು. ಆದರೆ ಪುಣೆಗೆ ಹೊರಟಾಗ ಮೋಹಿನಿಗೆನಿಸಿತ್ತು: ಈ ಸಂಶಯ ಪಿಶಾಚಿಯನ್ನು ತಪ್ಪಿಸಿ ಕೆಲಕಾಲವಾದರೂ ತಾಯಿಯ ಬಳಿಯಲ್ಲಿ ಸುಖವಾಗಿ ಇರಬಹುದು, ಎಂದು. ಕ್ಷಣಕ್ಷಣಕ್ಕೂ ಪುಣೆ ಸಮೀಪಿಸುತ್ತಿತ್ತು. ಅದರಂತೆ ಮೋಹಿನಿಯ ಆತುರವೂ ಉಕ್ಕಿಬರುತ್ತಿತ್ತು. ಒಂದೂವರೆ ವರ್ಷ ತಾಯಿಯನ್ನು ಕಾಣದೆ ನೂರು ಬಗೆಯಲ್ಲಿ ಬಳಲಿದ ಜೀವ ಕಾತರಪಡುತ್ತಿತ್ತು. ತಾಯಿಗೆ ತನ್ನ ಸಮಾಚಾರ ಎಷ್ಟರ ಮಟ್ಟಿಗೆ ತಿಳಿದಿದೆಯೊ? ಅಜ್ಜ ಏನನ್ನುವರೊ? ಎಂಬ ಹಲವಾರು ಯೋಚನೆಗಳು ಮನಸ್ಸಿನೆದುರು ನಿಲ್ಲುತ್ತಿದ್ದವು.

ಮೋಹಿನಿ ಮನೆಯನ್ನು ತಲಪಿದಾಗ ತಾಯಿ ಅದೇ ಚಹವನ್ನು ಮುಗಿ ಯಿಸಿ ಕಪ್ಪು ಬಸಿಗಳನ್ನು ತೊಳೆಯುವುದರಲ್ಲಿದ್ದಳು. ಅಜ್ಜ ಅದೇ ಹೊರಗೆ ಹೋಗಿದ್ದರು. ತೀರ ಅನಿರೀಕ್ಷಿತವಾಗಿ ಬಂದ ಮೋಹಿನಿಯನ್ನು ನೋಡಿ ತಾಯಿ ತನ್ನ ಕಣ್ಣುಗಳನ್ನೇ ನಂಬದಂತಾಗಿದ್ದಳು. ಕೈಯಲ್ಲಿಯ ಕೆಲಸವನ್ನು ಅಲ್ಲಿಯೆ ಬಿಟ್ಟು ಸರ್ರನೆ ನಡುವಿನ ಮನೆಗೆ ಬಂದು ಮೋಹಿನಿಯನ್ನು ತಬ್ಬಿಕೊಂಡಳು.

"ಏನೇ, ಮೋಹಿನಿ? ಅಕಸ್ಮಾತ್ತಾಗಿ ಬಂದುಬಿಟ್ಟೆಯಲ್ಲೆ? ಒಂದು ಕಾಗದವನ್ನಾದರೂ ಬರೆಯಬಾರದೇ ಬರುತ್ತೇನೆಂದು?"

ತಾಯಿಯ ತೋಳಸೆರೆಯಲ್ಲಿ ಸಿಕ್ಕ ಮೋಹಿನಿ ಪ್ರಪಂಚವನ್ನು ಮರೆತಿ ದ್ದಳು. ಅವಳ ಹೃದಯದಲ್ಲಿಯ ಭಾವ ಶಬ್ದಕ್ಕೆ ಸಿಲುಕುವಂತಿರಲಿಲ್ಲ.

"ಯಾವಾಗ ಹೊರಟದ್ದಿ?....ಊಟ ಮಾಡಿದ್ದಿಯೋ ಇಲ್ಲವೊ?"

"ಊಟ ಮಾಡಿಯೇ ಹೊರಟದ್ದೆ!"

"ಎಷ್ಟು ಸೊರಗಿ ಹೋಗಿದ್ದೀಯಲ್ಲೆ, ಮೋಹಿನಿ! ಮೈಯಲ್ಲಿ ಸ್ವಸ್ಥ ವಿಲ್ಲವೆ?"

ಮೋಹಿನಿ ಸುಮ್ಮನಾದಳು. ಅವಳಿಗೆ ದುಃಖ ತಡೆಯದಾಗಿತ್ತು. ತಾಯಿ ಮಕ್ಕಳ ಕರುಳು—ಇಬ್ಬರಲ್ಲಿಯೂ ಕಣ್ಣೀರನ್ನು ಚಿಮ್ಮಿಸಿತ್ತು. ಅವರಿಬ್ಬರ ಸಮಾಗಮದಲ್ಲಿ ನೋವೂ ಇತ್ತು, ನಲಿವೂ ಇತ್ತು. ಕೆಲನಿಮಿಷಗಳ ಮೇಲೆ ಮೋಹಿನಿ ಕೈಕಾಲು ಮೋರೆ ತೊಳೆಯಹೋದಳು. ಚಹ ಮಾಡುತ್ತಿರುವಾಗಲೆ ತಾಯಿ ಕೇಳಿದಳು:

"ನಿನ್ನ ಪರೀಕ್ಷೆಯಾಯಿತೆ?"

"ಇಲ್ಲ—ಇನ್ನು ಎರಡು ವಾರ."

"ಹಾಗಾದರೆ ನೀನು ಪರೀಕ್ಷೆಗಾಗಿ ಹೋಗಬೇಕೆ, ಮತ್ತೆ?"

"ಹೌದು...."

"ಪರೀಕ್ಷೆ ಮುಗಿಸಿಕೊಂಡೇ ಬಂದಿದ್ದರೆ ಒಳ್ಳೆಯದಾಗಿರುತ್ತಿತ್ತಲ್ಲ? ಒಂದೆರಡು ತಿಂಗಳು ಇರುತ್ತಿದ್ದಿ...."

"ಮುಗಿದಮೇಲೆ ಮತ್ತೆ ನೋಡೋಣವಂತೆ. ಈಗಲೇ ಯಾಕೆ?"

"ನಿನ್ನ ಜೊತೆಯಲ್ಲಿ ಯಾರೂ ಬರಲಿಲ್ಲವೆ?"

"ಯಾರು ಯಾತಕ್ಕೆ ಬರಬೇಕು? ನಾಲ್ಕು ಗಂಟೆ ದಾರಿ!"

"ನಿನ್ನ ಯಜಮಾನರು ಬರಬಹುದಿತ್ತಲ್ಲ? ಅವರೂ ಒಂದೆರಡು ದಿನ ಇದ್ದು ಹೋಗುತ್ತಿದ್ದರು" ಎಂದು ಅನುಮಾನಿಸುತ್ತಲೆ ತಾಯಿ ಕೇಳಿದಳು.

"ಅವರಿಗೂ ಪರೀಕ್ಷೆ—ಆಫೀಸಿನದು."

ಮೋಹಿನಿ ಸಾವಧಾನವಾಗಿ ಉತ್ತರ ಕೊಡುತ್ತಿದ್ದಳು. ಆನಂದ ಬಾರದ್ದಕ್ಕೆ ಏನೋ ಒಂದು ಕಾರಣ ಹೇಳಿದಳು. ಅದು ನಿಜವೂ ಹೌದು. ಆದರೆ ಅದೊಂದೇ ಕಾರಣವಾಗಿದ್ದರೆ ಮೋಹಿನಿ ಆ ಮಾತನ್ನು ಉಲ್ಲಾಸದಲ್ಲಿ ಹೇಳಬಹುದಾಗಿತ್ತು. ಅವಳ ಮುಖದಲ್ಲಿ ಉಲ್ಲಾಸವಿರಲಿಲ್ಲವೆಂಬುದು ಅವಳ ತಾಯಿಯ ಹೃದಯವನ್ನು ಕೊರೆಯುತ್ತಿತ್ತು.

"ಮದುವೆಯಾದಮೇಲೆ ಒಂದೇ ಒಂದು ಸಲ ಬಂದು ಹೋದೆ. ಆಮೇಲೆ ಒಂದು ಕಾಗದ ಕೂಡ ಇಲ್ಲ. ಹೀಗೆ ಯಾಕೆ ಮಾಡಿದೆ, ಮೋಹಿನಿ? ಕಾಗದವನ್ನೇಕೆ ಬರೆಯಲಿಲ್ಲ?"

" ಏನೆಂದು ಬರೆಯುವುದು ? "

" ಎಲ್ಲವೂ ಅಲ್ಲಿ ಸರಿಯಾಗಿ ನಡೆದದ್ದಾದರೂ ನನಗೆ ತಿಳಿಯಬೇಡವೆ ? "

" ತಿಳಿಯಬೇಕೇನೊ ಸರಿ, ಆದರೆ...."

ಮೋಹಿನಿ ತಡೆದಳು. ಆನಂದ ಪತ್ರ ಬರೆಯಕೂಡದೆಂದು ವಿಧಿಸಿದ್ದನ್ನು ಹೇಳುವುದು ಹೇಗೆ ಎಂದು ಯೋಚಿಸುತ್ತಿರುವಾಗಲೆ ತಾಯಿ ಕೇಳಿದಳು :

" ನಿನ್ನ ಗಂಡ ಪತ್ರ ಬರೆಯಬೇಡವೆಂದು ಹೇಳಿದ್ದರೆ ? "

" ಹೌದು...."

" ಯಾಕಂತೆ ? "

" ಹೀಗೆಯೆ....ವಿಚಿತ್ರ ಸ್ವಭಾವ...."

" ನನ್ನ ಕಿವಿಗೂ ಬೇಕಾದಷ್ಟು ಸುದ್ದಿ ಬಂದಿದೆ, ಮೋಹಿನಿ....ನಿನ್ನಿಂದ ಕಾಗದ ಬರದಿದ್ದರೆ ನಾನೇನು ಇಲ್ಲಿ ಸುಮ್ಮನೇ ಇದೀನೆಂದುಕೊಂಡಿದ್ದೀಯಾ ? ಎಷ್ಟೋ ಜನರ ಕಡೆಯಿಂದ ವಿಚಾರಿಸಿ ತಿಳಿದುಕೊಂಡಿದ್ದೇನೆ....ನಿನ್ನ ದುಃಖ ನನಗೆ ತಿಳಿದಿದೆ, ಮೋಹಿನಿ...."

ಇಬ್ಬರ ಹೃದಯಗಳೂ ಕಳವಳಪಡುತ್ತಿದ್ದವು. ಮೋಹಿನಿ ತಾಯಿಯ ತೊಡೆಯಲ್ಲಿ ಮುಖವನ್ನಿಟ್ಟು ಅಳುತ್ತಿದ್ದಳು. ಕೂದಲುಗಳನ್ನು ನೇವರಿಸುತ್ತ ತಾಯಿ ಕೇಳಿದಳು :

" ಈಗ ನಿನಗೆ ಹೋಗು ಎಂದು ಅವರೇ ಹೇಳಿದರೆ ? "

" ಹೌದು...."

" ಯಾಕೆ ? "

" ಮನೆಯಲ್ಲಿ ಓದಿಗೆ ತೊಂದರೆಯಾಗುತ್ತಿದೆಯಂತೆ. ಅವರು ದಾದರಿ ನಲ್ಲಿಯೆ ಇರುತ್ತಾರೆ. ಉಳಿದವರಿಗೆ ನನ್ನಿಂದ ತೊಂದರೆಯಾಗುತ್ತಿದೆಯಂತೆ ! "

" ನಿನ್ನಿಂದ ಏನು ತೊಂದರೆ ಅವರಿಗೆ ? "

" ಏನೆಂದರೆ ? ನಾನು ಕಾಲೇಜಿಗೆ ಹೋಗುವುದೇ ನಮ್ಮ ನಾದಿನಿಗೆ ಬೇಡವಾಗಿದೆ. ಅವಳ ಕೈಯಲ್ಲಿ ನಾನು ಹಣ್ಣಾದರೆ ಅವಳಿಗೆ ಸಮಾಧಾನ. ಎಲ್ಲರೂ ಸೇರಿ ನನ್ನ ಜೀವ ಹಿಂಡುತ್ತಾರೆ...."

" ನಿನ್ನ ಗಂಡನಿಗೆ ಇದೆಲ್ಲ ಗೊತ್ತಿಲ್ಲವೆ ? "

" ಎಲ್ಲ ಗೊತ್ತಿದೆ. ಆದರೆ ಇವರೆಲ್ಲರೇನು ಸಾಮಾನ್ಯರೆ ? ಯಾವಾಗಲೂ

ಏನಾದರೊಂದು ಪ್ರದರ್ಶನವನ್ನು ಹೂಡಿಯೆ ಇರುತ್ತಾರೆ. ಮನೆಗೆ ನಾನು ಅರ್ಧ ಗಂಟೆ ತಡ ಮಾಡಿ ಬಂದರೆ ಮುಗಿಯಿತು. ಅದಕ್ಕೊಂದು ಕಥೆ ಕಟ್ಟಿಕೊಂಡೇ ಇರುತ್ತಾರೆ. ಮುಖ್ಯ, ಇಲ್ಲಿಯ ಸಂಶಯ ಅಲ್ಲಿ ಇನ್ನೂ ದೊಡ್ಡದಾಗಿ ನನ್ನಲ್ಲಿ ಯಾರದೂ ವಿಶ್ವಾಸವಿಲ್ಲವಾಗಿದೆ...."

"ಹಾಗಾದರೆ ಆನಂದರಾಯರು ನಿನ್ನ ಕೂಡ ಸರಿಯಾಗಿ ನಡೆದು ಕೊಳ್ಳುವುದಿಲ್ಲವೆ ?"

"ಅವರ ಮನಸ್ಸನ್ನೆಲ್ಲ ಉಳಿದವರು ಕದಡಿಸಿಬಿಟ್ಟಿದ್ದಾರೆ. ಮೊದ ಮೊದಲು ಬೇಕಾದಷ್ಟು ಯತ್ನಮಾಡಿದೆ, ಸಾಧ್ಯವಾಗಲಿಲ್ಲ. ಕೊನೆಗೆ, ನಾನೂ ಇವರಿಗೆ ಯಾಕೆ ಇಷ್ಟು ಮಣಿದು ಹಣ್ಣಾಗಬೇಕು, ಎಂದು ಇದುರಾಗಿ ನಿಂತೆ...."

ಮೋಹಿನಿಯನ್ನು ಅವಳ ನಾದಿನಿ ಕಾಡುತ್ತಿದ್ದಳೆಂದೂ, ಒಟ್ಟಿನಲ್ಲಿ ಆಕೆಗೆ ಗಂಡನ ಮನೆಯಲ್ಲಿ ಸುಖವಿಲ್ಲದಾಗಿದೆಯೆಂದೂ ಮಾತ್ರ ತಿಳಿದಿದ್ದ ತಾಯಿ ಈ ಹೊಸ ಸಮಾಚಾರವನ್ನು ಕೇಳಿ ಅತಿಯಾಗಿ ದುಃಖಪಟ್ಟಳು. ತಾಯಿ–ಮಗಳು ಎಷ್ಟೋ ಹೊತ್ತು ಮಾತನಾಡುತ್ತಲೇ ಇದ್ದರು. ಕೊನೆಗೆ ತಾಯಿ ಕೇಳಿದಳು :

"ಈಗ ಅವರು ಅನ್ನುವುದೇನು ?"

"ಅವರು ಏನೂ ಅನ್ನುವುದಿಲ್ಲ."

"ಹಾಗಾದರೆ ಮುಂದೆ ನಡೆಯುವುದು ಹೇಗಂತೆ ?"

"ನಡೆಯುವುದು ಅವರಿಗೆ ಬೇಕಾದಂತೆಯೂ ಇಲ್ಲ. ಅಷ್ಟು ವ್ಯವಸ್ಥೆ ಯನ್ನು ಎಲ್ಲರೂ ಸೇರಿ ಮಾಡಿದ ಹಾಗೇ ಇದೆ."

"ಏನು ವ್ಯವಸ್ಥೆ ?"

"ನಮ್ಮ ಭಾವ 'ಇವರಿಗೆ' ಇನ್ನೊಂದು ಮದುವೆ ಮಾಡುತ್ತೇನೆಂದೂ ಓಡಾಡಿದ. ಆದರೆ...."

"ಇನ್ನೊಂದು ಮದುವೆಯೆಂದರೆ ಅಷ್ಟು ಸುಲಭವಾಗಿ ಕಂಡಿದೆಯೇ ಇವರಿಗೆ ?"

ಎಂದು ಸಂತಾಪದಿಂದ ಕೇಳಿದಳು. ಆದರೂ ಹೆಣ್ಣುಹೃದಯ ಬೆದರಿತು. ಮಗಳನ್ನು ಕೇಳಿತು :

"ಇನ್ನೊಂದು ಮದುವೆಗೆ ನಿನ್ನ ಗಂಡನ ಒಪ್ಪಿಗೆಯಿದೆಯೆ ?"

"ಅವರನ್ನು ನಾನು ಯಾತಕ್ಕೆ ಕೇಳಲಿ ? ಮನಸ್ಸು ಸ್ಥಿರವಾದದ್ದಿದ್ದರೆ

ಕೇಳಿಯಾದರೂ ಉಪಯೋಗ. ಉಳಿದವರೆದುರಿಗೆ ಅವರಂತೆ ಕುಣಿದು, ನನ್ನ ಹತ್ತಿರ ಬರಬೇಕಾದಾಗ ಮೆತ್ತನೆ ಮಾತನಾಡುವವರಿಗೆ ಏನು ಕೇಳಿದರೇನು, ಬಿಟ್ಟರೇನು ?"

"ನಿನ್ನ ಜೊತೆಯಲ್ಲಿ ಅವರು ಸರಿಯಾಗಿ ಮಾತೂ ಆಡುವುದಿಲ್ಲವೆ ?"

"ನಾನೇ ಆಡುವುದಿಲ್ಲ."

ತಾಯಿಗೆ ಮಗಳ ವಿಷಯದಲ್ಲಿ ಅಭಿಮಾನ ಮಿಂಚಿಹೋಯಿತು. ಆದರೆ ಮಿಂಚಿನ ಹಿಂದೆ ತೂರಿಬರುವ ಕತ್ತಲೆಯಂತೆ ಈ ಅಭಿಮಾನದ ಕೊನೆ ನಿರಾಶೆ ದುಃಖಗಳಲ್ಲಿ ಎಂಬ ವಿಚಾರವೂ ಬಂದುಹೋಯಿತು.

"ನೀನು ಅಲ್ಲಿಂದ ಹೊರಡುವಾಗ ಏನು ಹೇಳಿದರು ?"

"ಏನೂ ಇಲ್ಲ. ಸಾಧ್ಯವಾದರೆ ಮುಂದಿನ ವಾರ ಇಲ್ಲಿಗೆ ಬಂದುಹೋಗುವೆ ಎಂದರು."

"ಇಲ್ಲಿ ಬರುವರೆ ?"

"ಬರಬಹುದು. ಆದರೆ ನಾನೇ ಬೇಡವೆಂದು ಹೇಳಿದೆ !"

"ಹಾಗೆ ಯಾಕೆ ಹೇಳಿದೆ, ಮೋಹಿನಿ ? ಇಲ್ಲಿ ಬಂದಾಗ ಅವರ ಮನಸ್ಸನ್ನು ತಿಳಿದುಕೊಂಡು, ಸಾಧ್ಯವಾದಷ್ಟು ನಮ್ಮ ಕಡೆಗೆ ಅವರನ್ನು ತಿರುಗಿಸಿಕೊಳ್ಳಲು ಅನುಕೂಲವಾಗುತ್ತಿತ್ತು."

"ನಿನಗೇನು ಹುಚ್ಚು, ಅಮ್ಮ ! ನಾನು ಬೇಕೆನಿಸಿದಾಗ ಬೇಕಾದಂಥ ನವಿ ಮಾತಾಡಿಯಾರು. ಇಲ್ಲಿಗೆ ಬಂದಾಗಲೂ ಅಷ್ಟೇ ಆಗಬಹುದು. ಅಂತೇ ಬೇಡ ಎಂದು ಹೇಳಿದೆ .."

ತಾಯಿಗೆ ಮೋಹಿನಿಯ ಮಾತಿನ ಅರ್ಥವಾಯಿತು. ತಾರುಣ್ಯದಲ್ಲಿ ಗಂಡನನ್ನು ಕಳೆದುಕೊಂಡು ದೇಹವನ್ನು ಸೊರಗಿಸಿದ ಆಕೆಗೆ ತನ್ನ ಹಳೆಯ ದುಃಖ ಒಂದೆಡೆಯಾದರೆ ಗಂಡನಿದ್ದೂ ಮೋಹಿನಿ ಸುಖವಿಲ್ಲದೆ ಸೊರಗಿಹೋಗುತ್ತಿರುವಳು ಎಂಬ ದುಃಖ ಇನ್ನೊಂದೆಡೆಯಾಗಿ ಕಣ್ಣಲ್ಲಿ ನೀರು ಚಿಮ್ಮಿತು.

"ನಿನ್ನನ್ನು ಒಂದು ದುಃಖದಿಂದ ಬಿಡಿಸಿ, ನೀನು ಸುಖವಾಗಿರಬೇಕು ಎಂದು ಮಾಡಿದೆನಲ್ಲ ಈ ಮದುವೆಯನ್ನು....ನೀನು ಸುಖವಾಗಿದ್ದುದನ್ನು ನೋಡುವುದೂ ನನ್ನ ಹಣೆಯಬರಹದಲ್ಲಿಲ್ಲ ಎಂದು ಕಾಣುತ್ತದೆ."

ಮಾತು ನಡೆದೇ ಇತ್ತು. ಸಾಯಂಕಾಲದ ಅಡಿಗೆ ನಡೆದಾಗ ಮೋಹಿನಿ

ತಾಯ ಹತ್ತಿರವೆ ಕುಳಿತು ಒಂದೂವರೆ ವರ್ಷದ ವರದಿಯನ್ನೇ ಒಪ್ಪಿಸುತ್ತಿದ್ದಳು. ನಡುನಡುವೆ ತಾಯಿ ತನ್ನ ಕಡೆಯ ಕಷ್ಟದ ಕತೆಯನ್ನು ತಿಳಿಸುತ್ತಿದ್ದಳು. ಮೋಹಿನಿ ಮದುವೆಯಾಗಿ ಹೋದಮೇಲೆ ತಂದೆಯ ಕಾರ್ಪಣ್ಯ ಬೆಳೆದಂತಿತ್ತು. ಮನೆಯಲ್ಲಿ ಆಗೀಗ ಕಿರುಕುಳ ನಡೆಯುತ್ತಿತ್ತು. ಇಬ್ಬರಿಗೂ ಇನ್ನೊಬ್ಬರಿಲ್ಲದೆ ಗತಿಯಿಲ್ಲದಾಗಿ ಬದುಕಿನ ಚಕ್ಕಡಿ ಹೇಗೋ ಸಾಗಿದಂತಿತ್ತು.

ಅಜ್ಜಯ್ಯ ಮನೆಗೆ ಬಂದು ಮೋಹಿನಿಯನ್ನು ನೋಡಿ ಸಂತೋಷಭರಿತನಾದ. ಹತ್ತಿರ ಕೂರಿಸಿಕೊಂಡು ಕ್ಷೇಮಸಮಾಚಾರವನ್ನು ಕೇಳಿದ. ವಯಸ್ಸಿನಿಂದ ಹಣ್ಣಾದ ತಾತನಿಗೆ ಯಾಕೆ ಮನಸ್ತಾಪವೆಂದು ಮೋಹಿನಿ ಅವನ ಪ್ರಶ್ನೆಗೆ ಸಮರ್ಪಕವಾದ ಉತ್ತರಗಳನ್ನೇ ಹೇಳುತ್ತಿದ್ದಳು. ಅವಳು ಹೇಳಿದ ಸುಳ್ಳು ಉತ್ತರಗಳು ಆಗಾಗ ಅವಳೆದುರು ಕನಸಿನ ಸಾಮ್ರಾಜ್ಯವನ್ನು ಹಬ್ಬಿಸುತ್ತಿದ್ದವು. ನಿಜವಾಗಿಯೂ ಹಾಗೆಯೇ ಇದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಎಂಬ ಯೋಚನೆ ಮೂಡಿದಾಗ ಮೋಹಿನಿ ಒಳಗಿನಿಂದಲೇ ಮುದುಡಿಕೊಳ್ಳುತ್ತಿದ್ದಳು. ಅಜ್ಜಯ್ಯ ಕೇಳುತ್ತಿದ್ದ :

" ಏನಮ್ಮಾ, ಮದುವೆಯಾದ ಕೂಡಲೆ ನಾವೆಲ್ಲ ಮರೆತೇ ಹೋದೆವೇನು ನಿನಗೆ? ಸುಖವಾಗಿದ್ದೇವೆಂದು ಒಂದು ಕಾಗದವನ್ನೂ ಬರೆಯಬಾರದೆ?"

" ಹೌದು, ಬರೆಯಬೇಕಾಗಿತ್ತು, ಅಜ್ಜಯ್ಯ. ಆದರೇನು, ಮುಂಜಾನೆಯಿಂದ ಸಂಜೆಯವರೆಗೆ ಕಾಲೇಜು, ಆಮೇಲೆ ಮನೆಯ ಕೆಲಸ. . "

" ಅಲ್ಲಿಯೂ ಕಾಲೇಜಿಗೆ ಹೋಗುತ್ತೀಯಾ? ಮನೆಯಲ್ಲಿ ಕೆಲಸ ಮಾಡಿ ಕಾಲೇಜಿಗೆ ಹೋಗುತ್ತೀಯಾ?....ಭಲೆ. ." ಎಂದು ಬೆನ್ನು ತಟ್ಟಿ,

" ನಾನೂ ಒಮ್ಮೆ ಮುಂಬಯಿಗೆ ಬರಬೇಕೆನ್ನುತ್ತಿದ್ದೆ. ಆದರೆ ಎಲ್ಲಿ! ಮೊದಲಿನ ಹಾಗೆ ಕೈಯಿಂದ ಆಗುವುದಿಲ್ಲ. ಮೇಲೆ, ಗಾಡಿಯಲ್ಲಿ ವಿಪರೀತ ಗದ್ದಲವಂತೆ...."

" ಹೌದು, ವಿಪರೀತ ಗದ್ದಲ.. " ಎಂದಳು ಮೋಹಿನಿ ನೀರಸವಾಗಿ.

" ಮತ್ತೇನಮ್ಮ....ನನಗಂತೂ ದಿವಸಗಳು ಆದವು....ಮರಿಮಗನನ್ನು ನೋಡಿಯೇ ಹೋಗಬೇಕೆಂದಿದ್ದೇನೆ....ಆಂ...." ಎಂದು ಅಜ್ಜಯ್ಯ ನಕ್ಕ.

ಮೋಹಿನಿಗೆ ತಡೆಯದಾಯಿತು. ಆಕೆ ನಾಚಿಕೆಯಿಂದ ಸುಮ್ಮನಾದಳೆಂದು ಅಜ್ಜಯ್ಯ ತಿಳಿದಿರಬೇಕು. ಆದರೆ ಮೋಹಿನಿಯ ಹೃದಯದಲ್ಲಿ ಅವಳ

ಬದುಕಿನ ನಿರಾಶೆ ಚೂರಿಯಾಗಿ ಇರಿಯುತ್ತಿತ್ತು. ಆದರೆ ಅಷ್ಟರಲ್ಲಿ ಅಜ್ಜಯ್ಯ ಮಾತು ಬದಲಾಯಿಸಿದ.

"ಹುಂ....ಅದು ಹೋಗಲಿ ಬಿಡು. ಮಕ್ಕಳೇನು ಆದಾವು. ಒಮ್ಮೆ ಸುರುವಾಗಿಬಿಟ್ಟಿತೆಂದರೆ....ಮುಖ್ಯ ಸುಖವಾಗಿದ್ದೀರಲ್ಲ....ಅಷ್ಟು ಸಾಕು...."

ಎಂದು ಹೇಳಿದಾಗ ಮೋಹಿನಿಗೆ ಸಂಕಟವಾಯಿತು. ಅವರ ಕನಸು ನನಸಾಗಿದ್ದರೆ ?—ಎಂಬ ವಿಚಾರ ಮತ್ತೆ ಮತ್ತೆ ಸುಳಿದುಹೋಯಿತು. ಅದರ ಉದ್ವೇಗವನ್ನು ತಾಳಲಾರದೆ ಮೋಹಿನಿ ಎದ್ದು ಹೊರಟಳು. ಅಜ್ಜಯ್ಯ ಹೇಳಿದ: "ನೋಡಮ್ಮ ಒಳಗೆ, ಕೈಕಾಲು ತೊಳೆದುಕೊಳ್ಳಲೇನು ಕೇಳು, ನಿನ್ನ ತಾಯಿಗೆ...."

ಮಧ್ಯರಾತ್ರಿಯಾದರೂ ತಾಯಿ-ಮಗಳು ಮಾತನಾಡುತ್ತಲೇ ಇದ್ದರು. "ಮಲಗಿಕೊಳ್ಳಿರಮ್ಮ ಇನ್ನು, ರಾತ್ರಿಯಾಗಿಹೋಯಿತು" ಎಂದು ಎರಡು ಮೂರುಸಾರೆ ಅಜ್ಜಯ್ಯನಿಂದ ಹೇಳಿಸಿಕೊಂಡೂ ಆಗಿತ್ತು. ಮುಂದೆಷ್ಟೋ ವೇಳೆ ಮೆಲುದನಿಯಲ್ಲಿ ತಾಯಿ ಮೋಹಿನಿಯಿಂದ ಎಷ್ಟೋ ಗುಪ್ತ ವಿಷಯಗಳನ್ನು ತಿಳಿದುಕೊಂಡಿದ್ದಳು. ಅವನ್ನೆಲ್ಲ ನೆನೆದ ಹಾಗೆ ಆಕೆಯೆದುರು ಒಂದೇ ಒಂದು ಪ್ರಶ್ನೆ ನಿಲ್ಲುತ್ತಿತ್ತು: 'ಹಾಗಾದರೆ ಮೋಹಿನಿಯ ಗತಿಯೇನು ? ಆಗಲೇ ಮೋಹಿನಿಯ ಮನಸ್ಸು ಅರ್ಧ ಎಚ್ಚರ ಅರ್ಧ ತೂಕಡಿಕೆಯಲ್ಲಿ ತೇಲಾಡುತ್ತಿತ್ತು. ತಾಯಿ ಹಾಸಿಗೆಯಲ್ಲಿ ಎದ್ದು ಕುಳಿತಳು. ಮೈಮೇಲೆ ಹೊದಿಕೆಯಿಲ್ಲದೆ ಉದ್ದವಾಗಿ ಮಾತೃಹೃದಯದ ವಿಶ್ವಾಸದಾಶ್ರಯದಲ್ಲಿ ಮಲಗಿ ಅದೇ ನಿದ್ರೆಹೋಗುತ್ತಿದ್ದ ಮೋಹಿನಿಯನ್ನು ನೋಡಿ ತಾಯಿಯ ಹೃದಯ ತುಂಬಿಬಂದಿತು. ಒಂದೆರಡು ನಿಮಿಷ ಹಾಗೆಯೇ ನೋಡುತ್ತ ಕುಳಿತಳು. ಹದಿನೆಂಟು ವರ್ಷಗಳ ಹಿಂದೆ ಮೋಹಿನಿಯ ತಂದೆಯಿದ್ದಾಗ ಒಂದು ರಾತ್ರಿ ತಮ್ಮಿಬ್ಬರ ಹತ್ತಿರವೇ ಮಲಗಿ ನಿದ್ರಿಸುತ್ತಿದ್ದ ಆ ಚಿಕ್ಕ ಮಗುವನ್ನು ನೋಡಿ ಮೋಹಿನಿಯ ತಂದೆ ಏಕಾಂತದಲ್ಲಿ ಹೇಳಿದ್ದರು: 'ಎಷ್ಟು ಶಾಂತವಾಗಿ ಮಗು ಮಲಗಿದೆ, ನೋಡಿದೆಯಾ ? ದೃಷ್ಟಿಯಾಗುವ ಹಾಗೆ ಇದೆ ಮುಖ ! ಈಕೆಯ ಮದುವೆಯ ಚಿಂತೆ ನನಗಿಲ್ಲ !' ಎಂದು. ತಾಯಿಗೆ ಅನಿಸಿತು: 'ಹೌದು, ಮದುವೆಯ ಚಿಂತೆಯಿಂದ ಸಾವು ಅವರನ್ನು ದೂರಮಾಡಿತು ! ಮೋಹಿನಿಗೆ ಮದುವೆಯೂ ಆಯಿತು ! ದೃಷ್ಟಿ ತಗಲುವ ಹಾಗೆಯೂ ಇದೆ ಮುಖ ! ಆದರೆ....' ಮುಂದೆ ಎದೆಯ ಸಂಕಟದ

ವಿಚಾರವನ್ನು ನಿಲ್ಲಿಸಿತು. ಮತ್ತೊಮ್ಮೆ ಮೋಹಿನಿಯನ್ನು ನೋಡಿದಳು, ನಿಜ ವಾಗಿಯೂ ಹಾಗೆ ಮೋಹಿನಿಯನ್ನು ನೋಡಿದರೆ ಆಕೆಗೆ ದೃಷ್ಟಿ ತಗಲೀತೆಂಬ ಭಯದಿಂದ ತಾಯಿ ಮುಖ ತಿರುವಿ ದೇವರನ್ನು ನೆನೆದಳು. ಹಣೆಯ ಮೇಲೆ ಬಂದಿದ್ದ ಒಂದೆರಡು ಕುರುಳುಗಳನ್ನು ನಯವಾಗಿ ನೇವರಿಸಿ, ಹಿಂದಕ್ಕೆ ಸರಿಸಿ, ಮೈಮೇಲೆ ಮೆತ್ತಗಾಗಿ ಹೊದಿಕೆಯೊಂದನ್ನು ಹೊಚ್ಚಿ ತಾಯಿ ದೀಪವನ್ನಾರಿಸಿ ದಳು. ಮೋಹಿನಿಗೆ ತೀರ ಹತ್ತಿರ ಬಂದು ಮಲಗಿ ಬೇಡಿಕೊಳ್ಳುತ್ತಿದ್ದಳು : ' ದೇವರೆ, ಈ ನನ್ನ ಕೂಸನ್ನು ಕಾಯುವ ಭಾರ ನಿನ್ನದು ! ನೀನಲ್ಲದೆ ನಮ್ಮಂಥ ನಿರ್ಭಾಗ್ಯರಿಗೆ ಯಾರು ಗತಿ ? ' ಎಂದು.

೪

ಮುಂಬಯಿಯಿಂದ ಹೊರಟಾಗಿನಿಂದಲೂ ಮೋಹಿನಿಯನ್ನು ಒಂದು ಯೋಚನೆ ಆಗೀಗ ಕಾಡುತ್ತಿತ್ತು. ಶನಿವಾರ ಬೆಳಗಿನಿಂದಂತೂ ಅದನ್ನು ಮನಸ್ಸಿನಿಂದ ದೂರವಾಗಿರಿಸುವುದೇ ಸಾಧ್ಯವಾಗುತ್ತಿದ್ದಿಲ್ಲ. ಆ ಯೋಚನೆ ಎಂದರೆ ವಸಂತನಿಗೆ ಸಾಂತಾಕ್ರೂಸ್ ನಿಲ್ದಾಣದಲ್ಲಿ ತಾನು ಕಾಯಹೇಳಿದ್ದು. ಬೆಳಗಿನ ಜಾವದಲ್ಲಿ ಓದುತ್ತ ಕುಳಿತಾಗ್ಗೆ, ಹತ್ತು ಗಂಟೆಯ ಸುಮಾರಿಗೆ ಪೇಟೆಯಲ್ಲಿ ಹೋಗಿ ಬಂದಾಗ್ಗೆ, ದಾರಿಯಲ್ಲಿ ಸಿಕ್ಕ ಒಬ್ಬ ಹಳೆಯ ಗೆಳತಿಯ ಜೊತೆಯಲ್ಲಿ ಮಾತನಾಡುತ್ತಿರುವಾಗ್ಗೆ, ಮನೆಗೆ ಬಂದನಂತರ ತಾಯ ಬಳಿಯಲ್ಲಿ ಕುಳಿತು ಊಟ ಮಾಡುತ್ತಿರುವಾಗ್ಗೆ—ಹೃದಯ ಒಂದೇ ಒಂದು ತಂತಿಯನ್ನೇ ಮೀಟುತ್ತಿತ್ತು, ಒಂದೇ ಪ್ರಶ್ನೆಯನ್ನು ಕೇಳುತ್ತಿತ್ತು : 'ವಸಂತ ಇಂದು ಮಧ್ಯಾಹ್ನ ಎಷ್ಟು ನಿರಾಶೆಯಿಂದ ದಾರಿ ಕಾಯ್ದು ಹೋಗಬಹುದು' ಎಂದು. ತಾನು ಊರು ಬಿಟ್ಟು ಹೊರಡುವುದನ್ನು ಅಕಸ್ಮಾತ್ತಾಗಿಯೆ ಬುಧವಾರ ಸಾಯಂಕಾಲ ತಿಳಿಸಿದರು. ಒಂದು ದಿವಸವಾದರೂ ಮೊದಲಿಗೆ ತಿಳಿಸಿದ್ದರೆ ವಸಂತನಿಗೆ ತಾನು ಮಾತನ್ನಾದರೂ ಕೊಡುತ್ತಿದ್ದಿಲ್ಲ. ತಾನು ಹೊರಡುವುದು ನಿಶ್ಚಿತವಾಗಿ ತನಗೆ ತಿಳಿದಮೇಲೆ ಉಳಿದ ಕೆಲವು ಗಂಟೆಗಳಲ್ಲಿ ವಸಂತನಿಗೆ ತಿಳಿಸುವುದೂ ಸಾಧ್ಯವಿರಲಿಲ್ಲ. ಹೀಗೆ ನಿರುಪಾಯಳಾಗಿಯೆ ಹೊರಟುಬರಬೇಕಾಗಿತ್ತು. ಬಂದನಂತರವಾದರೂ ಎಷ್ಟೋ ರೀತಿ ಯೋಚಿಸಿ ಹೇಗಾದರೂ ತಿಳಿಸಬಹುದೇ ಎಂದು ಕೇಳಿಕೊಂಡಿದ್ದಳು. ಅವನ ಮನೆಯ ವಿಳಾಸ ಗೊತ್ತಿತ್ತು. ಆದರೆ ಕಾಗದ ಬರೆಯಲು ಮನಸ್ಸು ಹಿಂಜರಿಯದಿದ್ದರೂ ಹೆದರಿಕೊಳ್ಳುತ್ತಿತ್ತು—ಪತ್ರ ಮತ್ತಾರ ಕೈಯಲ್ಲಾದರೂ ಅಕಸ್ಮಾತ್ತಾಗಿ ಬಿದ್ದರೆ? ಎಂದು. 'ಅವರ ಮನೆಯಲ್ಲಿ ಇನ್ನಾರೂ ಇಲ್ಲ. ಯಾರ ಕೈಗೆ ಬಿದ್ದೀತು? ಬರೆದೇಬಿಡುವೆ' ಎಂದು ಶುಕ್ರವಾರ ಬೆಳಗ್ಗೆ ಬರೆಯಲುದ್ಯುಕ್ತಳಾದವಳು ಮತ್ತೆ ವಿಚಾರವನ್ನು ಬದಲಾಯಿಸಿದಳು. ಬರೆದಾವರೂ ಏನು ಪ್ರಯೋಜನ? ಬಲು ಬೇಗವೆಂದರೂ ಶನಿವಾರ ಸಾಯಂಕಾಲ ವಸಂತ ಮನೆಗೆ ಬಂದಮೇಲೆ ಆತನಿಗೆ ಪತ್ರ ಸಿಗುವುದು! ಆಫೀಸಿಗೆ ಬರೆಯಬಹುದಾದರೆ ಸರಿ. ಆಫೀಸಿನ ವಿಳಾಸವಂತೂ ತನಗೆ ಗೊತ್ತಿಲ್ಲ. ಹೀಗೆ, ಹಲವಾರು ಬಗೆಯಲ್ಲಿ ಯೋಚಿಸಿ, ಕೊನೆಗೆ ವಸಂತನ ನಿರಾಶೆಯನ್ನು ತಪ್ಪಿಸುವುದು ಸಾಧ್ಯವಿಲ್ಲವೆಂದು ಸುಮ್ಮನಾಗಿದ್ದಳು.

ಊಟವಾದಮೇಲೆ ಮೋಹಿನಿ ಪಡಸಾಲೆಯಲ್ಲಿ ಯಾವುದೋ ಒಂದು ಪತ್ತ್ಯಪುಸ್ತಕವನ್ನು ಓದುತ್ತ ಒರಗಿದ್ದಳು. ಓದು ಓದುತ್ತಿರುವಾಗಲೇ ನಿದ್ರೆಂಬ ತಂದ್ರಿ ಕಣ್ಣಿಗೆ ಸೋಂಕಿ ಹೋಗುತ್ತಿತ್ತು. ಹೊರಗಡೆ ಬಿಸಿಲು ನಿರ್ದಯವಾಗಿ ಉರಿಯುತ್ತಿತ್ತು. ಜೊಂಪಿನ ಆವೇಗ ಬಲವತ್ತರವಾಗುತ್ತಿತ್ತು. ನಡುನಡುವೆ ಪುಸ್ತಕಗಳಲ್ಲಿಯ ಅಕ್ಷರಗಳು ಮಸುಕುಮಸುಕಾಗಿ, ಅಕ್ಷರಗಳ ರಾಶಿಯ ಮಧ್ಯ ದಲ್ಲಿ ವಸಂತ ಕಾಣುತ್ತಿದ್ದ. ಸುತ್ತಲಿನ ಗೋಡೆಗಳು ಮಾಯವಾಗಿ, ಮನೆ ಸಾಂತಾಕ್ರೂಸ್ ಸ್ಟೇಶನ್ನಿನಂತೆ ಕಾಣುತ್ತಿತ್ತು. ಗಡಿಯಾರದ ಹತ್ತಿರ ವಸಂತ ಅತ್ತಿಂದಿತ್ತ ಹೆಜ್ಜೆಹಾಕುತ್ತಿದ್ದ. ಕ್ಷಣಕ್ಷಣಕೂ ಕಣ್ಣೆವೆಗಳು ಭಾರವಾಗು ತ್ತಿದ್ದಂತಿತ್ತು. ಕೊನೆಗೆ, ಮೋಹಿನಿಯ ಕೈಯಲ್ಲಿಯ ಪುಸ್ತಕ ಕಳಚಿ ಅವಳ ಎದೆಯ ಮೇಲೆ ಬಿದ್ದಿತು. ಕಣ್ಣೆವೆ ಅಲುಗಾಡಲಿಲ್ಲ.

ನಿದ್ರೆ-ಎಚ್ಚರಗಳ ನಡುವೆ ಉಯ್ಯಾಲೆಯಾಡುತ್ತಿದ್ದ ಮನಸ್ಸು ಕನಸಿನ ಸಾಮ್ರಾಜ್ಯವನ್ನು ಸೇರಿತ್ತು. ಮುಚ್ಚಿದ ಅವಳ ಕಣ್ಣುಗಳೆದುರು ವಸಂತಮಾಸದ ವನಶೋಭೆಯಂತೆ ಹಬ್ಬಿತ್ತು, ಮಾಯಾ ಪ್ರಪಂಚ; ಇಲ್ಲಿ ನಿದ್ರೆ ಹೋದ ಮೋಹಿನಿ ಅಲ್ಲಿ ಎಚ್ಚತ್ತಿದ್ದಳು. ಉಲ್ಲಾಸದಿಂದ ಕುಣಿಯುತ್ತಿದ್ದಳು. ಸೊಗಸಿನ ಕನಸಿನಂತೆ ವಿಸ್ತಾರವಾಗಿ ಹಬ್ಬಿತ್ತು ಅವಳ ಕಣ್ಣೆದುರು ಸೊಗಸಾದ ಜುಹುವಿನ ಸಮುದ್ರ ಕರಾವಳಿ!

ಆದರೆ ಅಲ್ಲಿ ವಸಂತನಿರಲಿಲ್ಲ!

ಸೂರ್ಯ ಮುಳುಗುತ್ತಿದ್ದ. ಅದೇ ನೀರು ಹಾಯ್ದು ಹೋದ ಮಳಲು ಹೊನ್ನ ಬಣ್ಣದ ಕನ್ನಡಿಯಾಗಿತ್ತು. ನೀಲಾಕಾಶ ಶಾಂತವಾಗಿ ತೂಗಾಡುತ್ತಿತ್ತು. ಸುಳಿಗಾಳಿಯ ಮೇಲೆ ತೇಲಿಬರುತ್ತಿದ್ದ ಹೊನ್ನ ಕಿರಣಗಳು ಮಾಲೆ ಮಾಲೆ ಯಾಗಿ ದೂರದವರೆಗೂ ನಿಂತ ತೆಂಗಿನ ಗಿಡಗಳ ಗರಿಗಳಲ್ಲಿ ಸಿಲುಕಿ ಅವುಗಳ ಹಿಂದಿನ ನೀಲಗಗನದಲ್ಲಿ ಲೀನವಾಗುತ್ತಿದ್ದವು. ಮೋಹಿನಿ ಅತ್ತಿತ್ತ ನೋಡುತ್ತ ಮುಂದಕ್ಕೆ ಸಾಗಿದ್ದಳು. ಹೃದಯದಲ್ಲಿ ಯಾವುದೊ ಒಂದು ಭಾವ ಉನ್ಮತ್ತವಾಗಿ ಉಕ್ಕೇರಿ ಬರುತ್ತಿತ್ತು—ಎದುರಿನ ನೀಲಸಾಗರದ ಅಲೆಗಳ ಸೊಗಸಿನಂತೆ! ವಸಂತನನ್ನು ಇದಿರುನೋಡುತ್ತಿದ್ದ ಹೃದಯ ಸುತ್ತಲಿನ ಸಂಧ್ಯಾ ಸಮಯದ ಸಿರಿಯಲ್ಲಿ ಎಲ್ಲೆಲ್ಲಿಯೂ ವಸಂತನನ್ನು ಕಾಣುತ್ತಿತ್ತು. ಸೂರ್ಯ ಮುಳುಗಿದ. ಮೋಹಿನಿಯ ಹೃದಯದಲ್ಲಿಯ ಕಾತರತೆ ಹೆಚ್ಚುತ್ತಿತ್ತು.

'ವಸಂತಾ....' ಎಂದಳು.

ದನಿಯೇರಲಿಲ್ಲ. ವಸಂತ ಬರಲಿಲ್ಲ. ಪಶ್ಚಿಮದ ಹೊಂಬೆಳಕು ಮಾಯ ವಾಗುತ್ತಿದ್ದ ಹಾಗೆ ಪೂರ್ವದಲ್ಲಿ ತಿಂಗಳಿನ ಬೆಳಕು ತಾಡಮಾಲಿಕೆಯೊಳಗಿನಿಂದ ಸೂಸಿಬರುತ್ತಿತ್ತು. ನೀಲಗಗನ ನೀಲತರವಾಗಹತ್ತಿತ್ತು. ಸುತ್ತಲೂ ನೋಡಿದಳು, ಯಾವ ಕಡೆಯಿಂದಲೂ ಬರಲಿಲ್ಲ, ವಸಂತ. ಹೃದಯ ಮೊರೆಯಿಡುತ್ತಿತ್ತು : 'ವಸಂತಾ....ವಸಂತಾ....' ಎಂದು.

ಸುಳಿಗಾಳಿ ಕಿವಿಯಲ್ಲಿ ಗೀತ ಹೇಳುತ್ತಿತ್ತು. ಮೃದುವಾಗಿ ಮಾತನಾಡು ತ್ತಿತ್ತು ಕಾಂತನಂತೆ. ಸೆರಗಿನೊಡನೆ, ಕುರುಳಿನೊಳನೆ, ಕಪೋಲಗಳೊಡನೆ ಸರಸವಾಡುತ್ತಿತ್ತು ಪ್ರಿಯನಂತೆ. ದೂರಿನಿಂದ ಎಲ್ಲಿಂದಲೋ ಗಂಧರ್ವಗಾನದ ಇಂಚರ ತೇಲಿಬರುತ್ತಿತ್ತು. ಮೋಹಿನಿಯ ಹೃದಯದ ಹಸಿವು ಹಾಡಾಗಿ ಹರಿದು ಬರುವಂತಿತ್ತು. ವಿರಹದ ವ್ಯಥೆ ಶಬ್ದವಾಗಿ, ಗೀತವಾಗಿ ಮತ್ತೆ ಭಾವದುನ್ಮಾದ ವಾಗಿ ತೇಲಿಬಂದು ಹೃದಯ ಸೇರಿ ಮೋಹಿನಿಯನ್ನು ಗಾಸಿಮಾಡುತ್ತಿತ್ತು. ಗೀತ ನಡೆದೇ ಇತ್ತು. ಚಂದ್ರ ಮೇಲಕ್ಕೇರಿದ್ದ. ತೆಂಗಿನ ತಳಿರುಗಳು ಬೆಳ್ಳಿಯಾಗಿ ತೂಗಾಡುತ್ತಿದ್ದವು.

ಮೋಹಿನಿಯ ಹೃದಯ ಮತ್ತೆ ಕರೆಯಿತು : 'ವಸಂತಾ....ವಸಂತಾ' ಎಂದು. ಬೆಳುದಿಂಗಳು ಪ್ರಶಾಂತವಾಗಿ ಹಬ್ಬಿದ ಸಾಗರವನ್ನು ಮುತ್ತುತ್ತಿತ್ತು —ಹೃದಯವನ್ನು ಅನುರಾಗ ಮುತ್ತಿದಂತೆ. ಸಾಗರ ನಯವಾಗಿ ಚಂದ್ರಿಕೆ ಯನ್ನು ತಬ್ಬಿಕೊಳ್ಳುತ್ತಿತ್ತು ; ಸುತ್ತಲಿನ ಸೊಗಸು ರತಿಯಾಗಿ, ರಮಿಸಲೆಳಸಿ ರಮಣನನ್ನು ಕರೆಯುವಂತಿತ್ತು—ಮೋಹಿನಿಯ ಹೃದಯ ವಸಂತನನ್ನು ಕರೆಯುತ್ತಿದ್ದಂತೆ.

'ವಸಂತಾ....'

ಯಾರೋ ಭುಜ ತಬ್ಬಿದಂತಾಯಿತು. ಚಂಗನೆ ತಿರುಗಿ ಮೋಹಿನಿ ನೋಡಿದಳು. ಕಣ್ಣು ಕುಕ್ಕಿಸುವ ಸೌಂದರ್ಯ ಭಂಗಿಯಲ್ಲಿ ನಿಂತಿದ್ದ— ವಸಂತ!

'ಎಲ್ಲಿದ್ದೆ ವಸಂತಾ, ಇಷ್ಟು ಹೊತ್ತು ?'

'ಇಲ್ಲಿಯೇ ಇದ್ದೆನಲ್ಲ—ನಿನ್ನ ಬೆನ್ನ ಹಿಂದೆ!'

'ನಾನು ನಿನಗಾಗಿ ಮುಂದೆ ಮುಂದೆ ಹೊರಟೆ!'

'ನಾನು ನಿನಗಾಗಿ ನಿನ್ನ ಹಿಂದೆ ಹಿಂದೆಯೇ ಬಂದೆ!'

'ಎಷ್ಟು ಬಾರಿ ನಿನ್ನನ್ನು ನಾನು ಕರೆದೆನಲ್ಲ?'

'ನೀನು ಕರೆದೆ; ನಾನೂ ಕರೆದೆ. ನಿನ್ನ ಕರೆಯಲ್ಲಿ ನನ್ನ ಕರೆ ನಿನಗೆ ಕೇಳಿಸಲಿಲ್ಲ!'

ದೂರದಿಂದ ಗೀತ ಉನ್ಮಾದಕಾರಿಯಾಗಿ ತೂರಿಬರುತ್ತಿತ್ತು. ಹೃದಯ ದರಸಿಯನ್ನು ಗೆದ್ದ ಗೆಲವಿನ ನಗೆಮೊಗದ ಭಾವ ಕುಣಿದುಬಂದಂತೆ ಬರುತ್ತಿತ್ತು. ಮೋಹಿನಿ ವಸಂತನ ತೀರ ಹತ್ತಿರಕ್ಕೆ ಬಂದು ಕೇಳಿದಳು :

'ಎಷ್ಟು ಕಾಯಲಿ, ವಸಂತಾ....ನಾನೆಷ್ಟು ಕಾಯಬೇಕು, ನಿನಗಾಗಿ?'

'ಕೊನೆಗೆ ಬಂದೆನಲ್ಲ!'

ವಸಂತ ಮೋಹಿನಿಯನ್ನು ತನ್ನ ತೋಳಸೆರೆಯಲ್ಲಿ ಬಂಧಿಸಿದ. ಗದ್ದ ಹಿಡಿದು ಅವಳ ಮುಖವನ್ನು ಮೇಲಕ್ಕೆತ್ತಿದ. ಬೆಳುದಿಂಗಳು ಅವಳ ಮುಖದ ಮೇಲೆ ಲಾಸ್ಯವಾಡುತ್ತಿತ್ತು. ಅರೆದೆರೆದ ಅವಳ ಕಣ್ಣುಗಳಲ್ಲಿ ಆದಿಸೃಷ್ಟಿಯ ಮಾಯೆಯಿತ್ತು. ಅವಳನ್ನು ತಬ್ಬಿಕೊಳ್ಳುತ್ತ ವಸಂತನೆಂದ :

'ಮೋಹಿನಿ....'

'ವಸಂತಾ....'

'ಅಪ್ಸರೆಯೇ ನೀನು....'

'ಗಂಧರ್ವ ನೀನು....'

'ಸೊಗಸಿನ ಬಳ್ಳಿ ನೀನು....'

'ಆ ಬಳ್ಳಿಯ ಮೇಲಿನ ಹೂವಿನ ಸುಗಂಧ ನೀನು....'

ಎಂದು ಮೋಹಿನಿ ಮೃದುವಾಗಿ ಮುಖವನ್ನು ಮೇಲಕ್ಕೆತ್ತಿ ಬೇಡಿದಳು :

'ನೀನು ನನ್ನವನಲ್ಲವೆ, ವಸಂತಾ?....'

ವಸಂತ ಅವಳನ್ನಪ್ಪಿಕೊಂಡು ನಯವಾಗಿ ಮುದ್ದಿಸಿದ. ಸುತ್ತಲಿನ ಸೊಗವೆಲ್ಲ ಸೂರೆಯಾಗಿ ಅವರಿಬ್ಬರ ನಡುವೆ ತಂಗಿದಂತಿತ್ತು.

ಇಬ್ಬರೂ ಜೊತೆಯಾಗಿ, ಕೈಯಲ್ಲಿ ಕೈ ಸಿಲುಕಿಸಿಕೊಂಡು ದೂರ ದೂರ ನಡೆದುಹೋದರು. ತೇಲಿಬರುತ್ತಿದ್ದ ಆ ಇಂಚರ ಮೇಲೆ ತೇಲುತ್ತ ಸಾಗಿದರು. ಎಲ್ಲಿಯೋ ತಂಗಿದರು. ಅವರ ತಲೆಯ ಮೇಲೆ ತಿಂಗಳು ಬೆಳಕಿನಲ್ಲಿ ವಿೂಯು ತ್ತಿದ ತೆಂಗಿನ ಮರಗಳು ರೇಶಿಮೆಯ ಛತ್ರಿಗಳಂತೆ ನಿಂತಿದ್ದವು. ಸುತ್ತಲಿನ

ಗಿಡಬಳ್ಳಿಗಳು ಚಾಮರಗಳಾಗಿದ್ದವು.

ವಸಂತನ ತೊಡೆಯ ಮೇಲೆ ತಲೆಯನ್ನಿರಿಸಿ ಮಲಗಿ ಮೋಹಿನಿ ಅವನ ಕಣ್ಣುಗಳನ್ನೇ ನೋಡುತ್ತಿದ್ದಳು. ಅವಳ ಕೂದಲುಗಳನ್ನು ನೇವರಿಸುತ್ತಿದ್ದ ವಸಂತ ಕೇಳಿದ :

'ರಾತ್ರಿ ರಮಣೀಯವಾಗಿದೆಯಲ್ಲವೆ, ಮೋಹಿನಿ ?'

'ಹೌದು ವಸಂತ, ಇಂಥ ರಮಣೀಯತೆಯನ್ನು ನಾನೆಂದಿಗೂ ನೋಡ ಲಿಲ್ಲ....'

'ಚಂದ್ರನನ್ನು ನೋಡಿದೆಯಾ, ಮೋಹಿನಿ ?'

'ಓ! ಎಂಥ ಚೆಲುವು !'

'ಆದರೆ ನಿನ್ನ ಚೆಲುವು ಅವನಿಗಿಲ್ಲ, ಮೋಹಿನಿ !'

'ಅಂಥ ಚೆಲುವೆಯೇ ನಾನು ?'

'ಹೌದು....'

'ಆದರೆ ನನ್ನ ಚೆಲುವೂ ಚಂದ್ರನ ಚೆಲುವಿನಂತೆಯೇ !'

'ಏನು ಹಾಗೆಂದರೆ ?'

'ನನ್ನಂತೆ ಆತನೂ ಪರಪುಷ್ಟ. ಸೂರ್ಯನಿರದಿದ್ದರೆ....'

'ಹಾಗಾದರೆ ನಿನ್ನ ಸೂರ್ಯನಾರು ?'

'ನೀನು.'

'ಅಲ್ಲ. ನಾನಿಲ್ಲದಿದ್ದರೂ ನೀನು ಚೆಲುವೆ !'

'ಇರಬಹುದು, ಆದರೆ ಆ ಚೆಲುವು ಚಂದ್ರನಿಲ್ಲದ ರಾತ್ರಿ! ವಸಂತನ ಸ್ಪರ್ಶವಿಲ್ಲದ ವನ !'

'ಹಾಗಾದರೆ ನಾನು ವಸಂತನೇ ?'

'ನೀನು ವಸಂತನೆಂದೇ ನಾನು ಮೋಹಿನಿ !'

ಹೃದಯದೊಲುಮೆಯ ಮಾಯೆ ಅವರಿಬ್ಬರನ್ನೂ ಬಂಧಿಸಿತ್ತು. ಮಾತನ್ನು ಮೀರಿದ ಭಾವ ಅವರಿಬ್ಬರನ್ನು ಕೂಡಿಸಿತು. ಸುತ್ತಲಿನ ಸೃಷ್ಟಿಯನ್ನೆಲ್ಲವನ್ನೂ ಸೌಂದರ್ಯದ ಕನಸನ್ನಾಗಿ ಮಾಡುವ ಚಂದ್ರ ಅವರ ಕೆಲೆದಾಟವನ್ನು ನೋಡಿ ಸುಖಬಟ್ಟು ಭರದಿಂದ ಮುಂದೆ ಸಾಗಿದ್ದ. ದೂರದಿಂದ ಸಾಗರ ಸಂಗೀತವನ್ನು ಸೂರೆಯಾಗಿ·ತೂರುತ್ತಿದ್ದ. ಅನಾದ್ಯನಂತವಾದ ಸೃಷ್ಟಿಯ ತಾಳಲಯಗಳಿಗೆ

ಅನುಗುಣವಾಗಿ ವಸಂತ–ಮೋಹಿನಿಯರ ಹೃದಯಗಳು ಒಲುಮೆಯ ಹಾಡನ್ನು ಹೇಳುತ್ತಿದ್ದವು. ವೇಳೆ ತನ್ನ ಎಣಿಕೆಯನ್ನು ಮರೆತಂತಿತ್ತು.

ಇಬ್ಬರೂ ನಡೆಯುತ್ತಲೇ ಇದ್ದರು. ಮತ್ತೆಲ್ಲಿಯೋ ತಂಗಿದರು. ಎರಡು ದೇಹಗಳಲ್ಲಿಯೂ ಒಂದೇ ಹೃದಯ ಒಂದೇ ಕನಸನ್ನು ಕಾಣುತ್ತಿರುವಂತಿತ್ತು. ನಡುಬಾನಿನಲ್ಲಿ ಚಂದ್ರ ತನ್ನ ಮಾಯೆಗೆ ತಾನೇ ಮರುಳಾಗಿ ನಿಂತಿದ್ದ. ಗಾಳಿ ಗೀತವಾಗಿ ಗಗನಕ್ಕೇರುತ್ತಿತ್ತು. ಪ್ರಪಂಚ ಇಂದ್ರನ ಅಮರಾವತಿಯಾಗಿತ್ತು ; ಸೊಗದ ಭೋಗದ ರಾಶಿಯಾಗಿತ್ತು. ಮೋಹಿನಿ ಮಳಲಿನಲ್ಲಿ ಉದ್ದಕ್ಕೆ ಮೈ ಚೆಲ್ಲಿದಳು. ವಸಂತ ಅವಳ ಮುಖದಲ್ಲಿಯ ವಿಲಾಸವೈಖರಿಯನ್ನು ಕುಡಿಯುತ್ತಿದ್ದ. ಮೋಹಿನಿ ಎಂದಳು :

'ಎಷ್ಟು ಸೊಗಸಾಗಿದೆ, ವಸಂತ, ಈ ಮಳಲು ? ಅದರ ಸ್ಪರ್ಶ ಬೆಳುದಿಂಗಳಿನಂತಿದೆ !'

'ಅದು ಮಳಲಲ್ಲ, ಮೋಹಿನಿ. ಮರುಳಾಗಿ ನೆಲಕ್ಕೆ ಬಂದು ಮರಳಿ ಹೋಗದ ಬೆಳುದಿಂಗಳೇ ಅದು, ಮೋಹಿನಿ !'

'ವಸಂತಾ, ಈ ಗಾನಸುಧೆ ಎಲ್ಲಿಂದ ಬರುತ್ತಿರಬಹುದು ?'

'ಗಂಧರ್ವಲೋಕದಿಂದ !'

'ನಾವೂ ಅಲ್ಲಿಗೆ ಹೋಗೋಣ, ನಡೆ.'

'ಎಂಥ ಹುಚ್ಚಿ ನೀನು, ಮೋಹಿನಿ ?'

'ಯಾಕೆ ?'

'ಈಗ ನೀನು ಇದ್ದದ್ದು ಎಲ್ಲಿ ?'

ಮೋಹಿನಿ ಸುತ್ತಮುತ್ತ ಕಣ್ಣು ತಿರುಗಿಸಿದಳು. ವಸಂತ–ಮೋಹಿನಿಯರ ದೇಹಗಳು ಇಬ್ಬರೊಬ್ಬರ ಸೆರೆಯಲ್ಲಿದ್ದವು. ವಸಂತ ಉಸಿರಿದ :

'ಇದು ಗಂಧರ್ವಲೋಕ, ಮೋಹಿನಿ, ಗಂಧರ್ವಲೋಕ ಇದು !'

'ಅಪ್ಸರೆಯರೇ ಇಲ್ಲವಲ್ಲ !'

'ಇಂದು ನೀನಿಲ್ಲಿರುವಿಯೆಂದು ಅವರು ಇನ್ನೆಲ್ಲಿಯೋ ಹೋದರು !'

'ಗಂಧರ್ವರೆಲ್ಲಿ ?'

'ಅವರು ಅಪ್ಸರೆಯರ ಹಿಂದಿನಿಂದ ಹೋದರು !'

'ಯಾಕೆ ?'

'ನಿನ್ನ ಹಿಂದಿನಿಂದ ನಾನು ಇಲ್ಲಿ ಬಂದುದೇಕೆ?'

'ಹಾಗಾದರೆ ಇಂದ್ರನೆಲ್ಲಿ?'

'ಅದು ನೋಡು ಮುಗಿಲಲ್ಲಿ, ಚಂದ್ರನಾಗಿ ನೋಡುತ್ತಿದ್ದಾನೆ!'

'ಇಂದು ನಾನು ಸುಖಿಯಾದೆ, ವಸಂತಾ....'

'ನಾನಿದ್ದಲ್ಲಿ ಸುಖವಲ್ಲವೆ?'

'ಇಂದು ನನ್ನ ಜನ್ಮ ಸಫಲವಾಯಿತು!'

'ನಾನಿದ್ದಲ್ಲೆಲ್ಲ ಸಫಲತೆ!'

'ನಿನ್ನ ಬರವಿಗಾಗಿ ನಾನು ಜನ್ಮತಾಳಿದೆ ವಸಂತಾ....'

'ನೀನು ಬಂದೆ ಎಂದು ನಾನು ಅವತಾರ ತಾಳಿದೆ, ಮೋಹಿನಿ!'

'ಯಾತಕ್ಕಾಗಿ?'

'ನಿನ್ನ ಜನ್ಮ ಸಫಲವಾಗಲಿ ಎಂದು.'

'ನಾನು ಧನ್ಯೆ!'

'ನಾನೂ ಧನ್ಯ!'

'ನೀನು ಯಾವಾಗಲೂ ನನ್ನ ಹತ್ತಿರ ಇರು, ವಸಂತಾ....'

'ಹತ್ತಿರವೇಕೆ, ನಿನ್ನಲ್ಲಿಯೇ ಇದ್ದೇನೆ. ನಿನ್ನ ಹೃದಯವೇ ನನ್ನ ಮನೆ!'

'ಹಾಗಾದರೆ ನಾವಿಬ್ಬರೂ ಒಂದೆಯೇ?'

'ಸಂದೇಹವೇನು? ನೀನು ದೇಹ, ನಾನು ಮನಸ್ಸು! ನೀನು ಹೃದಯ, ನಾನು ಭಾವ....'

ಮೋಹಿನಿಯ ಮನಸ್ಸು ಸುರಿದು ಬರುತ್ತಿದ್ದ ಸುರ ಸಂಗೀತದಲೆಯ ಮುಡಿಯ ಮೇಲೆ ಕುಣಿಯುತ್ತಿತ್ತು. ವಸಂತ ಮೋಹಿನಿಯ ಅಂತರಂಗವನ್ನು ಆವರಿಸಿ ಆ ಕುಣಿತದ ಭಾವಲಹರಿಗೆ ಸ್ಫೂರ್ತಿಯಾಗಿದ್ದ. ಪ್ರಪಂಚ ಸೌಂದರ್ಯದಲ್ಲಿ ಕರಗಿಹೋಗಿತ್ತು. ನೆಲ, ನೀರು, ಗಾಳಿ, ಬೆಳಕುಗಳೆಂಬ ಭೇದವಳಿದು ಸೃಷ್ಟಿಯ ಅನಾದಿಯಾದ ಮಾಯೆಗಾಗಿ ನಿಂತಿತ್ತು. ಎಷ್ಟು ವೇಳೆ ಸರಿಯಿತೊ!

ದಣಿದ ಚಂದ್ರ ಪಡುವಣದಲ್ಲಿ ಮ್ಲಾನನಾಗಿದ್ದ. ರತಿಯಲ್ಲಿ ದಣಿದ ಕಾಮಿನಿಯ ಕಮನೀಯತೆಯಿತ್ತು ಅವನ ಮೊಗದಲ್ಲಿ! ಆ ದಣಿವು ಮೋಹಿನಿಯ ಮೊಗದಲ್ಲೂ ಇತ್ತು. ವಸಂತನ ಕೊರಳಲ್ಲಿ ಮಾಲೆಯಾಗಿ ಮೋಹಿನಿ ಎಂದಳು:

'ನನ್ನ ಹತ್ತಿರ ನೀನು ಯಾವಾಗಲೂ ಇರುವೆಯಾ, ವಸಂತಾ?'

'ಈಗಲಂತೂ ಇದ್ದೇನೆ. ಮುಂದಿನದನ್ನು ಹೇಗೆ ಹೇಳಲಿ?'

'ಹೀಗೇಕೆ ಮಾತನಾಡುತ್ತೀ?'

'ನಿಜವಾದುದನ್ನು ಹೇಳಿದೆ.'

'ಅದೇಕೆ, ನೀನು ಮನಸ್ಸು ಮಾಡಿದರೆ ನನ್ನ ಜೊತೆಯಲ್ಲಿಯೇ ಇರಬಹುದು!'

'ನೀನು ಮೋಹಿನಿ!'

'ಅಂತೆಯೇ ವಸಂತ ಆಕೆಯ ಜೊತೆಯಲ್ಲಿರಬೇಕು! ಬದುಕು ಸೊಗಸಿನ ಕನಸಾಗಬೇಕು.'

'ನಿನ್ನ ಆಸೆ ಸರಿ. ಆದರೆ ನಾನು ಇನ್ನೆಲ್ಲಿಯೋ ಹೋಗಬೇಕು!'

'ಎಲ್ಲಿಯೂ ಹೋಗಬೇಡ, ವಸಂತಾ....ಎಲ್ಲಿಯೂ ಹೋಗಬೇಡ!'

'ಅದು ಹೇಗೆ ಸಾಧ್ಯ?'

'ಯಾಕೆ ಸಾಧ್ಯವಿಲ್ಲ?'

'ಪೂರ್ವದಲ್ಲಿ ಮೂಡಿದ ಚಂದ್ರ ಪಡುವಣಕ್ಕೆ ಬಂದ. ಅವನು ಪೂರ್ವದಲ್ಲಿಯೇ ಯಾಕೆ ಉಳಿಯಲಿಲ್ಲ?'

'............'

'ಸೊಗದ ರಾಶಿಯಾಗಿದ್ದವ ಈಗ ಮ್ಲಾನತೆಯ ಮೂರ್ತಿಯಾಗಿದ್ದಾನೆ, ಯಾಕೆ?'

'ನೀನು ನಿಂತರೆ, ಅವನೂ ನಿಲ್ಲುವನು.'

'ಅವನು ನಿಲ್ಲುವುದಿಲ್ಲವೆಂದೇ ನಾನೂ ನಿಲ್ಲಲಾರೆ!'

'ವಸಂತಾ, ನನ್ನ ಹೃದಯ ತಾಳಲಾರದು....'

'ನಾನು ಬಲ್ಲೆ ಅದನ್ನು. ಆದರೆ ನನಗಾಗಿ ಕಾದಿರುವ ಹೃದಯಗಳು ಹತ್ತು ಸಾವಿರ....'

'ನಿಷ್ಕರುಣಿ ನೀನು, ವಸಂತಾ....'

'ಆ ಹತ್ತು ಸಾವಿರ ಹೃದಯಗಳನ್ನು ಹೂವಾಗಿಸಿ, ಅವುಗಳ ಸೌರಭದಿಂದ ಆ ಜೀವಗಳನ್ನೆಲ್ಲವನ್ನೂ ಚೇತರಿಸಿ ಆನಂದಗೊಳಿಸಬೇಕಾಗಿದೆ. ಇಂದು ನೀನು ಸುಖಿಯಾದೆ, ನಾಳೆ ಇನ್ನೊಬ್ಬರು. ಇಂದು ಇಲ್ಲಿ ಹುಣ್ಣಿಮೆ, ನಾಳೆ ಇನ್ನೊಂದೆಡೆ....'

'ನೀನಿಲ್ಲದೆ ನಾನು ಬಾಡಿಹೋಗುವೆ. ಏನು ಮಾಡಲಿ, ವಸಂತಾ.... ನೀನು ಹೋಗಬೇಡ.'

'ನೀನು ಹೂವು. ಮೋಹಿನಿ....'

'ಎಂದರೆ ಬಾಡಲೇ ಬೇಕೆ?'

'ನೋಡು, ಚಂದ್ರ ಕೂಡ ಬಾಡಿದ. ಅವನ ಮುಂದೆ ನೀನೇನು?'

'ಅವನೂ ಬಾಡದಿರಲಿ, ನೀನೂ ಇರು, ನಾನು ಸುಗಂಧ ಬೀರುವೆ!'

'ಹುಚ್ಚು ಆಸೆ ನಿನ್ನದು, ಮೋಹಿನಿ!'

'ಅಯ್ಯೋ....'

'ಯಾಕೆ ಶೋಕ, ಮೋಹಿನಿ? ಮತ್ತೆ ಬರುವೆ ನಾನು!'

'ಯಾವಾಗ?'

'ನೀನು ಕರೆದಾಗ!'

'ನಿಜವಾಗಿಯೂ?'

'ಹೌದು, ನಿಜವಾಗಿಯೂ ಬರುವೆ. ಸ್ತ್ರೀಹೃದಯ ನೀನು, ಕಲ್ಪನಾ ವಿಲಾಸದ ಮೂರ್ತಿ ನಾನು!'

ಮೋಹಿನಿ ಕಣ್ಣು ಮುಚ್ಚಿದಳು. ಎಷ್ಟು ವೇಳೆ ಸರಿಯಿತೊ!

ಬಾನಿನಲ್ಲಿ ಚಂದ್ರನಿರಲಿಲ್ಲ. ವಸಂತನೊಡನೆ ಮೋಹಿನಿ ಹೆಜ್ಜೆಹಾಕುತ್ತಿದ್ದಳು. ಮೆತ್ತನ್ನ ಮಳಲಿನಲ್ಲಿ ಹೆಜ್ಜೆ ನಿಧಾನವಾಗಿ ಬೀಳುತ್ತಿತ್ತು. ಎದುರಿನ ದಾರಿ ಮಾತ್ರ ಕಾಣುತ್ತಿರಲಿಲ್ಲ. ಬಲದಲ್ಲಿಯ ತೆಂಗಿನಮರಗಳ ಸಾಲು ದೂರದ ದಿಗಂತದಲ್ಲಿ ತೇಲಾಡುವ ಮಂಜಿನ ಮೋಡಗಳಂತೆ ಕಾಣುತ್ತಿದ್ದವು. ಎಡದಲ್ಲಿ ಸಾಗರ ಭೀಷಣವಾಗಿ ಭೋರ್ಗರೆಯುತ್ತಿತ್ತು. ಮೋಹಿನಿಯ ಹೃದಯವನ್ನು ಭೀತಿ ಆವರಿಸುತ್ತಿತ್ತು. ತೆರೆತೆರೆಯಾಗಿ ಹೆದರಿಕೆ ಅಲ್ಲಿ ಅಪ್ಪಳಿಸುತ್ತಿತ್ತು—ಎಡದಲ್ಲಿಯ ಸಮುದ್ರದ ತೆರೆಗಳಂತೆಯೆ! ಮೋಹಿನಿಯೆಂದಳು:

'ವಸಂತಾ, ರಾತ್ರಿಯಾಗಿಹೋಯಿತಲ್ಲವೆ. ನನಗೇಕೋ ಹೆದರಿಕೆಯಾಗುತ್ತಿದೆ.'

'ಹೆದರಿಕೆ ಯಾಕೆ, ಮೋಹಿನಿ. ಜೊತೆಯಲ್ಲಿ ನಾನಿಲ್ಲವೆ?'

'ನೀನಿದ್ದರೂ ಹೆದರಿಕೆಯಾಗಹತ್ತಿದೆ. ಬೇಗ ಮನೆಗೆ ಹೋಗಿಬಿಡೋಣ ನಡೆ.'

'ಹೋಗೋಣ. ಆದರೆ ಎಷ್ಟು ಬೇಗ ಕತ್ತಲೆಯಾಗಿಬಿಟ್ಟಿತು ?'

'ಹೌದು. ಇಲ್ಲಿಗೆ ಬರಬಾರದಾಗಿತ್ತೇನೊ.'

'ಯಾಕೆ ?'

'ನೋಡು, ನಾವು ಬಂದು ಎಷ್ಟು ಹೊತ್ತಾಯಿತು. ಮನೆಗೆ ಹೋಗ ಬೇಕಾದರೆ ಇನ್ನೂ ಎಷ್ಟು ವೇಳೆ ಬೇಕು....ನನಗೆ ತುಂಬ ಹೆದರಿಕೆಯಾಗಿದೆ, ವಸಂತಾ....'

'ಹೆದರಬೇಡ, ಮೋಹಿನಿ....'

'ಇಷ್ಟು ರಾತ್ರಿಯಾಯಿತು. ಮನೆಯಲ್ಲಿ ಎಲ್ಲಿ ಹೋಗಿದ್ದೆಯೆಂದು ಕೇಳಿದರೆ, ಏನು ಹೇಳಲಿ ?'

'ಏನಾದರೂ ಹೇಳುವಿಯಂತೆ. ಯಾಕೆ ಸುಮ್ಮನೆ ಸಂಕಟಪಡುತ್ತೀ, ಮೋಹಿನಿ ?....'

'ನಾನು ಇಲ್ಲಿಯವರೆಗೆ ಬರಬಾರದಾಗಿತ್ತು....'

'ಎಂಥ ಹುಚ್ಚಿ ನೀನು, ಮೋಹಿನಿ....ಇಲ್ಲಿಗೆ ಬಂದೆವೆಂದು ಕೆಲಹೊತ್ತಾದರೂ ಸುಖವಾಗಿ ಶಾಂತವಾಗಿ ಕಾಲ ಕಳೆದೆವು....ಯೋಚಿಸಬೇಡ....'

'ಇದುವರೆಗೆ ಸರಿಯಾಯಿತು. ಆದರೆ ಎಂಥ ಕತ್ತಲೆ ಇದು ? ಮುಂದೆ ದಾರಿಯೂ ಕಾಣದಾಯಿತು, ವಸಂತ. ನನ್ನ ಕೈಬಿಡಬೇಡ ...'

ಮೋಹಿನಿಯ ದನಿ ನಡುಗುತ್ತಿತ್ತು. ನೊಂದ ಜೀವದ ಆರ್ತಸ್ವರದಂತೆ ಶಾಂತತೆಯನ್ನು ಇರಿದುಬರುತ್ತಿದ್ದ ಸಮುದ್ರದ ಮೊರೆತ ವಸಂತನ ಹೃದಯವನ್ನು ನಡುಗಿಸಿತು.

'ಎಂಥ ಭಯಂಕರ ಕತ್ತಲೆ ಮೋಹಿನಿ, ಇದು ? ನಿಜವಾಗಿಯೂ ಕತ್ತಲೆಯ ಕಡಲು. ನನ್ನ ಹತ್ತಿರವೇ ಇರು, ಮೋಹಿನಿ. ದೂರ ಸರಿಯಬೇಡ. ನೀನಿದ್ದರೆ ನನಗೂ ಎಷ್ಟೋ ಧೈರ್ಯ....'

ಮುಂದೆ ಸಾಗಿದಂತೆ ಕತ್ತಲೆ ಇನ್ನೂ ಭಯಾನಕವಾದಂತೆ ಕಾಣುತ್ತಿತ್ತು. ಎತ್ತ ನೋಡಿದತ್ತ ಕತ್ತಲೆ. ಎಡವುತ್ತ, ತಡವರಿಸುತ್ತ ಮುಂದಕ್ಕೆ ಸಾಗಿದ್ದರು. ಮೋಹಿನಿ ಗಾಬರಿಯಲ್ಲಿ ಕೇಳಿದಳು :

'ಹೀಗಾದರೆ, ವಸಂತಾ, ನಾವು ಮನೆ ಮುಟ್ಟುವುದು ಹೇಗೆ ?'

**'ಈ ಕತ್ತಲೆಯಲ್ಲಿ, ಈ ದಾರಿಯಲ್ಲಿ, ಮನೆ ಮುಟ್ಟುವುದು ಕಷ್ಟ !....'**

‘ ಹಾಗಾದರೆ ನಾವು ಮನೆಯನ್ನು ಮುಟ್ಟುವುದೇ ಇಲ್ಲವೇ ? ’

‘ ಇಲ್ಲ. ಇದೇ ನಮ್ಮ ಮನೆ !....’

ವಸಂತ ಏನನ್ನೋ ಎಡವಿ ಮುಗ್ಗರಿಸಿದ. ಮೋಹಿನಿಯ ಕೈಯಿಂದ ಅವನ ಕೈ ಜಾರಿತು. ಸರಕ್ಕನೆ ತಿರುಗಿ ಏನಾಯಿತೆಂದು ನೋಡಿದಳು. ಕತ್ತಲೆಯಲ್ಲಿ ಏನೂ ಕಾಣುತ್ತಿರಲಿಲ್ಲ.

‘ ವಸಂತಾ....’ ಎಂದು ಅರಚಿದಳು.

‘...........’

‘ ವಸಂತಾ....ಏನಾಯಿತು ? ಎಲ್ಲಿದ್ದೀ ? ’

ಎಲ್ಲಿಯೋ ದೂರದಿಂದ ವಸಂತನ ದನಿ ಕೇಳಬರುತ್ತಿತ್ತು :

‘ ಇಲ್ಲಿಯೇ ಇರುವೆನಲ್ಲ....ಇಲ್ಲಿಯೇ ಇದ್ದೇನೆ. ನೀನೆಲ್ಲಿ ? ’

‘ ಅಷ್ಟು ದೂರದಲ್ಲಿ....ಎಲ್ಲಿ ನೀನು ? ಮನೆಗೆ ನಡೆಯುವುದಿಲ್ಲವೆ ? ’

ದನಿ ಇನ್ನೂ ದೂರದಿಂದ ಬರುತ್ತಿತ್ತು :

‘ ಇದೇ ನಮ್ಮ ಮನೆಯೆಂದು ಹೇಳಿದೆನಲ್ಲವೆ ? ’

ಮೋಹಿನಿಗೆ ಗಾಬರಿಯಾಯಿತು. ಕತ್ತಲೆಯನ್ನೇ ದಿಟ್ಟಿಸುತ್ತಿದ್ದಳು. ಯಾರೋ ಎದುರಿನಲ್ಲಿ ಬಂದಂತಾಯಿತು. ದಿಟ್ಟಿಸುತ್ತ ನೋಡಿದಳು—ಪುರುಷಾಕೃತಿ ! ಕಾತರಳಾಗಿ ಚೀರಿದಳು.

‘ ವಸಂತಾ....ವಸಂತಾ....ಎಲ್ಲಿದ್ದೀ....’ ಎಂದು.

‘ ನಾನು ವಸಂತನಲ್ಲ, ಆನಂದ....’ ಎಂದಿತು ಎದುರಿನ ಆಕೃತಿ.

‘ ಆನಂದ !....’

‘ ಇಂಥ ಕತ್ತಲೆಯಲ್ಲಿ ಏನು ಮಾಡುತ್ತಿದ್ದೆ, ಮೋಹಿನಿ ?....’

‘ ವಸಂತಾ....ವಸಂತಾ....’

ಎದುರಿಗೆ ನಿಂತ ಆನಂದ ಸಂತಾಪದಿಂದ ಉರಿಯುತ್ತಿದ್ದಂತಿತ್ತು. ಸರ್‍ರೆಂದು ಮುಂದಕ್ಕೆ ಬಂದು ಕೋಪಾತಿರೇಕದಿಂದ ಕೇಳಿದ : ‘ ಇಲ್ಲಿ ಏನು ಮಾಡುತ್ತಿದ್ದೆ, ಹೇಳು....ಇಲ್ಲಿ ?....’

ಮೋಹಿನಿಯ ಬುದ್ಧಿ ದಾರಿಗಾಣದೆ ಕತ್ತಲೆಯಲ್ಲಿ ತೊಳಲಾಡುತ್ತಿತ್ತು. ಏನನ್ನೋ ತಡವರಿಸುತ್ತ ಹೇಳಬೇಕೆನ್ನುವಷ್ಟರಲ್ಲಿ ಆನಂದ ಸಿಟ್ಟಿನಿಂದ ಕೈ ಹಿಡಿದು ಬಲವಾಗಿ ಎಳೆದ. ಪಳಕ್ಕನೆ ಮೋಹಿನಿ ಕಣ್ಣು ತೆರೆದಳು, “ ಆಂ ? ” ಎಂದು.

ಎದುರಿಗೆ ತಾಯಿ ನಿಂತು ಕೈ ಹಿಡಿದು ಎಳೆದು ಎಬ್ಬಿಸುತ್ತ ಕೇಳುತ್ತಿದ್ದಳು :
" ಏನು ನಿದ್ರೆಯೇ ಮೋಹಿನಿ, ಇದು ? ನಾಲ್ಕಾರು ಬಾರಿ ಎಬ್ಬಿಸಿದೆ.... ಚಹ ಮಾಡಿಟ್ಟಿದ್ದೇನೆ...." ಎಂದು.

ಮೋಹಿನಿ ಎದ್ದು ಕುಳಿತಳು, ಕಣ್ಣುಜ್ಜಿಕೊಂಡಳು. ಅವಳ ಚೇತನ ವಾಸ್ತವ ಪ್ರಪಂಚಕ್ಕೆ ಹಿಂದಿರುಗಲಿಕ್ಕೆ ಐದಾರು ನಿಮಿಷಗಳಾದರೂ ಬೇಕಾದವು.

* * * *

ಇತ್ತ ಸಾಂತಾಕ್ರೂಸ್ ನಿಲ್ದಾಣದಲ್ಲಿ ವಸಂತ ಮೋಹಿನಿಗಾಗಿ ಕಾಯ್ದು ಬೇಸತ್ತಿದ್ದ. ಮೂರೂಕಾಲಾದರೂ ಎರಡೂವರೆಗೆ ಬರುತ್ತೇನೆಂದು ಹೇಳಿದವಳು ಯಾಕೆ ಬರಲಿಲ್ಲವೆಂಬ ಯೋಚನೆ ಆಕೆ ಬಾರದಿದ್ದುದರ ನಿರಾಶೆಯನ್ನು ತಗ್ಗಿಸಿ ಮೇಲಕ್ಕೆ ಬರುತ್ತಿತ್ತು. ಹತ್ತು ದಿಕ್ಕಿನಲ್ಲಿಯೂ ಯೋಚನೆಯನ್ನು ಓಡಿಸಿದ. ಆದರೆ ಉತ್ತರವಿಲ್ಲದೆ ಹಿಂದಿರುಗುತ್ತಿತ್ತು ಆತನ ಬುದ್ಧಿ. ಇನ್ನು ಹದಿನೈದು ನಿಮಿಷ ಕಾಯ್ದು ಸರಿಯಾಗಿ ಮೂರೂವರೆಗೆ ದಾದರಿಗೆ ಹೋಗತಕ್ಕದ್ದೆಂದು ಗೊತ್ತುಮಾಡಿಕೊಂಡು, ಗಡಿಯಾರದ ಹತ್ತಿರವೇ ಇದ್ದ ಬೆಂಚಿನ ಮೇಲೆ ಬಂದು ಕುಳಿತ.

ಮೂರೂವರೆಯೂ ಆಗಿಹೋಯಿತು. ಒಂದೆರಡು ನಿಮಿಷಗಳಲ್ಲಿಯೆ ಇನ್ನೊಂದು ಲೋಕಲ್ ಬರುವುದಿತ್ತು. ಇಷ್ಟು ವೇಳೆ ದಾರಿ ನೋಡಿಯಾಗಿದೆ, ಇದೊಂದು ರೈಲನ್ನು ನೋಡಿಕೊಂಡು ಹೊರಡಬಹುದಲ್ಲವೆ ಎಂದು ಮತ್ತೆ ಕಾಯ್ದ. ಗಾಡಿ ಬಂದುಹೋಯಿತು; ಮೋಹಿನಿ ಬರಲಿಲ್ಲ! ದಾದರಿಗೆ ಹೋಗುವ ಲೋಕಲ್ಲೂ ಬಂದಿತು. ಒಂದು ಮೂಲೆಯಲ್ಲಿ ಸ್ಥಳವನ್ನು ಆಕ್ರಮಿಸಿ ಕುಸಿಬಿದ್ದ ವಸಂತ. ಮೈಮೇಲೆ ಬೆವರು ಧಾರಾಳವಾಗಿ ಸುರಿಯುತ್ತಿತ್ತು. ಮನಸ್ಸು ತುಂಬ ನಿರಾಶೆಗೊಂಡಿತ್ತು! ಆಕೆ ಯಾಕೆ ಬಂದಿರಲಿಕ್ಕಿಲ್ಲವೆಂಬ ವಿಚಾರಕ್ಕಿಂತ ಆಗ ಆಕೆ ಬರಲೇ ಇಲ್ಲವೆಂಬ ವಿಚಾರ ಹೆಚ್ಚು ಪ್ರಬಲವಾಗಿ ಮನಸ್ಸನ್ನು ಸಂಕಟಪಡಿಸುತ್ತಿತ್ತು. ಮೋಹಿನಿ ಬಾರದಿದ್ದರೆ ತನಗೆ ಆಗಬಹುದಾದ ನಿರಾಶೆ ಎಷ್ಟು ಎಂಬುವರ ಕಲ್ಪನೆ ವಸಂತನಿಗೆ ಗಾಡಿಯಲ್ಲಿ ಬಂದು ಕೂಡುವವರೆಗೂ ಇರಲಿಲ್ಲ. ಬಾರದಿದ್ದರೆ ಇಲ್ಲ, ಅಂಥದೇನು ನಷ್ಟವಾದದ್ದು ? ಎಂದು ತನಗೆ ತಾನೇ ಹೇಳಿಕೊಳ್ಳುವುದು ಕೂಡ ಸಾಧ್ಯವಿಲ್ಲದಾಗ ಮೊದಲನೆಯ ಸಾರೆ ಕಂಡುಬಂದಿತು, ವಸಂತನಿಗೆ. ಬಾರದಿದ್ದರೆ ಇಲ್ಲ ಎನ್ನುವುದಕ್ಕಿಂತ,

ಬಂದಿದ್ದರೆ ಎಷ್ಟು ಚೆನ್ನಾಗಿತ್ತು ಎನ್ನುವ ಭಾವವೇ ತೂರಿ ತೂರಿ ಬಂದು ಮನಸ್ಸಿನ ನಿರಾಶೆಯನ್ನು ಇಮ್ಮಡಿಸುತ್ತಿತ್ತು.

ವಿಚಾರ ಮತ್ತೆ ಬದಲಾಯಿಸಿತು. ಮೋಹಿನಿ ಖಂಡಿತವಾಗಿ ಬರುತ್ತೇನೆಂದು ಹೇಳಿದವಳು, ಜುಹುವಿಗೆ ಹೋಗತಕ್ಕದ್ದೆಂದು ತಾನಾಗಿಯೇ ಸೂಚಿಸಿದವಳು, ಯಾತಕ್ಕಾಗಿ ಬಂದಿರಲಿಕ್ಕಿಲ್ಲ? ಕಾರ್ಮೋಡದಂಚಿನಲ್ಲಿ ಮಿಂಚಿನಂತೆ ಭೀತಿಯೊಂದು ಸುಳಿದುಹೋಯಿತು. ಮೊನ್ನೆದಿನ ತಾನು ಅವಳು ಚಹದಂಗಡಿಯಲ್ಲಿ ಕುಳಿತದ್ದನ್ನು, ಅಲ್ಲಿಂದ ಹೊರಬಿದ್ದು ನಿಲ್ದಾಣದ ಹತ್ತಿರ ಮಾತನಾಡುತ್ತಿದ್ದುದನ್ನು ಇನ್ನಾರಾದರೂ ನೋಡಿದ್ದರೆ? ಅದರಿಂದ ಮನೆಯಲ್ಲಿ ಏನೇನೋ ನಡೆದು ಮೋಹಿನಿ ದುಃಖಿತಳಾಗಿದ್ದರೆ? ತಾನವಳಿಗೆ ಸಹಾನುಭೂತಿಯನ್ನು ತೋರಿಸಹೋಗಿ ತಿರುಗಿ ಆಕೆಗೆ ತೊಂದರೆ ಕೊಟ್ಟಂತೆಯೇ ಆಗಿದ್ದರೆ? ಬಯಸುವುದೊಂದು—ಆಗುವುದೊಂದು, ಎನಿಸಿತು ವಸಂತನಿಗೆ. ವಸಂತ ಎಷ್ಟೋ ಪರಿಯಿಂದ ಅವಳು ಬಾರದಿದ್ದುದಕ್ಕೆ ಕಾರಣ ಹುಡುಕಿದ. ಆದರೆ ಉತ್ತರ ಸಿಗಲಿಲ್ಲ. ಆಕೆ ಊರಲ್ಲಿರಲಿಲ್ಲವೆಂಬ ವಿಚಾರವಂತೂ ಅವನ ಸಮೀಪ ಸುಳಿಯಲಿಲ್ಲ. ತನ್ನಿಂದ ಆಕೆಗೆ ಏನಾದರೂ ತೊಂದರೆಯಾಗಿರಬೇಕೆಂದು ವಿಪರೀತ ವ್ಯಥೆ ಪಟ್ಟುಕೊಂಡ.

ಯೋಚನೆ ಇನ್ನೊಂದು ದಿಕ್ಕಿನಲ್ಲಿ ಓಡಿತು. ಇಂದಂತೂ ಭೆಟ್ಟಿಯಾಗಲಿಲ್ಲ, ಮುಂದೇನು? ಎಂದು. ಏನಿದ್ದರೂ ಬೆಳಗ್ಗೆ ಒಂಬತ್ತರ ರೈಲಿನಿಂದ ಆಕೆ ಕಾಲೇಜಿಗೆ ಹೋಗುವಳಲ್ಲ. ಮರುದಿನ ಕೇಳಿದರಾಯಿತು, ಎಂದು ಸಮಾಧಾನ ತಂದುಕೊಂಡ. ಆದರೆ ತಟ್ಟನೆ ವಿಚಾರ ಹೊಳೆಯಿತು, ಮರುದಿನ ಆದಿತ್ಯವಾರ. ಅಂತೂ ಸೋಮವಾರ ಬೆಳಗಿನವರೆಗೆ, ಆಕೆ ಬಾರದ್ದಕ್ಕೆ ಕಾರಣವನ್ನು ತಿಳಿಯಬೇಕಾದರೆ ತಡೆಯಬೇಕಾಯಿತು, ಎಂದು ವಸಂತ ಕಳವಳಪಟ್ಟ. ಮರುದಿನ ಬೆಳಗ್ಗೆ ಅವಳ ಮನೆಯವರೆಗೂ ಹೋಗಿಬಂದರೆ? ಎಂದು ಯೋಚಿಸಿ ನೋಡಿದ. ಆನಂದರಾಯ ಅಲ್ಲಿ ಇರುತ್ತಿರಲಿಲ್ಲವಾದ್ದರಿಂದ ಅಲ್ಲಿ ತನ್ನನ್ನು ಕರೆದೊಯ್ಯಲು ಯಾವ ನೆಪವೂ ಸಮರ್ಥವಾಗಲಾರದೆಂದು ಮತ್ತೆ ಸುಮ್ಮನಾದ. ಅಂತೂ ಸೋಮವಾರ ಬೆಳಗಿನವರೆಗೆ ಸುಮ್ಮನಿದ್ದು ಸೈರಣೆಯಿಂದ ಕಾಯದ ಹೊರತು ಬೇರೆ ದಾರಿ ಕಾಣಲಿಲ್ಲ. ಆದರೆ ವಸಂತ ತನ್ನ ಅಂತರಂಗವನ್ನು ಪರೀಕ್ಷಿಸಿ ನೋಡಿದಾಗ ತಿಳಿಯುತ್ತಿತ್ತು, ತನ್ನಲ್ಲಿ ಅಷ್ಟು ಕೂಡ ಸೈರಣೆ ಉಳಿದಿರಲಿಲ್ಲವೆಂದು.

ಮನಸ್ಸು ಸಮಾಧಾನಕ್ಕಾಗಿ ಹಾತೊರೆಯುತ್ತಿತ್ತು. ಧೈರ್ಯವಾಗಿ ಹೇಳಿಕೊಂಡ: 'ಬರದಿದ್ದರೆ ಇಲ್ಲ' ಎಂದು. ಆದರೆ ಅದು ಹುಸಿಯಾದ ಸಮಾಧಾನವಾಗಿತ್ತು. ಮೋಹಿನಿ ಬಾರದಿದ್ದುದಕ್ಕೆ ನಿಜವಾದ ಕಾರಣ ತಿಳಿಯದ ಹೊರತು ಸರಿಯಾದ ಸಮಾಧಾನ ತನಗೆ ಸಿಗುವಂತಿಲ್ಲವೆಂಬುದನ್ನು ನೆನೆದಾಗ ವಸಂತನಿಗೆ ವಿಚಿತ್ರವೆನಿಸಿತು. ತಾನು ಮೋಹಿನಿಯ ಆಕರ್ಷಣೆಯಲ್ಲಿ ಎಷ್ಟರ ಮಟ್ಟಿಗೆ ಸಿಲುಕಿರಬಹುದೆಂಬುದರ ಅರಿವು ವಸಂತನಿಗೆ ಆ ಕ್ಷಣಕ್ಕೆ ಉಂಟಾಯಿತು.

ಆದರೆ ಅದರ ಜೊತೆಯಲ್ಲಿಯೆ 'ಇದು ಸರಿಯಲ್ಲ. ಮನಸ್ಸನ್ನು ಅಲ್ಲಿಂದ ಕೀಳಲೆ ಬೇಕು. ಇದು ನಿರರ್ಥಕವಾದ ನಿರಾಶೆ' ಎಂದು ಹೇಳಿಕೊಳ್ಳಲೂ ಯತ್ನಿಸುತ್ತಿದ್ದ. ಆದರೆ ಹೃದಯದ ಭಾವ ಅಳುಕುತ್ತಿತ್ತು. ವಿವೇಕದೆದುರು ನಿಲ್ಲುವ ಧೈರ್ಯ ಆ ಹೃದಯಕ್ಕಿರದಿದ್ದರೂ ಹೃದಯ ಒಂದೆಡೆ ಸೋತು ವಿವೇಕವನ್ನು ಸೋಲಿಸಿದೆನೆಂಬ ವಿಜಯೋತ್ಸಾಹದಲ್ಲಿದ್ದಂತಿತ್ತು. ವಸಂತನ ಮನಸ್ಸಿನಲ್ಲಿಯ ನಿರಾಶೆಯ ತೀವ್ರತೆಯನ್ನು ನೋಡಿದರೆ ಆ ನಿರಾಶೆಯಲ್ಲಿ—ಭಾವನೆಗೆ ಗೆಲವಿತ್ತು, ವಿವೇಕಕ್ಕೆ ಸೋಲಿತ್ತು ಎಂಬುದನ್ನು ಸಹಜವಾಗಿಯೇ ತಿಳಿಯಬಹುದಾಗಿತ್ತು.

ದಾದರಿನಲ್ಲಿಳಿದು ತನ್ನ ಶನಿವಾರದ ಕಾರ್ಯಕ್ರಮದಂತೆ ಗೆಳೆಯನ ಮನೆಯ ಕಡೆಗೆ ಹೆಜ್ಜೆಹಾಕತೊಡಗಿದ. ಮೋಹಿನಿಯ ಮೋಹದಲ್ಲಿ ಸಿಲುಕಿ ತೊಳಲಾಡುತ್ತಿದ್ದ ಅವನ ಹೃದಯಕ್ಕೂ, ಆ ತೊಳಲಾಟದಿಂದ ಅದನ್ನು ಬಿಡಿಸಲೆಳಸುತ್ತಿದ್ದ ವಿವೇಕದೃಷ್ಟಿಗೂ ಹೋರಾಟ ನಡೆದೇ ಇತ್ತು.

'ನಾನು ನಿನಗೆ ಮೊದಲೇ ಹೇಳಿದ್ದೆ. ನೀನು ಮೋಹಿನಿಗೆ ಇಷ್ಟು ಸಮೀಪ ಹೋಗಬೇಡವೆಂದು....' ಎಂದು ಹೀಯಾಳಿಸಿತು ವಿವೇಕ.

'ಈಗಾದರೂ ಆದದ್ದೇನು?'

'ಇನ್ನೇನಾಗಬೇಕು? ನಿನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡು ಆಕೆಗಾಗಿ ಆತುರಪಡುತ್ತಿದ್ದೀಯೆ....'

'ನಾನು ಆತುರಪಡುತ್ತಿಲ್ಲವೆಂದು ಹೇಳುವಂತಿಲ್ಲ. ಆತುರನಾಗಿದ್ದೇನೆ, ನಿಜ. ಆದರೆ....'

'ಆದರೆ ಏನು?'

'ನಾನು ಯಾಕೆ ಆತುರನಾಗಿದ್ದೇನೆಂಬುದನ್ನು ಹೇಳುವುದು ಕಷ್ಟ....'

‘ ಕಷ್ಟವೇನೂ ಇಲ್ಲ. ನಾನು ಹೇಳುತ್ತೇನೆ, ಕೇಳು. ಮೋಹಿನಿಯ ಚೆಲುವಿಗೆ ನೀನು ಮನಸೋತಿರುವಿ....’

‘ ಇರಬಹುದು....’

‘ ಆದರೆ ಅದು ಕೇವಲ ಚೆಲುವಿಗಾಗಿ ಅಲ್ಲ.’

‘ ಹಾಗಾದರೆ ? ’

‘ ಆ ಚೆಲುವಿಗೆ ಬೀಡಾದ ಅವಳ ದೇಹವನ್ನು ಬೇಡುತ್ತಿದ್ದೀ....’

‘ ಇಲ್ಲ. ಅವಳ ದೇಹವನ್ನು ನಾನು ಬೇಡುತ್ತಿಲ್ಲ.’

‘ ಹಾಗಾದರೆ ಅವಳು ಇಂದು ಇಲ್ಲಿಗೆ ಬಾರದಿದ್ದುದಕ್ಕೆ ನಿನಗೆ ನಿರಾಶೆ ಯಾಕೆ ? ’

‘ ಬಂದಿದ್ದರೆ ಸೊಗಸಾಗಿರುತ್ತಿತ್ತು, ಆ ಸೊಗಸು ಇಲ್ಲದ್ದಕ್ಕಾಗಿ.’

‘ ಅದಿಷ್ಟೇ ಆಗಿದ್ದರೆ ಆಕೆಯ ಚೆಲುವನ್ನು ನೆನೆದು ನೀನು ಸುಖವಾಗಿರ ಬಹುದಾಗಿತ್ತು ; ಆಕೆಯ ಸಾನ್ನಿಧ್ಯವನ್ನು ಬಯಸುವ ಅಗತ್ಯವಿರುತ್ತಿರಲಿಲ್ಲ....’

‘ ಆದರೆ ನಿಜವಾಗಿಯೂ ನನಗೆ ಅವಳ ದೇಹದ ಮೇಲೆ ಆಸೆಯಿಲ್ಲ....’

‘ ಒಂದು ವೇಳೆ ಈಗ ಇಲ್ಲದಿರಬಹುದು. ಅದು ಉಂಟಾಗಲಿಕ್ಕೆ ಇನ್ನು ಒಂದೆರಡು ಹೆಜ್ಜೆ ಮಾತ್ರ....’

‘ ಅದು ಸಾಧ್ಯವಿಲ್ಲ ! ’

‘ ಹುಚ್ಚು ನಿನಗೆ. ಆ ಚೆಲುವು ನಿನಗೆ ಬೇಕು; ಅಲ್ಲವೆ ? ಆ ದೇಹ ವಿಲ್ಲದೆ ಆ ಚೆಲುವು ಎಲ್ಲಿರಬೇಕು ? ’

ಹೃದಯಕ್ಕೆ ಯೋಚನೆಯಾಯಿತು. ಹೀಗೂ ಇರಬಹುದೆ, ಎಂದು ಕೊಂಡಿತು. ಆದರೆ ಸೋಲನ್ನು ಒಪ್ಪಲಾರದೆ ಮತ್ತೆ ಕೇಳಿತು :

‘ ಆದರೆ ನನ್ನ ಮಟ್ಟಿಗೆ ಆ ದೇಹವನ್ನು ಬಯಸದೆ ಅದರ ಚೆಲುವಿನಿಂದ ಆನಂದಿತನಾಗಬೇಕೆಂದಿದ್ದೇನೆ.’

‘ ಅದು ಅಸಾಧ್ಯ....’

‘ ಅಲ್ಲದೆ, ನಾನು ಅವಳಿಗೆ—ಸಾಧ್ಯವಾದರೆ—ಸಹಾಯಮಾಡಬೇಕೆಂದು ಕೊಂಡಿದ್ದೇನೆ....’

‘ ಮೊದಲಿಗೆ ಆ ಇಚ್ಛೆ ಇರಬಹುದು. ಆ ಇಚ್ಛೆ ಉಳಿಯಲೂ ಬಹುದು. ಸಹಾಯವನ್ನು ಮಾಡಿಯೂ ಮಾಡಬಹುದು. ಆದರೆ....’

‘ ಆದರೆ ಏನು ? ’

‘ ಹೃದಯವನ್ನು ಕಮಲಕ್ಕೆ ಹೋಲಿಸುತ್ತಾರೆ ಗೊತ್ತೇ? ಕಮಲ ಪತ್ರಕ್ಕಲ್ಲ ! ’

‘ ಅದರದೇನು ? ’

‘ ಕಮಲಪತ್ರವಾಗಿದ್ದರೆ ಅದಕ್ಕೆ ನೀರಿನಿಂದ ನಿರ್ಲಿಪ್ತವಾಗಿ ಇರಲಿಕ್ಕೆ ಬರುತ್ತಿತ್ತು. ಕಮಲ ಅರಳಬೇಕಾದರೆ ನೀರಿನಲ್ಲಿಯೇ—ಕೆಸರಿನಲ್ಲಿಯೇ—ನಿಲ್ಲಬೇಕು. ಈಗ ನೀನು ನೀರಿನಲ್ಲಿ ನಿಂತುದಾಗಿದೆ, ಅರೆಮರ್ಧ ಅರಳಿಯೂ ಆಗಿದೆ.’

‘ ಹಾಗಾದರೆ ? ’

‘ ಎರಡೇ ಎರಡು ಮಾರ್ಗ : ನೀರಿನಲ್ಲಿಯೇ ಕೆಸರಿನಲ್ಲಿಯೇ ಉಳಿದು, ನಿಂತು, ಅರಳಿ ಸೊಗಸಾಗಬೇಕು ; ಇಲ್ಲವಾದರೆ, ಹೊರಗೆ ಬಂದು, ಅರಳುವು ದನ್ನೇ ತಪ್ಪಿಸಿ, ಅಕಾಲವಾಗಿ ಬಾಡಿಹೋಗಬೇಕು.’

‘ ಹಾಗಾದರೆ ಕಮಲ ಅರಳುವುದು ತಪ್ಪೇ ? ’

‘ ತಪ್ಪೆಂದು ನಾನೆಲ್ಲಿ ಹೇಳಿದೆ ? ಅರಳಬೇಕಾದರೆ ಅದಕ್ಕೆ ಅದರ ಆಶ್ರಯ ಸ್ಥಾನ ತಪ್ಪಲಾರದು ಎಂದೆ....’

‘ ನನಗೆ ಅರಳಬೇಕಾಗಿದೆ.’

‘ ನಾನು ಬೇಡವೆನ್ನಲಿಲ್ಲ. ಆದರೆ ಅದಕ್ಕೆ ಅನಿವಾರ್ಯವಾದ ಒಂದೆರಡು ಅಂಶಗಳನ್ನು ಹೇಳಿದೆ.’

‘ ಈಗ ಒಂದು ವೇಳೆ ಕೆಸರಿನಲ್ಲಿ ನಿಲ್ಲಬೇಕಾಗಬಹುದು. ಆದರೆ ಅರಳಿದ ನಂತರವಾದರೂ ಸೊಗಸಿನ ರಾಶಿಯಾಗಿ ಸುಖದ ಸಂಕೇತವಾಗಬಹುದಲ್ಲವೆ ? ’

‘ ಆಗಬಹುದು. ಆದರೆ ಕ್ಷಣಮಾತ್ರ ! ಮರುದಿನ ಬಾಡಬೇಕು.’

ಹೃದಯ ಸಂಕಟಪಟ್ಟಿತು. ಈ ವಿವೇಕವನ್ನು ಸೋಲಿಸುವುದು ತನ್ನಿಂದಾ ಗುವುದೇ ಇಲ್ಲವೆಂದು ಕಳವಳಪಟ್ಟು ಕೊನೆಯದಾಗಿ ಕೇಳಿತು :

‘ ಹಾಗಾದರೆ ಜಗತ್ತಿನಲ್ಲಿ ಹೃದಯವೆಂಬುದೇ ಇರಬಾರದೇನು ? ಪ್ರಪಂಚ ವೆಲ್ಲವೂ ನಿನ್ನ ಕಠೋರ ಆಳಿಕೆಗೆ ಒಳಪಡಬೇಕೆಂಬುದೇ ನೀನು ಹೇಳುತ್ತಿರು ವುದು ? ’

‘ ಅಂಥ ಮಹತ್ವಾಕಾಂಕ್ಷೆ ನನಗಿಲ್ಲ. ನಿನಗೂ ಸ್ಥಳವಿದೆ, ಮಹತ್ವದ

ಸ್ಥಳವಿದೆ. ಆದರೆ ನಿನ್ನ ಶಕ್ತಿ-ಯೋಗ್ಯತೆಗಳನ್ನು ಕುರಿತು ಹೇಳಿದೆ, ಅಷ್ಟೆ. ದೇಹದಲ್ಲಿ ಕೂಡ ನಾನು ನಿನಗಿಂತ ಎತ್ತರದಲ್ಲಿ ವಾಸಿಸುತ್ತೇನೆ....'

ವಸಂತ ತನ್ನ ಗೆಳೆಯನ ಮನೆಯನ್ನು ಸೇರಿದ. ವಾಡಿಕೆಯ ಸಂಗಡಿಗರು ವಾಡಿಕೆಯಂತೆ ಕೂಡಿದ್ದರು. ಹರಟೆಗೆ ಮೊದಲಾಯ್ತು. ಆದರೆ ವಸಂತನ ಲಕ್ಷ್ಯ ಎಲ್ಲಿಯೋ ಇತ್ತು. ನಾಲ್ಕು ದಿವಸಗಳಿಂದ ಕಣ್ಣಿಗೆ ಮರೆಯಾಗಿದ್ದ ಮೋಹಿನಿಯನ್ನೇ ನೆನೆಯುತ್ತಿದ್ದ. ಹರಟೆಯ ಪ್ರವಾಹದಲ್ಲಿ ಮದುವೆಯ ವಿಷಯ ತೇಲಿ ಬಂದಿತ್ತು. ಅವರಲ್ಲಿ ಹಿರಿಯನಾದವನೊಬ್ಬ ಹೇಳುತ್ತಿದ್ದ :

" ಈಗಿನ ಹುಡುಗರಿಗೆ ಮದುವೆಯೆಂದರೆ ಮೈಮೇಲೆ ಮುಳ್ಳು ! ಗಂಡೂ ಅಷ್ಟೇ, ಹೆಣ್ಣೂ ಅಷ್ಟೇ. ಈಗ ನೀವೇ ನೋಡಿರಿ, ನಮ್ಮ ವಸಂತರಾಯ...."

ಎಂದು ವಸಂತನ ಕಡೆಗೆ ಸೂಚ್ಯವಾಗಿ ನೋಡಿ ಅರ್ಧಕ್ಕೇ ತಡೆದ. ವಸಂತ ಸುಮ್ಮನೆ ಇದ್ದ. ಅದನ್ನು ನೋಡಿ ಇನ್ನೊಬ್ಬ ಕೆಣಕಿದ :

" ಓ ! ವಸಂತರಾಯನ ಮದುವೆಯೇ ? ಮುಗಿದೇ ಹೋಯಿತು. ಅವರದೂ ಸರಿಯೆ ಅನ್ನಿ. ಅವರು ಮದುವೆಯನ್ನಾದರೂ ಯಾತಕ್ಕೆ ಮಾಡಿಕೊಳ್ಳಬೇಕು ? ಇನ್ನೂವರೆಗೆ ಅಗತ್ಯವೆನಿಸಿಲ್ಲ, ಮಾಡಿಕೊಂಡಿಲ್ಲ...."

ಇದನ್ನು ಹೇಳಿದವ ವಸಂತನ ತೀರ ಸಲಿಗೆಯ ಗೆಳೆಯನಾದ್ದರಿಂದ ಅವನಿಗೆ ಯಾವ ಸಂಕೋಚವೂ ಇರಲಿಲ್ಲ. ವಸಂತ ನಗೆ ನಗುತ್ತಲೆ ಹೇಳಿದ :

" ಹೌದು ಮಹಾರಾಯಾ, ಮದುವೆಯಾಗದೆ ಇದ್ದವರ ವಿಷಯಕ್ಕೆ ಮದುವೆಯಾಗಿ ಹೋದವರಿಗೆ ಬಹಳ ಅಸೂಯೆ, ಅಂತೇ ಇಂಥ ಮಾತು, ಅಲ್ಲವೆ ? "

" ನಮಗೇಕೆ ಅಸೂಯೆ ? ಮನೆಯಲ್ಲಿ ಹೆಂಡತಿ, ಮನೆತುಂಬ ಮಕ್ಕಳು...."

" ಅಂತೇ ಅಸೂಯೆ, ಮನೆತುಂಬ ಮಕ್ಕಳು, ರೋಮಾನ್ಸಿಗೆ ಅವಕಾಶವಿಲ್ಲ ಎಂದು...."

" ಮದುವೆಯಾಗಿದ್ದವರ ರೋಮಾನ್ಸಿನ ವಿಚಾರ ನಿನಗೇನು ತಿಳಿದೀತು ಬಿಡು."

" ಹೌದಪ್ಪಾ, ಅದು ನನಗೆ ತಿಳಿಯುವುದೇ ಸಾಧ್ಯವಿಲ್ಲ. ಮಕ್ಕಳು ಅಳಲಿಕ್ಕಾರಂಭಿಸಿದವೆಂದಕೂಡಲೆ, ಹೆಂಡತಿಯ ಮೇಲೆ ಹರಿಹಾಯ್ದಾಗಿನ

ರೋಮಾನ್ಸ್ ನನಗೆ ಹೇಗೆ ತಿಳಿಯಬೇಕು ?...." ಎಂದು ವಸಂತ ನಕ್ಕ.

"ಅಂತೂ ಮದುವೆಯನ್ನು ಮಾಡಿಕೊಳ್ಳುವ ವಿಚಾರವೇ ಇಲ್ಲವೆನ್ನು ಹಾಗಾದರೆ...."

ಎಂದು ಮತ್ತೆ ಮೊದಲನೆಯವ ತಡವಿದ.

"ನಮಗೆ ಯಾರು ಕೊಟ್ಟಾರು ಕನ್ಯೆಯನ್ನ ? ಬಿಡಿರಿ...."

"ಕೊಟ್ಟಿದ್ದನ್ನು ನೀವು ಮಾಡಿಕೊಂಡೀರಾದರೂ ಯಾಕೆ ?" ಎಂದು ಮೂರನೆಯವ ಬಾಯಿ ಹಾಕಿದ.

ಮೊದಲಿನವ ಹಿರಿತನದ ಅನುಭವದಿಂದ ಮಾತನಾಡುತ್ತಿರುವಂತೆ ಹೇಳಿದ :

"ಅದೇನೂ ಇಲ್ಲ. ಈಗಿನ ಹುಡುಗರು—ಗಂಡು ಹೆಣ್ಣು ಕೂಡಿ ಅಡ್ಡಾಡಿ, ಹಾಗೆಯೇ ಇರಬೇಕು ಎನ್ನುವುದೇ ಅಭಿಪ್ರಾಯ ! ಮದುವೆಯೆಂದರೆ ಅವರ ದೃಷ್ಟಿಯಿಂದ ಒಂದು ಬಂಧನ...."

"ಹಾಗಾದರೆ ಮದುವೆಯೆಂದರೆ ಬಂಧನ ಅಲ್ಲವೆ ?" ಎಂದು ವಸಂತ ಸವಾಲು ಹಾಕಿದ.

"ಬಂಧನ ಯಾಕೆನ್ನಬೇಕು ? ಬೇಕಾಗಿಯೇ ಮಾಡಿಕೊಂಡಿದ್ದು."

"ಬೇಕಾಗಿ ಮಾಡಿಕೊಂಡದ್ದಾದರೂ ತಿಳಿಯದೆ ಮಾಡಿಕೊಂಡದ್ದು. ನಾನು ಮೊನ್ನೆಯೊಮ್ಮೆ ಹೇಳಿದ್ದೆನಲ್ಲ, ಮದುವೆಯೆಂದರೆ ಇಲಿಯ ಬಲಿ ಇದ್ದ ಹಾಗೆ. ಒಳಗೆ ಏನೇನೋ ತಿಂಡಿ ಕಾಣುತ್ತದೆ. ಪಾಪ, ಇಲಿ ಒಳಗೆ ಸೇರುತ್ತದೆ. ಆಮೇಲೆ, ಒಳಗೆ ಹೋದನಂತರ ಹೊರಗೆ ಬರಲು ಮಾರ್ಗವಿಲ್ಲ ವೆಂಬುದು ತಿಳಿದ ಕೂಡಲೇ, ತಿಂಡಿಯೂ ಇಲ್ಲ, ಬಿಡುಗಡೆಯೂ ಇಲ್ಲ..."

"ಇದೆಲ್ಲ ನಿಮ್ಮ ಕಲ್ಪನೆ....ಮದುವೆಯೆಂದರೆ ಏನೆಂಬುದು ತಿಳಿಯ ಬೇಕಾದರೆ ಮಾಡಿಕೊಂಡು ನೋಡಬೇಕು."

"ಮಾಡಿಕೊಂಡು ಅಲ್ಲ ಮಹಾರಾಯಾ, ಮಾಡಿಕೊಳ್ಳದೆ ನೋಡಬೇಕು ! ಮಾಡಿಕೊಂಡ ಮೇಲೆ ಮುಗಿದೇ ಹೋಯಿತಲ್ಲ !....ಮುಂದೆ ನೋಡಿದರೇನು, ನೋಡದಿದ್ದರೇನು...."

ಮೊದಲನೆಯವನಿಗೆ ಬೇಕಾದ ಮಾತು ಸಿಕ್ಕಿತು. ಒಳ್ಳೆ ಉತ್ಸಾಹದಿಂದ ಆತ ಹೇಳಿದ :

" ಅದೇ, ಅದೇ. ನಾನನ್ನುವುದೂ ಅದೇ. ನಿಮಗೆಲ್ಲ ಮದುವೆಯ ಸುಖ ಬೇಕು, ಅದರ ಬಂಧನ ಬೇಡ. ಅದರ ರೋಮಾನ್ಸ್ ಬೇಕು, ರಿಸ್ಕ್ ಬೇಡ...."

" ಹಾಗಾದರೆ ವಸಂತರಾಯನಿಗೆ ನೀವು ಏನು ಮಾಡು ಅನ್ನುತ್ತೀರಿ ? " ಎಂದು ಮೂರನೆಯವ ಬೇಕೆಂತಲೇ ಕೆಣಕಿದ.

" ನಾವೇನನ್ನುವುದು ? ಬೇಗನೆ ನಮಗಷ್ಟು ಹೋಳಿಗೆ ತುಪ್ಪ ಸಿಗುವಂತೆ ಮಾಡಲಿ ಎಂದು. ಮದುವೆ ಮಾಡಿಕೊಂಡು ಸುಖದಿಂದ ಇರಲಿ ಎಂದು. ಬೇಕಾದಷ್ಟು ದುಡ್ಡು ಬರತ್ತದೆ...."

" ಅದೆಲ್ಲ ಸರಿಹೋಯಿತು, ರಾಯರೆ, ಆದರೆ ನಮ್ಮ ಮೇಲೆ ಇದುವರೆಗೆ ಯಾವ ಮಾವನ ಕೃಪಾಕಟಾಕ್ಷ ಬೀಳಲಿಲ್ಲ...."

" ಬೀಳಲಿಲ್ಲ ? ಈ ಮಾತು ಹೇಳಬೇಡಿರಿ. ನೀವು ಮಾಡಿಕೊಳ್ಳಲಿಕ್ಕೆ ಒಪ್ಪಿರಿ ಮೊದಲು. ಮೂರು ದಿವಸದಲ್ಲಿ ಮೂವತ್ತು ಕನ್ಯೆಯರನ್ನು ತಂದು ತೋರಿಸುತ್ತೇನೆ...."

" ಇದು ಭಾರಿ ಚಾಲೆಂಜ್ ಆಯ್ತಪ್ಪಾ...." ಎಂದು ಎರಡನೆಯವ.

" ಬಲು ಹೇಳುವವರು ಬಿಡಿರಿ ನೀವೂ ? ಕನ್ಯೆಯೆಂದರೆ ಪೇಟಿಯೊಳಗಿನ ಪೇರಲ ಹಣ್ಣು ಎಂದು ತಿಳಿದಿದ್ದೀರೇನು ? " ಎಂದ ಬೇಕೆಂತಲೇ ವಸಂತ.

" ಅದರ ಗೊಡವೆ ನಿಮಗೆ ಯಾಕೆ ? ನೀವು ಹೇಳಿರಿ ಈಗ, ಮದುವೆ ಮಾಡಿಕೊಳ್ಳುತ್ತೇನೆ ಎಂದು."

" ಅಷ್ಟು ಸುಲಭ ಇಲ್ಲ, ರಾಯರೆ, ವಿಷಯ. ಈಗಿನ ದಿವಸದಲ್ಲಿ ಕನ್ಯೆಯರನ್ನು ಯಾರೂ ತೋರಿಸುವುದೇ ಇಲ್ಲ. ವರಗಳನ್ನು ತೋರಿಸೋ ಕಾಲ ! " ಎಂದು ವಸಂತ ನಕ್ಕ.

" ಹಾಗೆ ನೋಡಿದರೆ ಯಾರಿಗೆ ಯಾರನ್ನೂ ತೋರಿಸುವುದೇ ಅಗತ್ಯ ಉಳಿದಿಲ್ಲ ! ಮುಂಜಾನೆಯಿಂದ ಸಂಜೆಯವರೆಗೆ, ಆಫೀಸಿನಲ್ಲಿ, ಬೀದಿಗಳಲ್ಲಿ, ಅಲ್ಲಿ ಇಲ್ಲಿ ಒಬ್ಬರೊಬ್ಬರನ್ನು ನೋಡುತ್ತಲೇ ಇದ್ದವರಿಗೆ ತೋರಿಸುವ ನಾಟಕ ವೇತಕ್ಕೆ ? "

" ಮದುವೆಯೆಂಬುದು ಮುಖ್ಯ ನಾಟಕ. ಈ ತೋರಿಸುವುದು ನಾಟಕದ ನಾಂದೀ ಪ್ರವೇಶ. ನಾಂದಿಯಿಲ್ಲದೆ ನಾಟಕ ಹೇಗೆ ? "

"ಹಾಗಾದರೆ ಈಗಿನ ನಾಂದೀ ಪ್ರವೇಶ ಬೀದಿಯೊಳಗೆ ಅನ್ನಿ ?"

"ಮದುವೆಗಳೇ ಬೀದಿಯ ಮೇಲೆ ನಡೆದಾಗ ಬರೀ ನಾಂದಿಯಷ್ಟೇ ಯಾಕೆ ?...."

ಗೆಳೆಯರ ಹರಟೆ ನಡೆದೇ ಇತ್ತು. ಇಷ್ಟು ಹೊತ್ತು ಹೆಚ್ಚುಕಡಿಮೆ ಸುಮ್ಮನಾಗಿಯೇ ಇದ್ದ ನಾಲ್ಕನೆಯವ ಎಲ್ಲರನ್ನೂ ಸಮಾಧಾನಪಡಿಸುತ್ತಿರುವಂತೆ ಹೇಳಿದ :

"ಅದು ಹೇಗೇ ಇರಲಿ. ನೀವು ಯಾರೂ ಯೋಚನೆ ಮಾಡುವ ಕಾರಣವಿಲ್ಲ. ಇನ್ನು ಮೂರು ತಿಂಗಳಲ್ಲಿ ವಸಂತರಾವ್ ಮದುವೆ ಮಾಡಿಕೊಂಡೇ ಬಿಡುತ್ತಾರೆ. You take it from me (ನಾನು ಹೇಳುತ್ತೇನೆ ಕೇಳಿರಿ.)"

"ಅದೇನು, ಅವರ ಜಾತಕ ನೋಡಿದ್ದೀರಾ ?"

"ಜಾತಕ ಯಾತಕ್ಕೆ ? ನಾನು ಹೇಳುತ್ತೇನೆ, ಕೇಳಿರಿ, ಅಷ್ಟೆ !"

"ಏನು ರಾಯರೇ, ಏನಿದು ಸಮಾಚಾರ ?" ಎಂದು ಎರಡನೆಯವ ವಸಂತನ ಹತ್ತಿರ ಸರಿದು ಬೆನ್ನು ಚಪ್ಪರಿಸಿ ಕೇಳಿದ. ವಸಂತ ಹೇಳಿದ :

"ಹುಚ್ಚು ಅವನಿಗೆ. ಬಲೆಯೊಳಗಿನ ಇಲಿ ಎಷ್ಟಾದರೂ ! ಹೊರಗಿದ್ದ ಇಲಿಯೂ ಒಳಗೆ ಬರಲಿ ಎಂಬ ಆನೆ !...."

ಹೀಗೆ ಬಾಯಿಂದ ಹೇಳಿದರೂ ವಸಂತನೆಂದುಕೊಳ್ಳುತ್ತಿದ್ದ : 'ಈತ ಯಾವ ವಿಶ್ವಾಸದಿಂದ ಹೀಗೆ ಮಾತನಾಡಿರಬಹುದು ? ತಾನು ಮೋಹಿನಿ ಕೂಡಿ ಮಾತನಾಡಿದ್ದನ್ನು ಈತ ಎಲ್ಲಿಯಾದರೂ ನೋಡಿರಬಹುದೆ ?' ಎಂದು.

ಒಳಗಿನಿಂದ ಚಹ ಫಲಾಹಾರ ಬಂದಾಗ್ಗೆ ಮದುವೆಯ ವಿವೇಚನೆ ನಿಂತಿತು. ವಸಂತನ ಮದುವೆಯ ವಿಚಾರದಲ್ಲಿಯ ಅವನ ಗೆಳೆಯರ ಆತುರವೂ ದೂರ ಸರಿಯಿತು. ಆದರೆ ವಸಂತನ ಮನಸ್ಸು ಬಲು ದೂರ ಓಡುತ್ತಿತ್ತು. 'ಆನಂದ ಮೋಹಿನಿಯನ್ನು ಇನ್ನೂ ಹೆಚ್ಚಾಗಿ ಪೀಡಿಸತೊಡಗಿದರೆ ?' ಎಂದು. ಚಹವಾದನಂತರ ಇಸ್ಪೀಟಿಗೆ ಪ್ರಾರಂಭವಾಯಿತು. ವಸಂತನ ಕೈಯಲ್ಲಿ ರಾಣಿಯ ಚಿತ್ರ ಬಂದಾಗಲೆಲ್ಲ ಆ ಚಿತ್ರದ ಹಿಂದೆ ಮೋಹಿನಿಯ ಮೋಹನ ಮೂರ್ತಿಯನ್ನು ಕಾಣುತ್ತಿದ್ದ !

* * * *

ಇತ್ತ ಚಹ ಕುಡಿದಾದಮೇಲೆ ಮೋಹಿನಿ ಮಧ್ಯಾಹ್ನದ ಕೇಶಭೂಷೆಯಲ್ಲಿ

ತೊಡಗಿದಳು. ಕೊರಳು ಕೊಂಕಿಸಿ ಎದುರಿಗಿನ ಕನ್ನಡಿಯಲ್ಲಿ ಒಂದೆರಡು ಸಲ ತನ್ನನ್ನೇ ನೋಡಿ ಅಭಿಮಾನ ಪಟ್ಟಳು. ಮನಸ್ಸು ಮಧ್ಯಾಹ್ನದಲ್ಲಿ ಕಂಡ ಕನಸನ್ನೇ ನೆನೆಯುತ್ತಿತ್ತು. ಒಮ್ಮೊಮ್ಮೆ ಮೈಮೇಲೆ ರೋಮಾಂಚವೇಳುತ್ತಿತ್ತು. ಒಮ್ಮೊಮ್ಮೆ ಮುಖ ಉದ್ವಿಗ್ನವಾಗುತ್ತಿತ್ತು. ನಡುವೆಯೇ ತನ್ನೊಡನೆ ಇದ್ದವ ವಸಂತನೆಂಬುದನ್ನು ನೆನೆದಾಗ ಮನಸ್ಸು ನಾಚಿಕೊಳ್ಳುತ್ತಿತ್ತಲ್ಲದೆ ಅದು ಸರಿಯಲ್ಲವೆನಿಸುತ್ತಲೂ ಇತ್ತು. ಆ ವಿಚಾರವನ್ನು ಬೆನ್ನಟ್ಟಿದ ಹಾಗೆ ವಸಂತನ ಬಗೆಯಲ್ಲಿ ತಾನು ತಳೆದಿದ್ದ ಭಾವವನ್ನು ಕೂಲಂಕಷವಾಗಿ ಬಿಡಿಸಿ ನೋಡಬೇಕೆನಿಸಿ ತನ್ನ ಮತ್ತು ವಸಂತನ ನಡುವೆ ಬೆಳೆದ ಸೌಹಾರ್ದ ಸ್ವರೂಪವೇನು ಎಂದು ವಿಚಾರಿಸಿ ನೋಡುತ್ತಿದ್ದಳು ವಸಂತನ ಮೆತ್ತನ್ನ ಮನೋವೃತ್ತಿ, ಆ ಮನೋವೃತ್ತಿಯಿಂದ ದುಃಖಿತರಿಗಾಗಿ ಸೂರೆಯಾಗಿ ಬರುತ್ತಿದ್ದ ಸಹಾನುಭೂತಿ—ಒಂದೆರಡು ಸಂದರ್ಭಗಳಲ್ಲಿಯೇ ಆಗಿದ್ದರೂ ಸ್ಪಷ್ಟವಾಗಿ ತೋರಿದ ಆತನ ಸೌಂದರ್ಯಲಾಲನೆ ಮೋಹಿನಿಯ ಮನವನ್ನು ಸೆರೆಹಿಡಿದಿದ್ದವು. ಮನಸ್ಸು ಆತನ ಸಾನ್ನಿಧ್ಯವನ್ನು ಆಗಾಗ ಬಯಸುತ್ತಿತ್ತು. ಆ ಬಯಕೆಯಲ್ಲಿ ಆನಂದನಿಗೆ ಯಾವ ಬಗೆಯಲ್ಲಿಯೂ ಅನ್ಯಾಯವಾಗಬಹುದಾದ ಅಂಶವಿದ್ದಂತೆ ಆಕೆಗೆ ತೋರಲಿಲ್ಲ. ವಸಂತ ಎಷ್ಟೇ ಸ್ಪೃಹಣೀಯನಾದರೂ ತಾನು ಆನಂದನ ಹೆಂಡತಿ—ಆನಂದನ ದುರ್ದೈವಿಯಾದ ಹೆಂಡತಿ—ಎಂಬುದನ್ನು ಮರೆಯುವುದು ಸಾಧ್ಯವಾಗಿ ಕಾಣುತ್ತಿರಲಿಲ್ಲ. ಅದಕ್ಕಾಗಿಯೇ ವಸಂತನೊಡನೆ ಸುಖದ ಒಂದು ಕ್ಷಣವನ್ನು ಮೋಹಿನಿ ಕನಸಿನಲ್ಲಿ ಕಂಡಿದ್ದರೂ ಅಂಥ ಕ್ಷಣ ಕನಸಿನಲ್ಲಿಯಲ್ಲದೆ ಎಚ್ಚರದ ಬದುಕಿನಲ್ಲಿ ಆನಂದನ ಜೊತೆಯಲ್ಲಿ ಬರಲಿಲ್ಲ, ಬರುವಂತೆಯೂ ಇಲ್ಲ, ಎಂದು ಒಂದೊಂದು ಕ್ಷಣ ಅತೀವ ದುಃಖವಾಗುತ್ತಿತ್ತು. ಹೀಗಾಗಿ ಆ ಇಡೀ ಸಂಜೆ-ರಾತ್ರಿ, ಮೋಹಿನಿಯ ಮನಸ್ಸು ಉಯ್ಯಾಲೆಯಾಡುತ್ತಿತ್ತು. ಒಂದೆಡೆ ನೆನಹಿನಿಂದ ದೂರವಾಗಿರಿಸಲಸಾಧ್ಯವಾದ ಆ ರಸನಿಮಿಷಗಳು, ಇನ್ನೊಂದೆಡೆ ಆ ರಸನಿಮಿಷಗಳನ್ನು ಬೆನ್ನಟ್ಟಿಬಂದು ಅವುಗಳನ್ನು ಹಾಳುಮಾಡಿದ ವಾಸ್ತವಿಕ ಜೀವನದ ಕಠೋರ ಸತ್ಯದಂಶಗಳು! ಒಂದೆಡೆ ವಸಂತ! ಇನ್ನೊಂದೆಡೆ ಆನಂದ!

ಮೋಹಿನಿ ಜಡೆ ಹೆಣೆದುಕೊಳ್ಳುತ್ತಲೇ ಇದ್ದಳು. ಬಾಗಿಲಲ್ಲಿ ಹೂವಾಡಗಿತ್ತಿಯೊಬ್ಬಳು ಸೊಗಸಾದ ಮಲ್ಲಿಗೆಯ ಮಾಲೆಗಳನ್ನು ಹೆಣೆದುಕೊಂಡು ಬಂದಳು. ಎಚ್ಚರವಾಗಿದ್ದರೂ ಇನ್ನೂ ಕನಸಿನಲ್ಲಿಯೇ ಇದ್ದ ಮೋಹಿನಿಗೆ

ಮಾಲೆಯನ್ನು ತೆಗೆದುಕೊಳ್ಳಬೇಕೆನಿಸಿತು. ಇತ್ತೀಚಿನ ಆರೆಂಟು ತಿಂಗಳಲ್ಲಿ ಒಂದು ಹೂವನ್ನೂ ತಾನು ಮುಡಿದಿರಲಿಲ್ಲ. ಈಗಲಾದರೂ ಯಾತಕ್ಕೆ ಎನಿಸಿತು, ಒಮ್ಮೆ. ಅವಳ ಹೊಯ್ದಾಟ ಹೂವಾಡಗಿತ್ತಿಗೆ ತಿಳಿದಿರಬೇಕು. ಅವಳೆಂದಳು:

"ತೆಗೆದುಕೊಳ್ಳಮ್ಮ, ಮಾಲೆ ಸೊಗಸಾಗಿದೆ!"

"ಬೇಡಮ್ಮ, ಬೇಡ."

"ತೆಗೆದುಕೊಳ್ಳಿರಮ್ಮ. ನಿಮ್ಮಂಥವರು ಹೂ ಮುಡಿಯದಿದ್ದರೆ ಇನ್ನಾರು ಮುಡಿದಾರು?"

"ಬೇಡ ತಾಯಿ, ಯಾತಕ್ಕೆ ಸುಮ್ಮನೆ. ಇನ್ನಾವಾಗಲಾದರೂ ತೆಗೆದು ಕೊಳ್ಳುವ."

"ಇದೇ ತೊಗೊಳ್ಳಿ. ಗೌರಿಯ ಹಾಗಿದ್ದೀರಮ್ಮ. ನನ್ನ ಹೂವನ್ನಾದರೂ ಮುಡಿದು ನೋಡಿ, ಯಜಮಾನ ಮೆಚ್ಚಿಯಾನು!" ಎಂದು ನಸುನಕ್ಕಳು.

"ತೆಗೆದುಕೋ ಮೋಹಿನಿ, ಹೂ ಬೇಡವೆನ್ನುತ್ತಾರೆಯೆ ಯಾರಾದರು?" ಎಂದು ತಾಯಿ ಒಳಗಿನಿಂದಲೇ ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ಅಂದು ಸಾಯಂಕಾಲ ಮೋಹಿನಿ ತಿರುಗಾಡಹೋದಾಗ ಅವಳ ಕೇಶಭಾರದಲ್ಲಿ ಮಲ್ಲಿಗೆಗಳು ಅರಳಿದ್ದವು ಅವಳ ಮನಸ್ಸಿನಲ್ಲಿ ಮಧ್ಯಾಹ್ನದ ಕನಸು ಮತ್ತೆ ಅರಳಿತ್ತು. ಒಂದರಂತೆ ಇನ್ನೊಂದೂ ಉನ್ಮಾದಕಾರಿಯಾಗಿತ್ತು.

* * * *

ಮರುದಿವಸ ಮುಂಜಾನೆ ವಸಂತ ದಾದರಿನಿಂದ ಬೋರಿವಲಿಯಲ್ಲಿಯ ತನ್ನ ಕೋಣೆಗೆ ಹಿಂತಿರುಗುವಾಗ, ದಾರಿ ಹತ್ತು ಹೆಜ್ಜೆ ದೂರಿನದಾದರೂ ಮೋಹಿನಿಯ ಮನೆಯ ಮುಂದಿನಿಂದ ಹಾಯ್ದು ಬಂದ. ಆಕೆಯ ಮನೆಯೆದುರು ಬರುತ್ತಿದ್ದಾಗ ನಿಧಾನವಾಗಿಯೂ ನಡೆದಿದ್ದ—ಸಾಧ್ಯವಾದರೆ ಅಕಸ್ಮಾತ್ತಾಗಿ ಮೋಹಿನಿ ಹೊರಗೆ ಬಂದರೆ ಒಂದು ನಾರೆಯಾದರೂ ನೋಡಬಹುದೆಂದು! ಸಾಯಂಕಾಲವೂ ಅಷ್ಟೇ. ಆದರೆ ವಸಂತನ ಆಸೆ ಫಲಿಸಿರಲಿಲ್ಲ. ಮರುದಿನ ಸೋಮವಾರ ಬೆಳಗ್ಗೆ ವಾಡಿಕೆಯ ರೈಲಿಗೂ ಮೋಹಿನಿ ಬರಲಿಲ್ಲ. ವಸಂತ 'ಏನೋ ತಡವಾಗಿರಬೇಕು, ಮುಂದಿನ ರೈಲಿಗೆ ಹೊರಡಬಹುದು ಆಕೆ' ಎಂದುಕೊಂಡು ತಾನೂ ಕಾಯ್ದ. ಮೋಹಿನಿ ಬರಲಿಲ್ಲ. ತನಗೆ ಮಾತ್ರ

ಆಫೀಸಿಗೆ ಹೋಗಲು ತಡವಾಯಿತು. ಸಾಯಂಕಾಲ ಆಕೆ ಸಾಮಾನ್ಯವಾಗಿ ತಿರುಗಿ ಬರುವ ರೈಲನ್ನು ಕಾದು ನೋಡಿಯಾಯಿತು. ಮರುದಿವಸವೂ ಅಷ್ಟೇ. ವಸಂತನಿಗೆ ವಿಚಿತ್ರವೆನಿಸುತ್ತಿತ್ತು. ಮೋಹಿನಿ ಅದೃಶ್ಯಳಾದದ್ದಾದರೂ ಎಲ್ಲಿ? ಎಂದು. ತನ್ನ ಮೂಲಕವೇ ಏನಾದರೂ ಮಾತು ನಡೆದು ಮೋಹಿನಿ ಮನೆಯಲ್ಲಿಯೇ ಮೂಲೆಯನ್ನು ಹಿಡಿದು ಕೂಡುವಂತಾಗಿರಬೇಕು ಎಂದುಕೊಂಡ. ಅವಳನ್ನು ಕಾಣಲು, ಸಮಾಚಾರ ತಿಳಿಯಲು, ಪ್ರಯತ್ನ ಮಾಡಿದಾಗಲೆಲ್ಲವೂ ಉಪಯೋಗವಾಗದಿದ್ದಾಗ ಮನಸ್ಸು ತೀರ ನಿರಾಶೆಗೊಳ್ಳುತ್ತಿತ್ತು. ಮುಂದೆ ಮತ್ತೆ ಸಾವರಿಸಿಕೊಂಡು ಒಂದಿಲ್ಲೊಂದು ರೀತಿಯಲ್ಲಿ ಸಮಾಧಾನ ತಂದುಕೊಳ್ಳುತ್ತಿತ್ತಾದರೂ ಇಡೀ ದಿವಸ ರಾತ್ರಿ, ಯಾವುದೋ ಒಂದು ಕೊರತೆ ಮನಸ್ಸನ್ನು ಎಡೆಬಿಡದೆ ಬಾಧಿಸುತ್ತಿತ್ತು.

ಇಡೀ ವಾರ ವಸಂತ ಮೋಹಿನಿಗಾಗಿ ಎಲ್ಲೆಲ್ಲಿಯೂ ಹುಡುಕಿದ—ಮನೆಯೆದುರು ಎಷ್ಟು ಸಲ ಹಾಯ್ದು ಹೋದನೊ! ನಾರಾಯಣರಾಯರ ಪರಿಚಯ ವಸಂತನಿಗೆ ಔಪಚಾರಿಕವಾಗಿರದಿದ್ದರೆ ಏನಾದರೊಂದು ನೆಪವನ್ನು ಹೂಡಿ ಮನೆಯೊಳಗೂ ಹೋಗಿಬರುತ್ತಿದ್ದನೋ ಏನೊ! ವಸಂತನಿಗೆನಿಸುತ್ತಿತ್ತು: 'ಮೋಹಿನಿ ಇಷ್ಟು ಸಮೀಪವಿದ್ದೂ ಎಷ್ಟು ದೂರವಾಗಿಬಿಟ್ಟಿದ್ದಾಳೆ!' ಎಂದು. ಅವಳಿದ್ದ ಮನೆ ವಸಂತನಿಗೆ ಗೊತ್ತು! ಅವಳು ಆನಂದನ ಹೆಂಡತಿ ಎಂಬುದೂ ಗೊತ್ತು! ಇದರ ಹೊರತು ಅವಳೇನಾದಳೆಂಬುದನ್ನು ತಿಳಿಸಲು ಸಮರ್ಥವಾದ ಬೇರೆ ಯಾವ ಅಂಶವೂ ತನಗೆ ತಿಳಿದಿರಲಿಲ್ಲವೆಂಬುದನ್ನು ನೆನೆದಾದ ವಸಂತನಿಗೆ ವಿಚಿತ್ರವೆನಿಸುತ್ತಿತ್ತು. ಅವಳು ಕಾಲೇಜಿಗೆ ಹೋಗುತ್ತಿದ್ದಳು. ಆದರೆ ಮುಂಬಯಿಯಲ್ಲಿ ಎಷ್ಟು ಕಾಲೇಜುಗಳೊ! ಒಂದು ವೇಳೆ ಯಾವ ಕಾಲೇಜು ಎಂದು ಗೊತ್ತಾದರೂ ಅಲ್ಲಿ ಹೋಗಿ ಯಾರನ್ನು, ಏನೆಂದು ಕೇಳುವುದು? ಕೊನೆಗೆ, ಶನಿವಾರ ಸಾಂತಾಕ್ರೂಸ್‌ನಲ್ಲಿ ಭೇಟಿಯಾಗಬೇಕಾದವಳು ಮರು ಶನಿವಾರ ಬಂದರೂ ಎಲ್ಲಿಯೂ ಕಾಣಲಿಲ್ಲವಾದಾಗ ವಸಂತನೆಂದುಕೊಂಡ: 'ಏನಾದರೂ ಘಟನೆ ನಡೆದಿರಲೇ ಬೇಕು. ಅದರ ಪರಿಣಾಮವಾಗಿ ಆಕೆ ಎಲ್ಲಿಯಾದರೂ ಊರಿಗೆ ಹೋಗಿರಬೇಕು. ಇನ್ನು ಆಕೆ ಸಿಕ್ಕುವುದು ಅಕಸ್ಮಾತ್ತಾಗಿಯೇ. ಇಲ್ಲವಾದರೆ ಆನಂದನಾಗಲಿ ಭಾಸ್ಕರರಾಯನಾಗಲಿ, ಯಾರಾದರೊಬ್ಬರು ಸಿಕ್ಕರೆ ಅವರೊಡನೆ ಮಾತನಾಡುತ್ತ ಸೂಕ್ಷ್ಮವಾಗಿ ತನಗೆ ಬೇಕಾದ ಸಮಾಚಾರವನ್ನು

ಹೆಕ್ಕಿಕೊಳ್ಳಬೇಕು. ಇದರ ಹೊರತು ಬೇರೆ ದಾರಿ ಸಾಧ್ಯವಿಲ್ಲವೆಂದು ಒಂದು ನಿರ್ಧಾರಕ್ಕೆ ಬಂದ. ಒಂದು ವಾರದಲ್ಲಿ ನಿರಾಶೆಯ ತೀವ್ರತೆ ಎಷ್ಟೋ ಪಾಲು ಕಡಿಮೆಯಾಗಿದ್ದರೂ ಮೋಹಿನಿಯನ್ನು ನೆನೆದಾಗ ಮಾತ್ರ ಆಕೆ ಇಲ್ಲದ ಕೊರತೆ ಒಂದೆರಡು ಕ್ಷಣ ವಸಂತನನ್ನು ಕಾಡುತ್ತಿತ್ತು.

ಮೋಹಿನಿ ಪುಣೆಗೆ ಬಂದು ಮೂರು ವಾರವಾಗಿತ್ತು. ಮರುದಿವಸ ಮುಂಜಾನೆಯ ಮೇಲಿನಿಂದ ಮುಂಬಯಿಗೆ ಹೊರಡುವವಳಿದ್ದಳು. ಮಾರನೆಯ ದಿನವೇ ಆಕೆಯ ಪರೀಕ್ಷೆ ಆರಂಭ. ಆದ್ದರಿಂದ ಆ ದಿನ ಮಧ್ಯಾಹ್ನದಿಂದಲೂ ಆಕೆ ಹೊರಡುವ ಸಿದ್ಧತೆಯನ್ನೇ ನಡಸಿದ್ದಳು. ಪೇಟೆಯಲ್ಲಿ ಹೋಗಿ ಏನೋ ಸಣ್ಣಪುಟ್ಟ ಸಾಮಾನುಗಳನ್ನು ಕೊಂಡುಕೊಳ್ಳಬೇಕಾದ್ದರಿಂದ ದಿನದಕಿಂತಲೂ ಒಂದಿಷ್ಟು ಮೊದಲೇ ಭೂಷಣ--ಪ್ರಸಾಧನಗಳನ್ನು ಮುಗಿಸಿಕೊಂಡು ಹೊರಡುವುದರಲ್ಲಿದ್ದಳು. ತಾಯಿ ನೆರೆಮನೆಯಲ್ಲಿ ಮಾತನಾಡುತ್ತ ಕುಳಿತಿದ್ದರು. ಕನ್ನಡಿಯಲ್ಲಿ ಮತ್ತೊಮ್ಮೆ ಮುಖ ನೋಡಿಕೊಂಡು, ತನ್ನ ಕೈಚೀಲವನ್ನು ತರಲೆಂದು ಕೋಣೆಯ ಕಡೆಗೆ ತಿರುಗುವಷ್ಟರಲ್ಲಿಯೆ ಹೊರಬಾಗಿಲ್ಲಲ್ಲಿ ಯಾರೋ ಬಂದಂತಾಯಿತು. ಮೋಹಿನೆ ತಿರುಗಿ ನೋಡುತ್ತಾಳೆ— ಭಾಸ್ಕರ!

ಮೋಹಿನಿ ನಿಂತಲ್ಲಿಯೆ ನಿಂತಳು. ಆವಳಿಗೆ ಮೊತ್ತ ಮೊದಲನೆಯ ವಿಚಾರ ಹೊಳೆದದ್ದೆಂದರೆ ಮನೆಯಲ್ಲಿ ಮತ್ತಾರೂ ಇಲ್ಲ ಎಂದು! ಭಾಸ್ಕರ ತಾನಾಗಿಯೆ ಮೊದಲುಮಾಡಿದ:

" ಏನೋ ಒಂದಿಷ್ಟು ಶಾಲೆಯ ಕೆಲಸವಿತ್ತು ಎಂದು ನಿನ್ನೆ ಬಂದಿದ್ದೆ; ಸುಮ್ಮನೆ ನೋಡಿಕೊಂಡು ಹೋಗೋಣವೆಂದು ಬಂದೆ."

" ಹುಂ...."

" ತಾಯಿಯವರು ಇಲ್ಲವೇನು ಮನೆಯಲ್ಲಿ?"

" ಇಲ್ಲ, ಯಾಕೆ ಅವರನ್ನು ಕಾಣಬೇಕಿತ್ತೇನು?"

" ಹಾಗೇನಿಲ್ಲ. ಇಲ್ಲಿಯವರೆಗೆ ಬಂದಿದ್ದೆ. ಇದ್ದರೆ ಭೆಟ್ಟಿಯಾಗುತ್ತಿತ್ತು."

ತಾಯಿ ಮನೆಯಲ್ಲಿಲ್ಲದ್ದು ಒಳ್ಳೆಯದೇ ಆಯಿತೆಂದು ಭಾಸ್ಕರ ಒಳಗಿನಿಂದಲೇ ಆನಂದಿಸಿರಬೇಕು. ಈ ವಿಚಾರ ಮೋಹಿನಿಯ ಲಕ್ಷ್ಯಕ್ಕೆ ಬಂದ ಕೂಡಲೆ ಅವಳು ತಿಳಿಸಿಯೇ ಬಿಟ್ಟಳು:

" ಇಲ್ಲಿಯೇ ನೆರೆಮನೆಯಲ್ಲಿರಬೇಕು ..ಕರೆಯುತ್ತೇನೆ."

ಭಾಸ್ಕರ ಮೋಹಿನಿಯನ್ನು ಎವೆಯಿಕ್ಕದೆ ನೋಡುತ್ತಿದ್ದ. ಅದೇ ವೇಷ ಭೂಷೆಗಳನ್ನು ಮುಗಿಸಿದವಳಾದ್ದರಿಂದ ಅದ್ವಿತೀಯಳಾಗಿ ಕಾಣುತ್ತಿದ್ದಳು. ಅಲ್ಲದೆ

ಕಳೆದ ಇಪ್ಪತ್ತು ದಿವಸಗಳಲ್ಲಿ ತಾಯಿಯ ವಾತ್ಸಲ್ಯದಲ್ಲಿ ಸುಖವಾಗಿ ಕಾಲ ಕಳೆದವಳಾದ್ದರಿಂದ ಮುಂಬಯಿಯಲ್ಲಿಯಕಿಂತ ಏನೋ ಕೊಂಚ ಮೈ ತುಂಬಿಕೊಂಡವಳಾಗಿಯೂ ಕಾಣುತ್ತಿದ್ದಳು.

ಮೋಹಿನಿ ಭಾಸ್ಕರನನ್ನು ಬಾಗಿಲಲ್ಲಿ ನೋಡಿದಾಗಿನಿಂದ ಒಂದು ಪ್ರಶ್ನೆಯನ್ನು ಬಿಡಿಸಲಾರದಾಗಿದ್ದಳು. ಭಾಸ್ಕರ ಯಾತಕ್ಕೆ ಬಂದಿರಬಹುದು? ಎಂಬುದೇ ಆ ಪ್ರಶ್ನೆ. ಆತ ಹೇಳಿದ ಕಾರಣ ಅಷ್ಟು ಸ್ಪಷ್ಟವಾಗಿರಲಿಲ್ಲ. ಅವಳಿಗೆ ಅದು ನಿಜವಾದ ಕಾರಣವಿರಬೇಕೆಂದೂ ತೋರಲಿಲ್ಲ. ಏನಾದರೂ ಒಂದು ನೆಪ ಹೂಡಿಕೊಂಡು ಆತ ತನಗಾಗಿಯೇ ಇಲ್ಲಿಯವರೆಗೆ ಬಂದಿರಬೇಕೆಂದು ಮೋಹಿನಿ ಸಂಶಯಗೊಂಡಳು. ನಿಜವಾದ ಮಾತೂ ಹಾಗೇ ಇತ್ತು. ಕಳೆದ ಮೂರು ವಾರಗಳಲ್ಲಿ ಭಾಸ್ಕರ ಮೋಹಿನಿಗಾಗಿ ಪುಣೆಗೆ ಬಂದು ಹೋಗಬೇಕೆಂದು ಎಷ್ಟೋ ಬಾರಿ ಯೋಚಿಸಿಕೊಂಡಿದ್ದ. ಆದರೆ ಬಿಡುವು ಸಿಗದ್ದಕ್ಕಾಗಿ ಬರಲಿಕ್ಕಾಗಿರಲಿಲ್ಲ. ಕೊನೆಗೆ ಆನಂದನನ್ನು ಒಂದೆರಡು ಸಲ ಸಂಧಿಸಿ, ಆತನಿಂದ ಮೋಹಿನಿ ಪುಣೆಯಿಂದ ಮುಂಬಯಿಗೆ ಬರುವ ದಿವಸವನ್ನು ಗೊತ್ತುಮಾಡಿಕೊಂಡಿದ್ದ. ಅವಳು ಊರಿಂದ ಹೊರಡುವಾಗ ಅವಳ ಜೊತೆಯಲ್ಲಿ ತನಗೆ ಹೊರಡಲು ಅನುವಾಗಿರಲಿಲ್ಲ. ತಿರುಗಿ ಬರುವಾಗಲಾದರೂ ಆಕೆಯನ್ನು ಸಂಧಿಸಬಹುದೆಂದು ಯೋಚಿಸಿ, ಸರಿಯಾದ ದಿವಸವನ್ನು ತಿಳಿದುಕೊಂಡು ಅಂದು ಮಧ್ಯಾಹ್ನ ಪುಣೆಗೆ ಬಂದಿದ್ದ. ಮೊದಲ ದಿನ ಬಂದಿದ್ದೆನೆಂದು ಹೇಳಿದ್ದೂ ಸುಳ್ಳು. ಮುಂಬಯಿಯಿಂದ ಬಂದು ಪುಣೆ ನಿಲ್ದಾಣದಲ್ಲಿ ಇಳಿದವ ನೇರವಾಗಿ ಮೋಹಿನಿಯ ಮನೆಗೆ ಬಂದಿದ್ದ.

ಆತನೊಡನೆ ಏನು ಮಾತಾಡಬೇಕೆಂಬುದು ಮೋಹಿನಿಗೆ ಬಗೆಹರಿಯದಾಗಿತ್ತು. ಮಾತಾಡುವ ಮನಸ್ಸೂ ಇರಲಿಲ್ಲ. ಕೊನೆಗೆ ಭಾಸ್ಕರನೇ ಕೇಳಿದ:

"ನೀನು ನಾಳೆ ಹೊರಡಬೇಕಲ್ಲವೆ?"

"ಯಾಕೆ?"

"ಪರೀಕ್ಷೆ ಬಂದಿದೆಯಂತಲ್ಲ? ಆನಂದ ಹೇಳುತ್ತಿದ್ದ...."

"ಏನೆಂದು ಹೇಳಿದರು?"

"ಪರೀಕ್ಷೆಗಾಗಿ ನೀನು ಇಂದು ನಾಳೆ ಹೊರಡಬಹುದು ಎಂದು."

"ಹೌದು. ಹೊರಡಬೇಕು...."

"ಯಾವಾಗ?" ಭಾಸ್ಕರ ಅನುಮಾನಿಸುತ್ತಲೇ ಕೇಳಿದ.

ಮೋಹಿನಿಗೆ ಆತನ ಇಂಗಿತ ಸ್ಪಷ್ಟವಾಯಿತು. ನಿಜವಾದುದನ್ನು ಹೇಳಿದರೆ ಭಾಸ್ಕರ ಖಂಡಿತವಾಗಿಯೂ ತನ್ನ ಬೆನ್ನು ಬಿಡುವುದಿಲ್ಲವೆಂದು ಬೇಕೆಂತಲೇ ಬೇರೆಯಾಗಿ ಹೇಳಿದಳು :

" ನಾಡದು ಪರೀಕ್ಷೆ ಪ್ರಾರಂಭ....ನಾಳೆ ಮಧ್ಯಾಹ್ನ ಹೊರಟರೂ ಸರಿ...."

" ಮಧ್ಯಾಹ್ನ ತುಂಬ ಬಿಸಿಲು. ಬೆಳಗ್ಗೆಯೇ ಹೊರಡಬಹುದು...."

ತಾನು ಎಣಿಸಿದ್ದು ತೀರ ಸರಿಯಾಯಿತೆಂದೆನಿಸಿತು ಮೋಹಿನಿಗೆ. ಅವಳು ಅಂದಳು :

" ಮುಂಜಾನೆ ತುಂಬ ಅವಸರ....ಅಲ್ಲದೆ ತಾಯಿ ಮಧ್ಯಾಹ್ನಕ್ಕೇ ಊಟ ಮಾಡಿಕೊಂಡು ಹೋಗು ಅನ್ನುತ್ತಿದ್ದಾಳೆ...."

ಇಬ್ಬರೂ ಮತ್ತೆ ಸುಮ್ಮನಾದರು. ಭಾಸ್ಕರ ಆಕೆಯನ್ನು ನೋಡುತ್ತಲೇ ಇದ್ದ. ಆತನ ಅಂತರಂಗದಲ್ಲಿ ಯಾವ ಯೋಚನೆ ತಾಂಡವವಾಡುತ್ತಿತ್ತೊ! ಕೊನೆಗೆ ಮೋಹಿನಿ ಕೇಳಿದಳು :

" ನೀವು ಯಾವಾಗ ಹೊರಡುತ್ತೀರಿ ? "

" ನನ್ನದೇನೂ ನಿಯಮವಿಲ್ಲ, ನೋಡಬೇಕು. ಇನ್ನೂ ಕೆಲಸವಿದೆ. ಇಂದು ಸಾಯಂಕಾಲ ಕೆಲಸ ಮುಗಿದರೆ ನಾಳೆ ಬೆಳಗ್ಗೆ ಹೊರಡಬೇಕೆಂದಿದ್ದೇನೆ. ನೀವು ಮಧ್ಯಾಹ್ನ ಹೋಗುವಿರಾದರೆ...." ಎಂದು ಅರ್ಧಕ್ಕೇ ತಡೆದ.

" ನನಗಾಗಿ ನೀವು ತಡೆಯಬೇಡಿರಿ. ಸುಮ್ಮನೆ ನಿಮಗೆ ತೊಂದರೆ...."

ಎಂದು ಬಾಯಿಂದ ಉಪಚಾರದ ಮಾತನ್ನು ಹೇಳಿದರೂ ' ನಿಮ್ಮ ಮನಸ್ಸು ನನಗೆ ತಿಳಿದಿದೆ, ಸುಮ್ಮನೆ ನಿಮ್ಮ ದಾರಿಯಿಂದ ನೀವು ಹೋಗಿರಿ ' ಎನ್ನುವ ಭಾವವಿತ್ತು ಅವಳ ಮುಖದಲ್ಲಿ. ಆದರೆ ಭಾಸ್ಕರ ಅಷ್ಟಕ್ಕೇ ಬಿಡುವಂತಿರಲಿಲ್ಲ. ಅವನಂದ :

" ತೊಂದರೆ ಏನದರಲ್ಲಿ ? ನೀವು ಇರುತ್ತೀರಿ. ಇಬ್ಬರೂ ಕೂಡಿಯೇ ಹೋದರಾಯಿತು ! "

" ನನಗೆ ಯಾರ ಕೂಡವೂ ಹೋಗಬೇಕಾಗಿಲ್ಲ. ಬರುವಾಗ ಒಬ್ಬಳೇ ಬರಲಿಲ್ಲವೆ ? "

ಮೋಹಿನಿ ತುಸು ಸಿಡುಕಿನಿಂದಲೇ ಹೇಳಿದಳು. ಭಾಸ್ಕರನಿಗೆ ಮಾತ್ರ ಮುಖಭಂಗವಾದಂತಾಯಿತು. ತಡವರಿಸುತ್ತ ಹೇಳಿದ :

“ನನ್ನ ಮಾತು ಹೇಳಿದೆ. ಅಲ್ಲದೆ, ಆನಂದನೂ ಅಂದಿದ್ದ, ಒಂದು ಮಾತು....”

“ಏನೆಂದು?”

“ನಾನು ತಿರುಗಿ ಇಲ್ಲಿಂದ ಹೊರಡುವಾಗ ನೀವೂ ಬಂದರೆ ಕರೆದುಕೊಂಡು ಬರಬಹುದು ಎಂದು” ಎಂದು ಭಾಸ್ಕರ ಒಂದು ಸುಳ್ಳು ಹೇಳಿದ.

“ಅದು ಸಾಧ್ಯವಿಲ್ಲ—ಅವರು ಹಾಗೆ ಹೇಳಿರುವುದು!”

ಭಾಸ್ಕರನಿಗೆ ಮುಖದ ಮೇಲೆ ಹೊಡೆದಂತಾಯಿತು. ಇದುವರೆಗಿನ ಮಾತಿನಲ್ಲಿಯ ಶಾಂತಭಾವ ಇಬ್ಬರಮಟ್ಟಿಗೂ ತೋರಿಕೆಯದಾಗತ್ತೆಂಬುದು ಒಬ್ಬರೊಬ್ಬರಿಗೆ ತಿಳಿಯುವಂತಾಗಿತ್ತು. ಪೆಟ್ಟು ತಿಂದ ಭಾಸ್ಕರನ ಸ್ಥೈರಣೆ ಸರಿಯುತ್ತಿತ್ತು. ಆದರೆ ಆತನಿಗೆ ಏನು ಮಾಡಲೂ ಸಾಧ್ಯವಿರಲಿಲ್ಲ. ಅವನಂದ:

“ನಿಮಗೆ ನನ್ನ ಮೇಲೆ ವಿಶ್ವಾಸವಿಲ್ಲ. ಆದರೆ ನನ್ನಲ್ಲಿ ವಿಶ್ವಾಸವಿಡದೆ....”

“ಇಡದಿದ್ದರೆ ಏನು?”

“ನಿಮಗೆ ಗತಿಯಿಲ್ಲ. ಇಷ್ಟು ಮಾತ್ರ ತಿಳಿದುಕೊಳ್ಳಿರಿ....”

ಮೋಹಿನಿಗೆ ತಡೆಯಲಾರದಾಗಿತ್ತು. ಸಿಟ್ಟಿನಿಂದಲೇ ಹೇಳಿದಳು:

“ನನಗೆಲ್ಲ ಗೊತ್ತಿದೆ, ನಿಮ್ಮ ಮನಸ್ಸು. ನೀವು ಬಂದಿದ್ದು ಯಾಕೆ ಎಂಬುದೂ ಗೊತ್ತಿದೆ. ಆ ನಿಮ್ಮ ವಿಶ್ವಾಸದ ವಿಚಾರ ಆಮೇಲೆ ಮಾಡೋಣ ವಂತೆ....ಈಗ ಮತ್ತೇನು ಕೆಲಸ? ನನಗೆ ಹೊರಗೆ ಹೋಗಬೇಕಾಗಿದೆ....ತಾಯಿ ಯನ್ನು ಕರೆಯುತ್ತೇನೆ. ಅವಳ ಕೂಡ ನೀವು ಮಾತನಾಡಬಹುದು” ಎಂದು ಬಾಗಿಲೆಡೆಗೆ ಹೊರಟಳು.

“ಬೇಡ, ಅವರನ್ನೇತಕ್ಕೆ ಕರೆಯುತ್ತೀರಿ? ಮಾತಾಡುತ್ತ ಕುಳಿತಿರ ಬಹುದು. ನನ್ನದೇನೂ ಯಾವ ಕೆಲಸವೂ ಇಲ್ಲ. ಸುಮ್ಮನೆ ನೋಡಿಕೊಂಡು ಹೋಗೋಣವೆಂದೆ, ಅಷ್ಟೆ”

ಎಂದು ಹೊರಡಲನುವಾದ.

ಮೋಹಿನಿಯೆಂದುಕೊಂಡಳು, ‘ನನಗೆ ಗೊತ್ತು, ನಿಮ್ಮ ನೋಡಿಕೊಂಡು ಹೋಗುವುದು. ಎಷ್ಟು ಸಲ ನೋಡಿಲ್ಲ, ಮುಂಬಯಿಯಲ್ಲಿದ್ದಾಗ?’ ಎಂದು. ಆದರೆ ಭಾಸ್ಕರ ಹೊರಟದ್ದನ್ನು ನೋಡಿ ಸಮಾಧಾನ ಪಡೆಯುತ್ತಿದ್ದ ಮನಸ್ಸು ಬಾಯಿಂದ ಉಪಚಾರಕ್ಕಾಗಿ ಕೇಳಿತು:

" ಹಾಗಾದರೆ, ಹೊರಟೇಬಿಡುತ್ತೀರಾ ? "

" ಹುಂ...." ಎಂದವನೇ ಭಾಸ್ಕರ ಹೊರಟ. ಹೊರಡುತ್ತಲೇ ಮತ್ತೆ ಕೇಳಿದ :

" ಹಾಗಾದರೆ ನಾಳೆ ಮಧ್ಯಾಹ್ನ ಹೊರಡುತ್ತೀರಾ ನೀವು ? "

" ಹುಂ...."

" ನನ್ನದೇನೂ ನಿಯಮವಿಲ್ಲ, ನೋಡಬೇಕು...." ಎಂದು ಔಪಚಾರಿಕ ವಾಗಿ ಹೇಳಿ ಬೀದಿಯಲ್ಲಿ ನಡೆದುಹೋದ. ಅಂತೂ ಮಧ್ಯಾಹ್ನದ ರೈಲೆಂದು ಹೇಳಿ ಶನಿಯನ್ನು ತೊಲಗಿಸಿದ ಹಾಗಾಯಿತೆಂದು ಮೋಹಿನಿ ಸಮಾಧಾನ ಪಡುತ್ತಿದ್ದಳಾದರೆ ಅಂತೂ ಆಕೆ ಹೊರಡುವ ರೈಲನ್ನಾದರೂ ತಿಳಿದುಕೊಂಡಾ ಯಿತಲ್ಲ ಎಂದು ಭಾಸ್ಕರ ಸಮಾಧಾನಪಡುತ್ತಿದ್ದ ! 'ಎಲ್ಲಿ ತಪ್ಪಿಸಿಕೊಳ್ಳ ಬಹುದು ? ನಾಳೆ ಮಧ್ಯಾಹ್ನದ ರೈಲಿನಲ್ಲಿ ಇದ್ದೇ ಇರುವಳು !' ಎಂದೂ ಹೇಳಿ ಕೊಳ್ಳುತ್ತಿದ್ದ.

ಮೋಹಿನಿ ಪೇಟೆಯಿಂದ ತಿರುಗಿ ಬಂದಾಗ ತಾಯಿ ಬಾಗಿಲಲ್ಲಿ ಕಾಯು ತ್ತಿದ್ದಳು. ಮಗಳು ಮರುದಿನ ಬೆಳಗ್ಗೆ ಹೊರಡುವವಳಿದ್ದರೂ ಅಗಲಿಕೆ ತಾಯಿಯ ಹೃದಯವನ್ನು ಆಗಲೇ ಆವರಿಸಿದಂತಿತ್ತು. ಹೊರಗೆ ಮುಚ್ಚಂಜೆ ಕವಿಯುತ್ತಿತ್ತು—ತಾಯಿಯ ಹೃದಯದಲ್ಲಿಯ ವೇದನೆಯಂತೆ !

" ಮೋಹಿನಿ, ಎಷ್ಟು ಹೊತ್ತು ಮಾಡಿದೆ, ಕತ್ತಲೆಯಾಗಿ ಹೋಯಿತಲ್ಲ. ಏನು ಮಾಡಿದೆ, ಇಷ್ಟು ಹೊತ್ತು ? "

" ಏನು ಮಾಡಲಿ ? ಬರುವಾಗ ಬಸ್ಸಿಗಾಗಿ ಕಾದು ಕಾದು ನಾಕಾಗಿ ಹೋಯಿತು. ಕೊನೆಗೆ ನಡೆದೇ ಬಂದುಬಿಟ್ಟೆ ! "

" ಪಾಪ ! ಎಷ್ಟು ದೂರ ನಡೆದೆ, ಮಗು ! ಕಾಲು ನೋಯುತ್ತಿರಬೇಕು, ಅಲ್ಲವೆ ? " ಎಂದಳು ತಾಯಿ. ಅವಳ ಕಳಕಳಿಯ ಹೃದಯದ ಉಸಿರನ್ನು ನೆನೆದು ಮೋಹಿನಿಗೂ ದುಃಖವೆನಿಸಿತು. ತನ್ನ ಹೊರತು ತನ್ನ ತಾಯಿಗೆ ಯಾರಿದ್ದಾರೆ ? ಎಂದು. ಆದರೆ ಆ ದುಃಖದಲ್ಲಿ ಸುಖವಿತ್ತು. 'ಏನು ಮಾಡಿದೆ, ಇಷ್ಟು ಹೊತು ?' ಎಂಬ ಪ್ರಶ್ನೆ ಮುಂಬಯಿಯಲ್ಲಿ ವಾಡಿಕೆಯಾದ ಪ್ರಶ್ನೆ. ಅದನ್ನೇ ತಾಯಿ ಕೇಳಿದ್ದರು. ಕೇಳುವುದರಲ್ಲಿಯ ಭಾವ ಯಾವುದಿತ್ತು ? 'ಎಷ್ಟು ದೂರ ನಡೆದೆ, ಮಗು !' ಎಂದಿದ್ದಳು. ಮುಂಬಯಿಯಲ್ಲಿ ಹೀಗೆ ತನಗೆ

ಹೇಳುವವರಾರು? ಎಂದು ಕೇಳಿಕೊಂಡಾಗ ಮೋಹಿನಿಯ ಕಣ್ಣಲ್ಲಿ ನೀರೊಡೆಯಿತು. ತಾಯಿಮಕ್ಕಳ ಹೃದಯಗಳು ಒಂದೇ ತಂತಿಯನ್ನು ಮೀಟುತ್ತಿರುವಂತಿತ್ತು. ತಾಯಿ ಕೇಳಿದಳು :

" ನಾಳೆ ನೀನು ಹೋಗಲೇಬೇಕೆ, ಮೋಹಿನಿ ? "

" ನಾಡದು ಪರೀಕ್ಷೆಗಾರಂಭ. ನಾಳೆ ಹೊರಡದಿದ್ದರೆ ಹೇಗೆ ? "

" ನಾಳೆ ಮಧ್ಯಾಹ್ನವಾದರೂ ಹೊರಡು. ಊಟ ಮಾಡಿಕೊಂಡಾದರೂ ಹೋಗಬಹುದು ! "

" ಬೇಡಮ್ಮ, ಬೆಳಗ್ಗೆ ಹೊರಟುಬಿಡುತ್ತೇನೆ. ನಾಲ್ಕಾರು ಗಂಟೆಯಲ್ಲಿ ಏನಂಥ ಅಂತರ ! " ತಾಯಿ ಸುಮ್ಮನಾದಳು. ಒಂದೂವರೆ ವರ್ಷದಲ್ಲಿ ಒಮ್ಮೆ ಕೂಡ ಮೋಹಿನಿಯ ಮುಖವನ್ನು ನೋಡಿರದ ತಾಯಿಯ ಹೃದಯ ಇನ್ನು ನಾಲ್ಕು ಗಂಟೆ ಹೆಚ್ಚು ತನ್ನ ಮಗಳು ತನ್ನ ಹತ್ತಿರವೇ ಇರಲಿ ಎಂದುಕೊಂಡಿದ್ದರೆ ಆಶ್ಚರ್ಯವಿರಲಿಲ್ಲ. ಮೋಹಿನಿಗೂ ತಾಯಿಯ ಹೃದಯದ ಅಳಲು ತಿಳಿದಿತ್ತು. ಆದರೆ ಮಧ್ಯಾಹ್ನದ ರೈಲಿಂದ ಕೂಡಲೆ ಭಾಸ್ಕರನ ನೆನಪಾಗಿ ಆ ವಿಚಾರವನ್ನು ತಟ್ಟನೆ ದಬ್ಬಿಗೊಳಿಸಿದ್ದಳು. ಸಂಜೆ ಭಾಸ್ಕರ ಬಂದುಹೋಗಿರದಿದ್ದರೆ ಮೋಹಿನಿ ಮರುದಿನ ಮಧ್ಯಾಹ್ನದ ರೈಲಿನಿಂದ ಹೊರಡಲು ಒಪ್ಪುತ್ತಲೂ ಇದ್ದಳು.

ತಾಯಿಯ ಪ್ರತಿಯೊಂದು ಮಾತಿನಲ್ಲಿಯೂ ತುಂಬಿ ತುಳುಕುತ್ತಿದ್ದ ಉದಾಸೀನ ಭಾವನೆ ಮೋಹಿನಿಗೆ ತಡೆಯದಾಗಿ ಕೇಳಿದಳು :

" ಯಾಕಮ್ಮ ? ಇಷ್ಟೇಕೆ ಚಡಪಡಿಸುತ್ತಿದ್ದೀ ? ಇಂದು ಬೆಳಗಿನಿಂದಲೂ ನೋಡುತ್ತಿದ್ದೇನೆ."

" ಏನೋ ಬಹಳ ದಿವಸಗಳನಂತರ ಬಂದಿದ್ದಿ. ಇನ್ನು ನಾಲ್ಕು ದಿನ ಇರಬಹುದು ಅಂದುಕೊಂಡಿದ್ದೆ ."

" ಹೌದಮ್ಮ, ನಾನಾದರೂ ಏನು ಮಾಡಲಿ ? ಪರೀಕ್ಷೆಗೆ ಹೋಗದಿದ್ದರೆ ಇಷ್ಟು ದಿವಸ ಕಷ್ಟಪಟ್ಟು, ಹಟತೊಟ್ಟು ಓದಿದ್ದು ವ್ಯರ್ಥ. ನನಗಾದರೂ ಹೊರಡಲು ಮನಸ್ಸಿದೆಯೆನ್ನುತ್ತೀಯಾ ? "

" ಈ ಇಪ್ಪತ್ತು ದಿವಸ ಹೇಗೆ ಹೋದವು ಗೊತ್ತಾಗಲಿಲ್ಲ, ಮೋಹಿನಿ."

" ನನಗೂ ಅಷ್ಟೇ. ಮುಂಬಯಿಯಲ್ಲಿ ಎಷ್ಟು ಕೆಲಸವಿದ್ದರೂ ದಿನಗಳನ್ನು ಎಣಿಸಿದಂತಾಗುತ್ತದೆ. ಇಲ್ಲಿ ಬಂದಾಗಿನಿಂದ ನಾನಂತೂ ಏನೂ ಮಾಡಿರ

ದಿದ್ದರೂ ದಿವಸ ಎಷ್ಟು ಬೇಗ ಕಳೆದುಹೋದವು."

"ನೀನು ಹೊರಟುಹೋಗುತ್ತೀ ಅದಕ್ಕೇನೂ ದುಃಖವಿಲ್ಲ, ಮೋಹಿನಿ, ನನಗೆ. ಇಲ್ಲಿ ಇದ್ದು ಎಷ್ಟು ದಿವಸ ಪೂರೈಸೀತು ? ಆದರೆ ಮುಂದೆ ನಿನ್ನನ್ನು ಹೇಗೆ ಎಂದು...."

"ಏನು ? ಆದದ್ದಾಗುತ್ತದಲ್ಲ. ಅದಕ್ಕೆ ಯೋಚನೆ ಮಾಡಿದರೆ ಏನಾಗ ಬೇಕು ?"

"ನಿನ್ನ ಗಂಡನದೂ ಪರೀಕ್ಷೆ ಮುಗಿಯಲಿ. ಆಮೇಲೆ ಮತ್ತೆ ಹೇಳಿ ನೋಡು. ಮನವೊಲಿಸುವ ಪ್ರಯತ್ನಮಾಡು."

'ಈಗ ಎಷ್ಟು ಸಲ ಪ್ರಯತ್ನಮಾಡಲಿಲ್ಲ ? ಇನ್ನೇನಾಗಬೇಕಾಗಿದೆ ? ದೈವವೇ ಅವರ ಮನಸ್ಸನ್ನು ತಿರುಗಿಸಬೇಕು' ಎಂದು ಮೋಹಿನಿ ಮನಸ್ಸಿನಲ್ಲಿ ಅಂದುಕೊಂಡರೂ ಆ ಮಾತು ಹೇಳಿ ತಾಯಿಗೆ ಯಾಕೆ ಅಸಮಾಧಾನವ ನ್ನುಂಟುಮಾಡಬೇಕು ಎಂದು ಸುಮ್ಮನೆ ಉಸಿರಿದಳು :

"ಹುಂ.... ನೀನು ಹೇಳಿದಂತೆ ಮಾಡುವೆ."

"ಎಷ್ಟಾದರೂ ಗಂಡ. ನೀನು ಅವರನ್ನು ಅಂಕಿತದಲ್ಲಿ ತರಬಹುದು—"

"ಅವರದಷ್ಟೇ ಮಾತಾಗಿದ್ದರೆ ಇಷ್ಟಕ್ಕೆ ಬರುತ್ತಲೇ ಇರಲಿಲ್ಲ. ಉಳಿದವರ ಕಾಯಕಕ್ಕಾಗಿಯೇ ಈ ಎಲ್ಲ ತೊಂದರೆ...."

"ಅದೇ ಅವರಿಗೆ ತಿಳಿಯುವಂತೆ ಮಾಡು. ಹೇಳಿ ನೋಡು...."

"ಹೇಳಿದರೆ ಅವರಿಗೆ ವಿಪರೀತ ಕೋಪ....ಚಾಡಿ ಹೇಳುತ್ತಿದ್ದೇನೆ ಎಂದು...."

"ನಿಜವಾಗಿದ್ದುದನ್ನು ಹೇಳಲಿಕ್ಕೇನು ಭಯ ?"

"ಅವರಿಗೆ ವಿಶ್ವಾಸವಾಗಬೇಕಲ್ಲ ?"

"ಆದೀತು. ಎಷ್ಟು ದಿನ ನಡೆಯಬೇಕು ?.... ನೀನೆ ಸಾಧ್ಯವಾದಷ್ಟು ತಗ್ಗಿ ನಡೆ...." ಎಂದು ಇಬ್ಬರೂ ಸುಮ್ಮನಾದರೂ ಮೋಹಿನಿಗೆ ಮತ್ತೆ ವಿಚಾರ ಬಂದುಹೋಯಿತು : 'ತಗ್ಗಿ ನಡೆಯುವುದೆಂದರೆ ಹೇಗೆ ? ಅವರೆಲ್ಲರಿಗೆ ಕಾಲು ಕಸವಾಗಿ ಬೀಳಲು ಒಪ್ಪಿದರೆ ಮಾತ್ರ ಅದು ಸಾಧ್ಯ. ಅದು ನನಗೆ ಅಸಾಧ್ಯ' ಎಂದು. ಆದರೆ ತಾಯಿ ನೊಂದುಕೊಂಡಾಳೆಂದು ಮತ್ತೆ ಸುಮ್ಮನಾದಳು.

ರಾತ್ರಿ ಊಟಕ್ಕೆ ಬಡಿಸುತ್ತಿದ್ದಾಗ್ಗೆ ಕೂಡ ನಾಲ್ಕು ತುತ್ತು ಹೆಚ್ಚೇ

ಆಯಿತು. ಮೋಹಿನಿ ಹೇಳಿದಳು :

"ನೀನು ಊಟಕ್ಕೆ ಬಡಿಸಿದೆಯೆಂದರೆ ಯಾವಾಗಲೂ ಹೀಗೆಯೇ ನೋಡಮ್ಮ. ಹೊಟ್ಟೆ ಒಡೆದುಹೋಗುವ ಹಾಗಾಗುತ್ತಿದೆ, ಈ ಹೊತ್ತಂತೂ."

"ಆಯ್ತು, ನಿನ್ನ ಮಾತು. ಏನೂ ಊಟವನ್ನೇ ಮಾಡಲಿಲ್ಲ."

"ಇನ್ನೂ ಎಷ್ಟು ಮಾಡಬೇಕು ಅಂತಿದ್ದೀಯಮ್ಮ ಹಾಗಾದರೆ ?...."

"ಏನೋ ಬಡಿಸಿದೆ. ಬರೀ ಮಾತನಾಡುತ್ತಲೇ ಇದ್ದಿ. ಇಂದು ಒಂದು ದಿವಸವಾದರೂ ಹೊಟ್ಟೆ ತುಂಬುವ ಹಾಗೆ ಉಣ್ಣು ಮಗು. ಮತ್ತೆ ನಾಳಿನಿಂದ ಇದ್ದೇ ಇದೆಯಲ್ಲ...."

ಮೋಹಿನಿಗೆ ಕಂಠ ಬಿಗಿಯಿತು. ತಾಯಿಯ ಮಾತು ನಿಜ ಎನಿಸಿತು. ಒಂದು ತುತ್ತು ಹೆಚ್ಚಾಗಿ ಒಲುಮೆಯಿಂದ ಉಣ್ಣು ಎಂದು ಹೇಳುವವರು ನಾಳೆ ಯಿಂದ ಮುಂಬಯಿಯಲ್ಲಿ ಯಾರು ? ಎಂಬ ವಿಚಾರ ಅವಳ ಹೃದಯವನ್ನು ಕೊರೆಯಿತು. ಆ ಭಾವನೆಯ ಆವೇಗ ಕಡಿಮೆಯಾದನಂತರ ತಾಯಿಗೆ ಸಮಾಧಾನವಿರಲೆಂದು ಮೋಹಿನಿ ಹೇಳಿದಳು :

"ಯಾಕೆ ಚಿಂತೆ ಮಾಡ್ತೀಯಮ್ಮ ? ಎಲ್ಲವೂ ಸರಿಯಾದೀತು. ಅವರ ಪರೀಕ್ಷೆಯಂತೂ ಮುಗಿಯಲಿ, ಆಮೇಲೆ ನೋಡೋಣ. ಎಲ್ಲವೂ ಸರಿ ಯಾದೀತು. ."

"ಆಗಲಮ್ಮ, ನಿನ್ನ ಮಾತು ನಿಜವಾಗಲಿ. ಸತ್ಯನಾರಾಯಣನಿಗೆ ಪೂಜೆ ಮಾಡಿಸುತ್ತೇನೆ."

"ಸುಖವಾಗಿ ಇರಬೇಕು ಮಗು, ನೀನು.. .ನೀನು ಸುಖವಾಗಿರಬೇಕು ಎಂಬುದೊಂದೇ ಇನ್ನು ನನಗೆ ಉಳಿದದ್ದು...." ಎಂದು ಧಾರಾಳವಾಗಿ ಕಣ್ಣೀರು ಹಾಕಿದಳು. ಮೋಹಿನಿಗೂ ಕಣ್ಣೀರು ತಡೆಯುವುದಾಗಲಿಲ್ಲ. ತಾಯಿ ಮಕ್ಕ ಳಿಬ್ಬರೂ ಪರಿತಪಿಸಿದರು. ಸುಖಪೂರ್ಣವಾದ ಭವಿಷ್ಯಕ್ಕಾಗಿ ಬಯಸಿದರು, ಮೊರೆಯಿಟ್ಟರು, ದೇವರಲ್ಲಿ ಬೇಡಿಕೊಂಡರು. ಭವಿಷ್ಯ ತಿಳಿಯಲಾರದ್ದಕ್ಕೆ ಚಿಂತಿಸಿದರು, ಎಷ್ಟೋ ಪರಿಯಿಂದ. ಒಬ್ಬರಿಂದೊಬ್ಬರು ಸಮಾಧಾನ ತಂದು ಕೊಂಡರು.

* * * *

ಮೋಹಿನಿ ಮತ್ತು ಆಕೆಯ ತಾಯಿ ಭವಿಷ್ಯವನ್ನು ಕುರಿತು ಚಿಂತಿಸು

ತ್ತಿರುವಂತೆ ಇತ್ತ ಆನಂದನೂ ಅದನ್ನೇ ಯೋಚಿಸುತ್ತಿದ್ದ. ಬೋರಿವಲಿಯ ಕಡೆಗೆ ಸಾಗಿದ ಲೋಕಲ್ಲೊಂದರಲ್ಲಿಯ ಮೂಲೆಯಲ್ಲಿಯ ಆಸನದಲ್ಲಿ ಕುಳಿತು ಒಂದೇ ಒಂದು ಪ್ರಶ್ನೆಯನ್ನು ಕೇಳಿಕೊಳ್ಳುತ್ತಿದ್ದ : 'ಪರೀಕ್ಷೆಯೂ ಬಂದಿತು. ಇನ್ನೊಂದು ಹತ್ತು ದಿವಸಗಳಲ್ಲಿ ಮುಗಿದು ಹೋಗುವುದು. ಆಮೇಲೆ ?' ಎಂದು. 'ಅಕ್ಕನ ಮನೆಯಲ್ಲಿದ್ದು ಮತ್ತೆ ಮೊದಲಿನಂತೆ ಪ್ರತಿದಿವಸವೂ ಏನಾದರೂ ಒಂದು ಪ್ರಕರಣವನ್ನು ನಡೆಯಗೊಡದೆ ಸುಮ್ಮನೆ ತಾವಿಬ್ಬರೂ ಎಲ್ಲಿಯಾದರೂ ಬೇರೆಯಾಗಿ ಬಿಡಾರ ಹೂಡಿದರೆ? ಆದರೆ ಇಷ್ಟು ದಿವಸ ಅಕ್ಕನಲ್ಲಿದ್ದುಕೊಂಡು ಅವಳಿಂದ ಪೋಷಣೆ ಹೊಂದಿ, ಆಕೆಯ ಗಂಡನಿಂದಲೇ ತನಗಿಷ್ಟ ಕೆಲಸವನ್ನು ಸಂಪಾದಿಸಿದಾಗ ಈಗ ಒಮ್ಮೆಲೆ ಬೇರೆಯಾಗಿ ಇರಹೋಗುವುದು ಹೇಗೆ? ನಾರಾಯಣರಾಯರು ಆ ಮಾತಿಗೆ ಒಪ್ಪಬಹುದು. ಆದರೆ ಆ ಒಪ್ಪಿಗೆ, ಒಪ್ಪಿಗೆ ಯಾಗಿರದೆ ಬೇಸರದ ಕೊನೆಯ ಮಾತಾಗಿತ್ತು. ಒಂದು ವೇಳೆ ಏನಾದರೂ ಆಗಲಿ ಎಂದು ಬೇರೆಯಾಗಿ ಇರುವುದೇ ಆದರೆ ಮನೆಯೊಂದು ಸಿಗಬೇಕಲ್ಲ. ಅದಂತೂ ಅಸಾಧ್ಯವಾಗಿತ್ತು. ಎಂದಮೇಲೆ ಮುಂದೇನು?' ಆನಂದ ಎಷ್ಟು ರೀತಿಯಿಂದ ಯೋಚಿಸಿದರೂ ವಿಚಾರ ಯಾವ ನಿರ್ಣಯಕ್ಕೂ ಸಿಲುಕುತ್ತಿರ ಲಿಲ್ಲ. ನಡುನಡುವೆ ಮೋಹಿನಿಯ ಮೂರ್ತಿ ಕಣ್ಣೆದುರು ನಿಲ್ಲುತ್ತಿತ್ತು. ಮನಸ್ಸು ಅವಳ ಸಾನ್ನಿಧ್ಯಸುಖವನ್ನು ಬಯಸುತ್ತಿತ್ತು. 'ಆಕೆಯನ್ನು ನೋಡಿ ಮೂರು ವಾರಗಳಾಗಿದ್ದವು. ಮರುದಿನ ಬೆಳಗ್ಗೆ ಬರುವಳು, ನಿಲ್ದಾಣಕ್ಕೆ ಹೋಗೋಣ' ಎಂದುಕೊಳ್ಳುತ್ತಿರುವಾಗಲೇ ರೈಲು ದಾದರ್ ನಿಲ್ದಾಣವನ್ನು ಸೇರಿತು.

ವಿಪರೀತ ಗದ್ದಲ. ಇಳಿಯುವವರು ಹತ್ತು ಜನರಾದರೆ ಒಳಗೆ ಘುಮುಕ ಲೆಳಸುವವರು ಇಪ್ಪತ್ತು ಜನ. ಆನಂದ ಕುಳಿತಲ್ಲಿಂದಲೆ ಜನರ ತಿಕ್ಕಾಟವನ್ನು ನೋಡುತ್ತಿದ್ದ. ಹತ್ತಿರದವರಿಬ್ಬರು ಮೂವರು ಇಳಿದು ಹೋಗಿದ್ದರಿಂದ ಹಾಯಾಗಿ ಕಾಲು ಬಿಡಿಸಿಕೊಂಡು ಕುಳಿತ. ಜನ ಒಳಗೆ ಘುಮುಕುತ್ತಲೇ ಇತ್ತು. ಹೆಣ್ಣುಮಕ್ಕಳು ತಾವು ಹೆಣ್ಣೆಂಬುದನ್ನು ಮರೆತು, ಗಂಡಸರು ಬದಿಯಲ್ಲಿ ಹೆಂಗಸರಿದ್ದಾರೆಂಬುದನ್ನು ತಿಳಿದೋ ತಿಳಿಯದೆಯೋ ದುರ್ಲಕ್ಷಿಸಿ ಒಳಗೆ ಘುಮುಕುತ್ತಿದ್ದರು. ಆನಂದ ನೋಡುತ್ತಲೆ ಇದ್ದ. ಗದ್ದಲ ಕಡಿಮೆಯಾದ ಮೇಲೆ ಸಿಧಾನವಾಗಿ ಒಳಗಡೆ ಬರುತ್ತಿದ್ದ—ವಸಂತ! ಆನಂದ ಕುಳಿತಲ್ಲಿಂದಲೆ ಕರೆದ :

" ಹಲ್ಲೊ, ವಸಂತರಾವ್...."

" ಓ!...."

" ಬನ್ನಿ, ಈ ಕಡೆ ಬನ್ನಿ."

" ಎಲ್ರಿ, ಜಾಗವೇ ಇಲ್ಲವಲ್ಲ?...."

" ಬನ್ನಿ ಬನ್ನಿ, ಕೂಡೋಣ ಇಷ್ಟರಲ್ಲೇ..." ಎಂದು ಸರಿದು ಸ್ಥಳ ಮಾಡಿದ. ನಡುವಿನ ದಾರಿಯಲ್ಲಿಯ ಮಾನವಸಮುದ್ರವನ್ನು ಈಜಿ ವಸಂತ ಆನಂದನ ಪಕ್ಕದಲ್ಲಿ ತನಗೆ ಸಿಕ್ಕ ಬೆಂಚಿನ ತುದಿಯಲ್ಲಿಯ ಅರ್ಧ ಅಂಗುಲವನ್ನು ಆಕ್ರಮಿಸಿದ.

" ಅದೇನು? ಇಷ್ಟು ತಡವಾಯಿತು ಇವತ್ತು?" ಎಂದು ಕೇಳಿದ ಆನಂದ.

" ತಡವೇನು? ಹೆಚ್ಚುಕಡಿಮೆ ಇದೇ ಹೊತ್ತು ನಾನು ತಿರುಗಿ ಹೋಗುವುದು. ಊಟ ಮಾಡಿಕೊಂಡು ಹೊರಡಬೇಕಾದರೆ ಇಷ್ಟು ವೇಳೆ ಆಗಿಯೇ ಆಗುತ್ತದೆ." ವಸಂತನಿಗೆ ವಿಚಿತ್ರವೆನಿಸುತ್ತಿತ್ತು. ಮೋಹಿನಿ ಈತನ ಹೆಂಡತಿ. ತನ್ನ ಕೂಡ ಎಷ್ಟು ವಿಶ್ವಾಸದಿಂದ ಮಾತನಾಡಿ ತನ್ನ ದುಃಖವನ್ನು ತೋಡಿಕೊಂಡವಳು. ಈತನಿಗಿಂತ ಆಕೆಯೇ ತನಗೆ ಯಾವ ಕಾರಣಕ್ಕಾಗಿಯೋ ಸಮೀಪವೆನಿಸುತ್ತಿದ್ದಳು. ಆನಂದನನ್ನು ತಾನು ಎಂದೋ ನೋಡಬೇಕೆಂದು ಅಂದುಕೊಂಡಿದ್ದ. ಮೋಹಿನಿಗೆ ಮಾತೂ ಕೊಟ್ಟಿದ್ದ. ಆದರೆ ಇಂದು ಅಕಸ್ಮಾತ್ತಾಗಿ ಭೆಟ್ಟಿಯಾದ ಆನಂದ. ವಸಂತನೆಂದ:

" ಏನು? ತೀರ ಅಕಸ್ಮಾತ್ತಾಗಿ ಭೇಟಿಯಾಯಿತು. ಎಷ್ಟೋ ದಿವಸ ಆಯಿತು ನಿಮ್ಮನ್ನು ನೋಡಿ. ಒಮ್ಮೆ ನಾನೇ ಬರೋಣ ಎಂದಿದ್ದೆ ನಿಮ್ಮ ಕಡೆಗೆ."

" ಬರಬಹುದಾಗಿತ್ತಲ್ಲ. ನಾನೂ ನಿಮ್ಮನ್ನು ನೋಡಿ ತಿಂಗಳ ಮೇಲಾಗಿ ಹೋಗಿರಬೇಕು. ನೀವೆಲ್ಲಿಯಾದರೂ ರಜೆ ಪಡೆದುಕೊಂಡು ಹೋಗಿದ್ದೀರೇನೋ ಅಂದುಕೊಂಡಿದ್ದೆ."

" ಎಲ್ಲಿಯ ರಜೆ. ಒಂದೇ ಚಕ್ರ. ರೂಟಿನ್ ಲೈಫ್ ನಡೆದಿದೆ...."

" ಅದು ನಿಜ. ನಾನೂ ಎಲ್ಲಿಯೂ ಈಗ ವಿಶೇಷ ಹೊರಗೂ ಅಡ್ಡಾಡಿಲ್ಲ. ಪರೀಕ್ಷೆ ಬಂದುಬಿಟ್ಟಿತು."

" ಎಂದು ನಿಮ್ಮ ಪರೀಕ್ಷೆ? "

" ಮುಂದಿನ ವಾರ."

" ಹೇಗೆ ಸಿದ್ಧತೆ? "

" ಸಿದ್ಧತೆಯೇನು? ಹೀಗೆಯೇ. ಎಷ್ಟು ಮಾಡಿದರೂ ಅಷ್ಟೇ. ಮನಸ್ಸಿಗೆ ಸಮಾಧಾನವಿಲ್ಲ. ಎಷ್ಟಾದರೂ ಡಿಪಾರ್ಟ್‌ಮೆಂಟಲ್ ಪರೀಕ್ಷೆ. ತಮಗೆ ಬೇಕಾದಷ್ಟು ಜನರನ್ನೇ ಅವರು ಹೆಚ್ಚುಕಡಿಮೆ ಪಾಸುಮಾಡುವರು. ಏನೋ ದೈವ ಚೆನ್ನಾಗಿದ್ದರೆ ಈ ಸಲ.... ನೋಡಬೇಕು."

" ಓ, ಸುಮ್ಮನೆ ನಿರಾಶೆಪಡಬೇಡಿರಿ. ಖಂಡಿತವಾಗಿಯೂ ಪಾಸಾಗುವಿರಿ " ಎಂದು ಸಲಿಗೆಯಲ್ಲಿ ಹೇಳಿದ ವಸಂತ. ಆನಂದನಿಗೂ ಆ ಸಲಿಗೆಯ ಮಾತು ಸೇರಿತು. ವಸಂತನನ್ನು ನೋಡಿದಾಗಿನಿಂದ ಮೋಹಿನಿ ಆತನೊಡನೆ ಇಪ್ಪತ್ತು ದಿವಸಗಳ ಹಿಂದೆ ಮಾತನಾಡಿದ ವಿಷಯವನ್ನು ಭಾಸ್ಕರ ತನಗೆ ಹೇಳಿದ್ದು ನೆನಪಾಗಿ ಅದರ ವಿಚಾರವನ್ನು ಅವನಿಂದ ತಿಳಿಯಲು ಈ ಸಲಿಗೆಯ ಮಾತು ಸಹಾಯಕಾರಿಯಾದೀತೆಂದುಕೊಂಡು ಯೋಗ್ಯವಾದ ಸಂದರ್ಭಕ್ಕಾಗಿ ಆನಂದ ಮುನ್ನೋಡುತ್ತಿದ್ದ. ವಸಂತನಿಗಾದರೂ ಆನಂದನೊಡನೆ ಮೋಹಿನಿಯನ್ನು ಕುರಿತು ಎಷ್ಟೋ ಮಾತನಾಡಬೇಕಾಗಿತ್ತು. ಮುಖ್ಯವಾಗಿ, ಅವಳ ಬಗೆಯಲ್ಲಿ ಏನಾದರೂ ನಿರ್ದಿಷ್ಟವಾದ ಸಮಾಚಾರವನ್ನು ಸಂಗ್ರಹಿಸಬೇಕಾಗಿತ್ತು.

" ಮತ್ತೇನು ಸಮಾಚಾರ, ವಸಂತರಾವ್...." ಎಂದ ಆನಂದ.

" ನನ್ನದೇನು ಸಮಾಚಾರ. ಆಗಲೇ ಹೇಳಿದೆನಲ್ಲ, ರೂಟಿನ್ ಸಾರ್ಟ್ ಆಫ್ ಲೈಫ್ (Routine sort of life)....ಬೆಳಗ್ಗೆ ಬೋರಿವಲಿಯಿಂದ ಚರ್ಚ್‌ಗೇಟ್....ಮಧ್ಯಾಹ್ನ ಆಫೀಸು, ಸಂಜೆ ಮತ್ತೆ ಚರ್ಚ್‌ಗೇಟಿನಿಂದ ಬೋರಿವಲಿ...."

" ತುಂಬ ಬೇಸರ ಬಂದು ಹೋಗುತ್ತದೆ, ಒಮ್ಮೊಮ್ಮೆ. ಈಗ ಒಂದು ತಿಂಗಳಿಂದ ತಪ್ಪಿಸಿದ್ದೇನೆ ನಾನಂತೂ ಈ ಗಾಡಿಗಳಲ್ಲಿ ಸಾರಿಗೆ ಮಾಡುವುದನ್ನು. ಬೊರೀವಲಿಗೆ ಬಂದಂತೂ ಮೂರು ವಾರ ಆಗಿಹೋಯಿತು."

" ಓಹೋ! ಹಾಗಾದರೆ ಈಗ ನೀವು ಬೋರಿವಲಿವರೆಗೂ ಕಂಪನಿಯೋ? ಸರಿ. ಒಳ್ಳೆಯದೇ ಆಯಿತು. ಅದೇನು, ಇವತ್ತು ದಾದರ್ ಬಿಟ್ಟು ಬೋರಿವಲಿ ಪ್ರಯಾಣ? "

" ಹೇಳಿದೆನಲ್ಲ. ಹೋಗಿಬಿಟ್ಟು ಮೂರು ವಾರ ಆಯಿತು. ಅಕ್ಕನನ್ನು ನೋಡಿಕೊಂಡು ಬರೋಣ ಅಂದೆ. ಅಲ್ಲದೆ, ಅವರಿಗೆ ಒಂದು ಸಮಾಚಾರ ಮುಟ್ಟಿಸಬೇಕಾಗಿತ್ತು—"

" ಸಮಾಚಾರವೇನು ? "

" ನಾಳೆ ನನ್ನ ವೈಫ್ ಬರುವವಳಿದ್ದಾಳೆ ಪೂನಾದಿಂದ. ಓದಿ ಓದಿ ಬೇಸರವೂ ಆಗಿತ್ತು, ಅವರಿಗೆ ತಿಳಿಸಿದ ಹಾಗೂ ಆಯ್ತು ಎಂದುಕೊಂಡು ಹೊರಟೆ."

" ಅಂದರೆ ನಿಮ್ಮ ಮಿಸೆಸ್ ಈಗ ಊರಲ್ಲಿಲ್ಲವೆ ? "

" ಆಕೆ ಪೂನಾಕ್ಕೆ ಹೋಗಿ ಮೂರು ವಾರ ಆಯಿತು."

" ಹಾಗಾದರೆ ಅವರ ಪರೀಕ್ಷೆ ಮುಗಿದುಹೋಯಿತೇ ? "

" ಓ, ನೋ. ಪರೀಕ್ಷೆ ಇನ್ನೂ ನಾಡದು ಪ್ರಾರಂಭ. ಅದಕ್ಕಾಗಿಯೇ ಆಕೆ ಈಗ ಬರುತ್ತಿರುವುದು....ಅದನ್ನೇ ನಂಬರ್ ಹಚ್ಚಿದ್ದಾರೇನು ನೋಡಿ ಕೊಂಡು ಬರೋಣ ಅಂದುಕೊಂಡಿದ್ದೆ. ಆದರೆ ಮತ್ತೆ ತಡವಾಗಬಹುದು ಎಂದು ಹೋಗಲಿಲ್ಲ."

" ಅದಕ್ಕೇನಂತೆ ? ನಾಳೆ ನಾನು ಯೂನಿವರ್ಸಿಟಿಯಲ್ಲಿ ನೋಡಿ ಬಂದರೂ ಬರುತ್ತೇನೆ."

" ಪರೀಕ್ಷೆ ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿಯೇ ನಡೆಯುತ್ತಿವೆ. ಆಯಿತು, ನಾಳೆ ಬೆಳಗ್ಗೆ ಹೇಗಾದರೂ ಸ್ಟೇಶನ್ನಿಗೆ ಬರುವವನೇ ಇದ್ದೇನೆ. ಫೋರ್ಟ್ ನಲ್ಲಿಯೂ ಹೋಗಬೇಕಾಗಿದೆ. ಆಗಲೇ ನೋಡಿಕೊಂಡು ಬಂದರಾಯಿತು...."

ವಸಂತನಿಗೆ ತಾನು ಯಾವ ಮಾತನ್ನೂ ಕೇಳದೆ ತನಗೆ ಬೇಕಾದ ಸಮಾಚಾರವೆಲ್ಲವೂ ಆನಂದನ ಮಾತಿನಲ್ಲಿ ಸಿಕ್ಕದ್ದನ್ನು ನೆನೆದಾಗ ಆಶ್ಚರ್ಯ ವೆನಿಸಿತು ! ಆನಂದನನ್ನು ಉತ್ಸಾಹಗೊಳಿಸಬೇಕೆಂದು ವಸಂತ ನಗುನಗುತ್ತಲೇ ಹೇಳಿದ :

" ಅಂತೂ ಈ ಸಲ ಇಬ್ಬರದೂ ಪರೀಕ್ಷೆ! ಒಳ್ಳೇ ಮೋಜಲ್ಲವೆ? ಒಬ್ಬರ ನ್ನೊಬ್ಬರು ಹೃತ್ಪೂರ್ವಕವಾಗಿ ಅಭಿನಂದಿಸುವ ಸುಯೋಗ ! "

" ಆಕೆಯದೇನು ಬಿಡಿರಿ. ಮುಖ್ಯ, ನಾನು ಈ ಸಲ ಪಾಸಾಗಲೇ ಬೇಕು. ಮೇಲಿನ ಪ್ರೆಕ್ಟಿಕಲ್ಸ್ ತೆರೆವಾಗಿಯೇ ಉಳಿದಿವೆ...."

" ಇಷ್ಟು ಸ್ವಾರ್ಥಿಯಾಗಬಾರದು ನೀವು, ಆನಂದರಾವ್....ಎಷ್ಟಾದರೂ ಸಮಾನ ಹಕ್ಕಿನ ದಿನಗಳು ಇವು."

" ಅದೇ ತೊಂದರೆ ನೋಡಿರಿ, ವಸಂತರಾವ್....ಈ ಸಮಾನ ಹಕ್ಕು ಎಂದು ಹೇಳುತ್ತೀರಲ್ಲ? ನನಗೆ ಎಷ್ಟೂ ಸಮ್ಮತವಿಲ್ಲ....ಎಷ್ಟಾದರೂ ಹೆಂಗಸು. ಆಕೆ ಗಂಡಸಿನ ಅಧೀನದಲ್ಲಿಯೆ ಇರಬೇಕು...."

ಆನಂದನ ವಿಚಾರಸರಣಿ ವಸಂತನಿಗೆ ಸರಿಬೀಳಲಿಲ್ಲ ಮಾತ್ರವಲ್ಲದೆ ಅವನ ಮತ್ತು ಮೋಹಿನಿಯರ ನಡುವೆ ಬೆಳೆಯುತ್ತಿದ್ದ ಬಿರುಕಿಗೆ ಬಹುತರವಾಗಿ ಆನಂದನ ಈ ಪ್ರವೃತ್ತಿಯೇ ಕಾರಣವಾಗಿರಬಹುದು ಎಂಬ ಸಂಶಯ ವಸಂತನ ಮನಸ್ಸಿನಲ್ಲಿ ಮೂಡಿಹೋಯಿತು. ವಸಂತ ಹೇಳಿದ—ಮೋಹಿನಿಯ ಅಭಿಪ್ರಾಯವನ್ನೇ ಆತನೆದುರು ಮುಂಡಿಸುವಂತಿದ್ದಂತೆ :

" ಅಧೀನದಲ್ಲಿ ಎಂದೆನ್ನಬೇಡಿರಿ. ಗಂಡಸಿಗೆ ಸರಿಯಾಗಿ ಎಂದು ಹೇಳಿರಿ. ಅಂದರೇನೇ ಎಲ್ಲವೂ ಸರಿಯಾಗಿ ನಡೆದೀತು."

" ಅದು ಅಸಾಧ್ಯ. ಅಸಾಧ್ಯವಿಷ್ಟೇ ಅಲ್ಲ, ಘಾತಕ—"

" ಈ ವಿಚಾರದಲ್ಲಿ ನೀವು ತುಂಬ ಅರ್ಥೋಡಾಕ್ಸ್ ಅಂತ ಕಾಣುತ್ತದೆ—"

" ಅರ್ಥೋಡಾಕ್ಸ್ ಅಲ್ಲ, ಏನೂ ಅಲ್ಲ. ಅವರು ನಮ್ಮ ಅಧೀನದಲ್ಲಿರಬೇಕು ಎಂದಮಾತ್ರಕ್ಕೆ ನಾವು ಅವರನ್ನು ಬೇಕಾದ ಹಾಗೆ ಪೀಡಿಸಬಹುದು, ಬೇಕಾದ ಹಾಗೆ ನಡೆಸಿಕೊಳ್ಳಬಹುದು ಎಂದಲ್ಲ ಅದರರ್ಥ. ಇದನ್ನು ನಾನು ಒಪ್ಪುತ್ತೇನೆ. ಆದರೆ ಇಬ್ಬರೂ ಸಮಾನರು ಅಂದರೆ ಅದು ತೊಂದರೆ—"

" ಏನಾದರೂ ಇಬ್ಬರೂ ಕೂಡಿಕೊಂಡೇ ಮನೆಯನ್ನು ನಡೆಸಿಕೊಂಡು ಹೋಗಬೇಕು—"

" ಅದೇ ನಾನು ಹೇಳುವುದೂ. ಸುಸೂತ್ರ ಮನೆ ನಡೆಯಬೇಕಾದರೆ ಮುಖ್ಯ ಸ್ವಾಮಿತ್ವ ಒಬ್ಬರದಾಗಿರಬೇಕೋ ಬೇಡವೊ? ಇಬ್ಬರೂ ಸಮಾನರಾದರೆ ಮನೆಯಲ್ಲಿ ನಡೆಯುವುದು ಇಬ್ಬಣವೆ."

" ಇಬ್ಬರೂ ಅಂದಮೇಲೆ ಇಬ್ಬಣ ಇದ್ದದ್ದೇ; ಇನ್ನೇನು, ಆ ಇಬ್ಬಣದಲ್ಲಿಯೂ ಸಹಕಾರ ಇರಬೇಕು, ಅಷ್ಟೇ...." ಎಂದು ವಸಂತ ತನ್ನ ಮತವನ್ನೇ ಮುಂದುವರಿಸಿದ.

" ಇಬ್ಬರೂ ಸಮಾನರು ಎಂದಮೇಲೆ ಸಹಕಾರ ಹೇಗೆ ಸಾಧ್ಯ ? "

" ಅದಕ್ಕೇನು ? ಇಬ್ಬರಿಗೂ ಧ್ಯೇಯ ಒಂದೇ : ಇಬ್ಬರೂ ಸುಖವಾಗಿ ಇರಬೇಕು ಎನ್ನುವುದು—ಅಲ್ಲವೇ ? "

" ಓ ! ಅಷ್ಟು ಬುದ್ಧಿ ಈಗಿನ ಹೆಣ್ಣು ಹುಡುಗಿಯರಿಗೆ ಇದ್ದರೆ.. ."

ವಸಂತನಿಗೆ ತನಗೆ ಬೇಕಾದ ಅವಕಾಶ ಸಿಕ್ಕಿತೆನ್ನಿಸಿತು. ಅವನಂದ :

" ಆ ಮಾತನ್ನು ನಾನು ಇಷ್ಟು ಸಹಜವಾಗಿ ಒಪ್ಪಲಾರೆ. ಇಂದಿಲ್ಲ ನಾಳೆ ನೀವು ನಿಮ್ಮ ಅಭಿಪ್ರಾಯವನ್ನು ಬದಲಾಯಿಸಬೇಕಾದೀತು, ಆನಂದ ರಾವ್. ಸಂಪೂರ್ಣ ಬದಲಾಯಿಸದಿದ್ದರೂ ಅದರಲ್ಲಿ ಸ್ವಲ್ಪವಾದರೂ ವ್ಯತ್ಯಾಸ ಒಪ್ಪಲೇಬೇಕಾಗಬಹುದು ! "

" ಅದು ಹೇಗೆ ಸಾಧ್ಯ, ವಸಂತರಾವ್ ? ಈ ಪ್ರಶ್ನೆ ಈ ಮಟ್ಟಕ್ಕೆ ಬಂದಾಗ ಅದರಲ್ಲಿ ಆತ್ಮಗೌರವ ಅಡಕವಾಗಿಬಿಡುತ್ತದೆ. ನೀವು ನನಗೆ ಗೊತ್ತು, ನನ್ನದು ನಿಮಗೆ ಗೊತ್ತು. ನಾನು ನನ್ನ ಸ್ವಂತ ಅನುಭವದ ಮೇಲಿಂದಲೇ ಹೇಳಬಲ್ಲೆ : ಸಹಕಾರಕ್ಕೆ ಆತ್ಮಗೌರವ ಅಡ್ಡ ಬರುತ್ತದೆ ಎಂದು."

ಆನಂದ ತಾನಾಗಿಯೇ ತನ್ನ ವಿಷಯವನ್ನೆತ್ತಿದ್ದು ವಂಸತನಿಗೆ ಅನು ಕೂಲವೇ ಆಯಿತು. ಅವನ ಕೂಡ ಮೋಹಿನಿಯನ್ನು ಕುರಿತು ಮಾತನಾಡ ಬೇಕಾಗಿತ್ತು. ಅದಕ್ಕೆ ಈಗ ಅವಕಾಶ ದೊರೆತಂತಾಗಿ ವಸಂತ ನಿಧಾನವಾಗಿ ಮೊದಲುಮಾಡಿದ :

" ಇದು ತುಂಬಾ ಪ್ರಾಯ್‌ವೇಟ್ ವಿಷಯ. ನಾನು ಮಾತಾಡಬೇಕೋ ಬಾರದೋ ನನಗೆ ತಿಳಿಯುವುದಿಲ್ಲ...." ಎಂದು ಉಪಚಾರಕ್ಕಾರಂಭಿಸಿದ. ಒಳಗಿನಿಂದ ವಿವೇಕ ಅಣಕಿಸುತ್ತಿತ್ತು : ' ಮೋಹಿನಿಯ ಕೂಡ ಮಾತನಾಡು ವಾಗ ಎಲ್ಲಿತ್ತು ಈ ಉಪಚಾರ ? ' ಎಂದು. ಆನಂದ ಹೇಳಿದ :

" ನಿಶ್ಶಂಕೆಯಿಂದ ಮಾತನಾಡಬಹುದು. ನಿಮಗೆ ಗೊತ್ತಿರದ ವಿಷಯ ಯಾವುದೂ ಇಲ್ಲ. ನನ್ನದೂ ಮೋಹಿನಿಯದೂ ಕೂಡಿ ನಡೆಯುವುದಿಲ್ಲವೆಂಬ ವಿಷಯ ಹೆಚ್ಚುಕಡಮೆ ಸಾರ್ವಜನಿಕವಾಗಿದೆ. ಎಷ್ಟೋ ಜನರಿಗೆ ತಿಳಿದಿದೆ. ನನ್ನ ಕಡೆಗೆ ತಪ್ಪಿಲ್ಲದೆ ಇದ್ದಾಗ ನಾನು ಅದರ ವಿಷಯಕ್ಕೆ ಯಾವ ಚಿಂತೆಯನ್ನೂ ಮಾಡಿಲ್ಲ—"

" ಚಿಂತೆ ಮಾಡಿರದಿದ್ದರೂ ನೀವು ಯೋಚನೆ ಮಾಡಬೇಕು. ತುಂಬ ಸೂಕ್ಷ್ಮ ವಿಷಯ ಇದು. ಇಬ್ಬರ ಸುಖದ ಪ್ರಶ್ನೆ ಇದರಲ್ಲಿ ಅಡಕವಾಗಿದೆ—"

"ಹೌದು. ಆದರೆ ಇದು ಆಕೆಗೆ ತಿಳಿಯಬೇಡವೆ?"

"ಇಬ್ಬರಿಗೂ ತಿಳಿಯಬೇಕು. ಏನು ಮತಭೇದ ಇದ್ದರೂ ಸಾಧ್ಯವಾದಷ್ಟರಮಟ್ಟಿಗೆ ಸರಿಪಡಿಸಿಕೊಂಡು ಹೋಗಬೇಕು. Compromise ಒಂದೇ ದಾರಿ, ಈ ಬಿಕ್ಕಟ್ಟಿನಲ್ಲಿ."

"ಒಂದು ದೃಷ್ಟಿಯಿಂದ ಈ ಮಾತನ್ನು ನಾನು ಒಪ್ಪಬಹುದು. ನೀವು ನನಗೆ ಏನೂ ಅನ್ನಬಹುದು. ಆದರೆ ಹೆಂಡತಿ ಎಂದಮೇಲೆ ಆಕೆ ನನಗೆ ಅಧೀನವಾಗಿರಬೇಡವೆ? Compromise ಬೇಕು ಎಂದು ಹೇಳುವವರೆಗೂ ಮಾತು ಬರಬಾರದು. ಅದು ಬಂದದ್ದೇ ಆದರೆ ಎರಡನೆಯ ಪಕ್ಷವಾದರೂ ಅದಕ್ಕೆ ಒಪ್ಪಿ ಅದರಂತೆ ನಡೆದುಕೊಳ್ಳಬೇಕಲ್ಲವೆ?"

"ಅವರು ಒಪ್ಪಬಹುದು....ಇಬ್ಬರೂ ಸೋಲಬೇಕು, ಇಬ್ಬರೂ ಗೆಲ್ಲಬೇಕು" ಎಂದ ವಸಂತ ಅನುಮಾನಿಸುತ್ತಲೆ.

"ಅಷ್ಟಿದ್ದರೆ ಯಾವ ತೊಂದರೆಯೂ ಇರುತ್ತಿರಲಿಲ್ಲ, ವಸಂತರಾವ್. Compromise ಸಾಧ್ಯ ಇದ್ದರೆ ಆಕ್ಕೆ ಅಧೀನಳಾಗಿರಬೇಕು ಎಂಬ ಮಾತನ್ನು ಬಿಟ್ಟುಬಿಡಬಹುದು ನಾನು. ಆದರೆ...."

ಆನಂದರಾಯ ಇಷ್ಟರಮಟ್ಟಿಗೆ ಮಾತಿನಿಂದ ಹೇಳುತ್ತಿದ್ದರೂ ಕೃತಿಗೆ ಬಂದಾಗ ಯಾವ ರೀತಿ ನಡೆದುಕೊಳ್ಳುತ್ತಿದ್ದನೆಂಬುದರ ಕಲ್ಪನೆ ಮೋಹಿನಿ ಹೇಳಿದ್ದರ ಮೇಲಿಂದ ಇದ್ದ ಮೂಲಕ ಆನಂದನ ಮಾತನ್ನು ವಸಂತ ವಿಶೇಷವಾಗಿ ಗಮನಿಸಲಿಲ್ಲ. ಹೆಚ್ಚುಕಡಮೆ ತಾನು ಮೋಹಿನಿಯನ್ನು ಸಮರ್ಥಿಸಿಯೇ ಮಾತನಾಡುತ್ತಿದ್ದೇನೆಂಬುದು ಲಕ್ಷ್ಯಕ್ಕೆ ಬಂದೂ ಹೋಯಿತು. ಒಂದೆರಡು ನಿಮಿಷ ಸುಮ್ಮನಾದ. ಕಿಟಕಿಯೊಳಗಿಂದ ಹೊರಗಿನ ಕತ್ತಲೆಯಲ್ಲಿ ಇಣಿಕಿದ. ಗಾಡಿ ಜೋಗೇಶ್ವರಿಯನ್ನು ದಾಟಿ ಘೋರೆಂದು ಕತ್ತಲೆಯಲ್ಲಿ ನುಗ್ಗುತ್ತಿತ್ತು. ಕೊನೆಗೆ ಆನಂದನೇ ಹೇಳಿದ:

"ಆಕೆಗೆ ಈ ಸಮಾನತೆಯ ಹುಚ್ಚು ವಿಚಾರ ಸಂಪೂರ್ಣ ಹುಚ್ಚು ಹಿಡಿಸಿದೆ. ತನ್ನ ದಾರಿ ತಪ್ಪು ಎಂಬುದನ್ನು ಆಕೆ ಎಂದಿಗೂ ಒಪ್ಪುವಂತಿಲ್ಲ. ಎಂದಮೇಲೆ Compromise ಹೇಗೆ ಸಾಧ್ಯ?"

"ನಾನು ಆಗಲೇ ಹೇಳಿದೆನಲ್ಲ—ಇದರಲ್ಲಿ ಒಬ್ಬರು ತಪ್ಪು, ಇನ್ನೊಬ್ಬರು ಒಪ್ಪು ಎಂದು ಬಾಯಿಂದ ಹೇಳುವುದಂತೂ ಇರಲಿ; ಹಾಗೆಂದು ತೋರಿಸಿ

ಕೊಡುವ ಸೂಚನೆ ಕೂಡ ಒಬ್ಬರೊಬ್ಬರ ಮನಸ್ಸನ್ನು ನೋಯಿಸುವುದುಂಟು. ಸರಿಪಡಿಸಿಕೊಳ್ಳಬೇಕಾದರೆ ಮತಭೇದವಾಗಬಹುದಾದಂಥ ವಿಷಯಗಳನ್ನು ಎತ್ತಲೇಬಾರದು—ಕೆಲಕಾಲವಾದರೂ. ಹತ್ತರಲ್ಲಿ ಐದು ವಿಷಯ ಒಮ್ಮತದಿಂದ ನಡಸಿಕೊಳ್ಳುವಂತಾದರೆ ಉಳಿದ ಐದು ಕೂಡ ನಿಧಾನವಾಗಿ ತಾವಾಗಿಯೇ ಸರಿಯಾಗುವುವು...."

ಆನಂದ ಏಕಚಿತ್ತದಿಂದ ಕೇಳುತ್ತಿದ್ದ. ಯೋಚನೆ ಮಾಡಿ ಹೇಳಿದ :

"ತತ್ವದಿಂದ ನಿಮ್ಮ ಮಾತು ತೀರ ಸುಲಭ; ಬದುಕಿನಲ್ಲಿ ಅಷ್ಟು ಸುಲಭ ಇಲ್ಲ. ಇದು ಕೇವಲ ಬುದ್ಧಿಯ ಪ್ರಶ್ನೆ ಇಲ್ಲ, ವಸಂತರಾವ್—ಭಾವನೆಯ ಪ್ರಶ್ನೆ ಇದೆ, ಹೃದಯದ ಪ್ರಶ್ನೆ ಇದೆ....ಒಮ್ಮೆ ಮನಸ್ಸು ನೊಂದುಕೊಂಡಿತು ಎಂದರೆ...."

"ಅದು ಸರಿ. ಆ ಮಾತು ಇಬ್ಬರಿಗೂ ಅನ್ವಯಿಸುತ್ತದೆ—"

"ನೀವು ಮಾತ್ರ ಆಕೆಯ ಪರವಾಗಿ ವಾದಿಸುತ್ತಿರುವಂತಿದೆಯಲ್ಲ, ವಸಂತರಾವ್ ?"

ಆನಂದ ಪ್ರಶ್ನೆಯನ್ನು ಸಲಿಗೆಯ ನಗೆಯಲ್ಲಿ ಕೇಳಿರದಿದ್ದರೆ ವಸಂತನಿಗೆ ಆಶ್ಚರ್ಯವಾಗಬಹುದಿತ್ತು, ಹೆದರಿಕೆಯೂ ಆಗಬಹುದಿತ್ತು. ಆದರೆ ಆನಂದನ ದನಿಯಲ್ಲಿ ಯಾವ ಅಸಂತೋಷವಾಗಲಿ, ಅಸೂಯೆಯಾಗಲಿ ತೋರಿಬರಲಿಲ್ಲ. ಆದ್ದರಿಂದಲೆ ವಸಂತ ನಿಧಾನವಾಗಿ ಹೇಳಿದ :

"ನಾನು ಯಾರ ಪರವಾಗಿಯೂ ವಾದಿಸುತ್ತಿಲ್ಲ. ಹಾಗೆ ನೋಡಿದರೆ ಇಬ್ಬರ ಪರವಾಗಿಯೂ ವಾದಿಸುತ್ತಿದ್ದೇನೆಂದರೆ ಸರಿ. ಯಾಕೆಂದರೆ ಇಬ್ಬರೂ ನನಗೆ ಬೇಕಾದವರು. ಇಬ್ಬರೂ ಸರಿಪಡಿಸಿಕೊಂಡು ಕೂಡಿರಬೇಕೆಂಬುದೇ ನನ್ನ ಮನಸ್ಸು."

"ನಾನು ಬೇಕಾದಷ್ಟು ಪ್ರಯತ್ನಮಾಡಿದ್ದೇನೆ, ವಸಂತರಾವ್. ಏನು ಬೇಡಿದ್ದನ್ನು ಕೊಟ್ಟಿದ್ದೇನೆ. ಹೇಳಿದ ಹಾಗೆ ಕೇಳಿದ್ದೇನೆ, ಕುಣಿದಿದ್ದೇನೆ ಎಂದರೂ ಸರಿ. ಆದರೂ ಕೂಡ....ಆಕೆಗೆ ತಾನು ಹೇಗೆ ನಡೆದುಕೊಳ್ಳುತ್ತಿದ್ದೇನೆ ಎಂಬುದರ ಕಲ್ಪನೆಯೇ ಇದ್ದಂತಿಲ್ಲ—"

"ಆದಷ್ಟು ನಿಧಾನವಾಗಿ ಮನವೊಲಿಸಿಕೊಳ್ಳುವ ಯತ್ನವನ್ನು ಮಾಡ ಬೇಕು, ಅಷ್ಟೇ—"

" ಅದೇನೋ ಸರಿ. ಆದರೆ ಅದು ಅಸಾಧ್ಯ ಎಂದು ಕಾಣುತ್ತದೆ. ಎಷ್ಟಾದರೂ ಮನುಷ್ಯನ ಸ್ವೈರಣೆ ನನ್ನದು...."

ಆನಂದನ ಮಾತಿನಲ್ಲಿ ನಿರಾಶೆ ಇಣಿಕಿನೋಡುತ್ತಿತ್ತು. ವಸಂತನೆಂದ :

" ಹಾಗಾದರೆ ನಿಮ್ಮ ಯೋಚನೆಯಾದರೂ ಏನು? ನನ್ನಿಂದ ಏನಾದರೂ ಉಪಯೋಗವಾಗುವಂತಿದ್ದರೆ ನಾನು ಏನನ್ನೂ ಮಾಡಬಲ್ಲೆ. ಇಬ್ಬರೂ ನನಗೆ ಬೇಕಾದವರು. ಅಂಥ ಯಾವುದಾದರೊಂದು ನಿರ್ದಿಷ್ಟ ವಿಷಯವಿದ್ದರೆ, ಅದನ್ನು ಸಹಜವಾಗಿಯೇ ಬಿಡಿಸಬಹುದು...."

" ನಿಮಗೆ ನಾನು ತುಂಬ ಕೃತಜ್ಞ. ಆದರೆ ಯಾರೇನು ಮಾಡಬಹುದು? ಮುಖ್ಯ, ಮನಸ್ಸು ಸ್ವಚ್ಛವಾಗಲಿಕ್ಕೇ ಬೇಕು. ಒಬ್ಬರಿಗೊಬ್ಬರು ಯಾವ ರೀತಿಯಿಂದಲೂ ಸಂಶಯಕ್ಕೆ ಆಸ್ಪದ ಕೊಡಬಾರದು. ಅಲ್ಲವೆ?"

" ನಿಸ್ಸಂದೇಹವಾಗಿ ಹೌದು—"

" ಆಕೆಗೆ ಯಾರೂ ಯಾವ ವಿಷಯದಲ್ಲಿಯೂ ಎದುರು ಹೇಳಕೂಡದು. ಎಲ್ಲದರಲ್ಲೂ ತನ್ನದೇ ಮೇಲುಗೈ ಆಗಬೇಕು ಎಂದರೆ ನಾಲ್ಕು ಜನರಿದ್ದ ಮನೆಯಲ್ಲಿ ಹೇಗೆ ಸಾಧ್ಯ?"

" ಹಾಗಿದ್ದರೆ ಅದು ತಪ್ಪು—"

" ಯಾವಾಗಲೂ ಬರುವ ಪ್ರಶ್ನೆ ಅದೇ. ಇತ್ತೀಚೆಗಂತೂ ವಿಪರೀತ ಹೆಚ್ಚಾಗಿಬಿಟ್ಟದೆ ಈ ಸ್ವೈರವೃತ್ತಿ. ನನಗೂ ತುಂಬ ಬೇಸರವಾಗಿಬಿಟ್ಟಿತು. ಇತ್ತ ಓದು ಕೂಡ ಸಾಗದಾಯಿತು. ಅಂತೇ ಒಂದೆರಡು ವಾರದ ಮಟ್ಟಿಗಾದರೂ ಪುಣೆಗೆ ಹೋಗಿ ತಾಯಿಯ ಹತ್ತಿರ ಇದ್ದು ಬರಲಿ ಎಂದು ಕಳಿಸಿದೆ."

ರೈಲು ಕಾಂಡಿವಲಿಯನ್ನು ಬಿಟ್ಟು ಮುಂದೆ ಸಾಗಿತ್ತು. ಇಬ್ಬರೂ ಇಳಿಯುವ ಸಿದ್ಧತೆಯಲ್ಲಿದ್ದರು. " ಈಗ ಎರಡು ಮೂರು ವಾರದ ಹಿಂದೆ ದಾದರಿನಲ್ಲಿ ಒಮ್ಮೆ ಸಿಕ್ಕಿದ್ದರು...." ಎಂದು ವಸಂತ ಸುಮ್ಮನಾದ.

" ಹೌದು, ಆಕೆಯೇ ಹೇಳುತ್ತಿದ್ದಳು ಊರಿಗೆ ಹೋಗುವ ಮುಂದೆ—"

" ಏನೆಂದು?"

" ಏನು ವಿಶೇಷವೂ ಇಲ್ಲ—ನೀವು ನಿಲ್ದಾಣದ ಹತ್ತಿರ ಸಿಕ್ಕಿದ್ದಿರೆಂದು. ಭಾಸ್ಕರನೂ ಹೇಳಿದ್ದ. ಆದರೆ ಆತನಿಗೆ ದೂರಿನಿಂದ ನಿಮ್ಮ ಗುರುತು ಸಿಗಲಿಲ್ಲ ಎಂದು ಕಾಣುತ್ತದೆ...."

ವಸಂತನಿಗೆ ತಟ್ಟನೆ ಹೊಳೆಯಿತು. ಭಾಸ್ಕರ ತಮ್ಮನ್ನು ನೋಡಿ ಆನಂದನಿಗೆ ಚುಚ್ಚಿರಬೇಕು, ಅದರ ಪರಿಣಾಮವಾಗಿ ಏನಾದರೂ ಹಗರಣ ಮನೆಯಲ್ಲಿ ನಡೆದನಂತರವೇ ಮೋಹಿನಿ ಪುಣೆಗೆ ಹೋಗಿರಬೇಕು, ಎಂದು. ಇಬ್ಬರೂ ರೈಲಿನಿಂದಿಳಿದರು. ರೈಲಿನ ಗುಂಟ ಒಳದಾರಿಯಿಂದಲೇ ಹೋಗ ಬೇಕೆಂದಿದ್ದ ಆನಂದನೆಂದ: "ಹೀಗೆಯೇ ಹೋಗೋಣ ಬನ್ನಿರಿ, ವಸಂತ ರಾವ್. ಸುಮ್ಮನೆ ದೂರ, ಆ ಕಡೆಯಿಂದ ಹೋದರೆ...."

"ರಾತ್ರಿವೇಳೆ, ಯಾತಕ್ಕೆ, ರೈಲುಗುಂಟ? ಮೇಲಾಗಿ, ಥ್ರೂ-ಟ್ರೇನ್ಸ್ ಬರುವ ವೇಳೆ...." ಎಂದುದಕ್ಕೆ ಆನಂದನೂ ಒಪ್ಪಿದ. ಇಬ್ಬರೂ ಹೊರಗಿನ ದಾರಿಯಿಂದಲೇ ನಡೆದರು. ಇಬ್ಬರೂ ಸುಮ್ಮನಾಗಿದ್ದರು. ಇಬ್ಬರ ತಲೆ ಯಲ್ಲಿಯೂ ಒಬ್ಬಳನ್ನು ಕುರಿತೇ ವಿಚಾರ ನಡೆದಿತ್ತು. ಮೋಹಿನಿಯ ಸಮಸ್ಯೆ ಇಬ್ಬರಿಗೂ ಬಗೆಹರಿಯದಾಗಿತ್ತು. ಮುಖ್ಯಬೀದಿಯನ್ನು ದಾಟಿ ಕತ್ತಲೆಯಲ್ಲಿಯ ಅಡ್ಡದಾರಿಯಲ್ಲಿ ನಡೆದಿದ್ದರು. ವಸಂತನೆಂದ:

"ನಿಮಗೆ ವಿಚಿತ್ರವೆನಿಸಬಹುದು—ಈ ನಿಮ್ಮ ಪ್ರಶ್ನೆಯನ್ನು ಕುರಿತು ನಾನು ಎಷ್ಟೋ ಬಾರಿ ಯೋಚಿಸಿದ್ದೇನೆ. ನಿಜವಾಗಿಯೂ ಎಷ್ಟು ಬೇಕಾದಷ್ಟು ಸುಖದಲ್ಲಿರಬೇಕಾಗಿದ್ದವರು ಸುಮ್ಮನೆ ಎಂಥ ಗೋಳಿಗೀಡಾಗುತ್ತಿದ್ದೀರಲ್ಲಾ, ಎಂದು. ನನ್ನ ಮಾತು ಕೇಳುವಂತಿದ್ದರೆ ಸಾಧ್ಯವಾದಷ್ಟು ಮೆತ್ತಗಾಗಿ ಸರಿ ಪಡಿಸಿಕೊಂಡು ಹೋಗಬೇಕು."

"ನಾನು ನಿಮ್ಮ ಮಾತು ಒಪ್ಪುತ್ತೇನೆ, ವಸಂತರಾವ್. ಸುಖವಾಗಿ ಇರುವುದು ನನಗೆ ಬೇಡವಾಗಿದೆಯೆನ್ನುತ್ತೀರಾ? ನಮ್ಮ ವಿಷಯವನ್ನು ನಾಲ್ಕು ಜನರು ಆಡುವಂತಾಯಿತು ಎಂಬುದನ್ನು ನೆನೆದಾಗ ನನಗಂತೂ ಒಮ್ಮೊಮ್ಮೆ ಜೀವ ಇಟ್ಟುಕೊಳ್ಳಬೇಕೆನ್ನಿಸುವುದಿಲ್ಲ. ಆದರೆ ನನಗೊಬ್ಬನಿಗೇ ಅನಿಸಿ ಏನು ಪ್ರಯೋಜನ?"

"ಹಾಗಾದರೆ ಇದಕ್ಕೆ ಏನು ಉಪಾಯ, ಪರಿಹಾರ?"

"ನಾನಾಗಲೇ ಹೇಳಿದೆನಲ್ಲ. ನಾನೇನು ಚಿಂತೆ ಮಾಡುವುದಿಲ್ಲ. ಎಲ್ಲ ಆಕೆಯದೇ...."

"ಎಷ್ಟಾದರೂ ಹೆಂಗಸು, ಆನಂದರಾವ್. ನೀವು ಬುದ್ಧಿ ಹೇಳಬೇಕು, ತಿಳಿಸಿಕೊಡಬೇಕು...."

" ಓ! ನಿಮಗೆ ಹುಚ್ಚು. ಅದರ ಆವಶ್ಯಕತೆ ಆಕೆಗೆ ಇಲ್ಲ! "

" ಹಾಗಾದರೆ ? "

" ಹಾಗಾದರೆ ಏನು ? ಮಾಡಿದ್ದನ್ನುಣ್ಣುವಳು...."

" I am sorry. ಹೀಗೆ ನೀವು ಕೈಬಿಡಬಾರದು ; ಆಸೆಯನ್ನೂ ಬಿಡಬಾರದು. ಹಳೆಯದೆಂಬುದನ್ನು ಮರೆಯದಿದ್ದರೆ ನಡೆದೀತು ಹೇಗೆ ? The past must be buried, ಅಲ್ಲವೆ ? "

ಇಬ್ಬರೂ ಆನಂದನ ಮನೆಯೆದುರು ಬಂದಿದ್ದರು. ಆನಂದ ಯೋಚನೆಯಲ್ಲಿದ್ದಂತಿದ್ದ. ಕೊನೆಗೆ ಹೇಳಿದ :

" ಓ! ಅದು ಸರಿ. ಮಾತಿನಲ್ಲಿ ಮಾತ್ರ ಎಂದು ಕಾಣುತ್ತದೆ. The past never dies. ಹಳೆಯದು ಅಳಿಯುವುದೇ ಇಲ್ಲ ಎಂದು ಕಾಣುತ್ತದೆ, ಅಲ್ಲವೆ ? Or does it ? ಸರಿ. ನೋಡೋಣ....ಮತ್ತೇನು ? "

" ಬನ್ನಿ ಯಾವಾಗಲಾದರೊಮ್ಮೆ ನಮ್ಮ ಕೋಣೆಗೆ. ನಾಳೆ, ನಾಡದು, ಯಾವಾಗಲಾದರೂ ಬನ್ನಿ."

" ನಾಳೆ ನಾಡದು ಸಾಧ್ಯವಿಲ್ಲ. ಸೋಮವಾರದಿಂದ ನನ್ನ ಪರೀಕ್ಷೆ. ಅದು ಮುಗಿದನಂತರ ಬರುವೆ."

" ತಪ್ಪದೆ ಬರುತ್ತೀರಾ ? "

" ಖಂಡಿತವಾಗಿಯೂ ಬರುತ್ತೇನೆ—"

" ಅಚ್ಛಾ, Good night—"

ಎಂದು ಆನಂದ ಮನೆಯ ಅಟ್ಟವನ್ನೇರತೊಡಗಿದ. ವಸಂತ ತನ್ನ ಕೋಣೆಯ ಕಡೆಗೆ ತಿರುಗಿದ.

೬

ಮರುದಿನ ಬೆಳಗ್ಗೆ ಮೋಹಿನಿ ಪುಣೆಯ ಪ್ಲಾಟ್‌ಫಾರ್ಮ್‌ಗೆ ಬಂದಾಗ ಮೊತ್ತಮೊದಲು ಕಣ್ಣಿಗೆ ಬಿದ್ದದ್ದೆಂದರೆ ಮುಖ್ಯವಾದ ಗೇಟಿನಲ್ಲಿ ಕಾಯುತ್ತ ನಿಂತಿದ್ದ ಭಾಸ್ಕರನ ಮೂರ್ತಿ. ತಾಯಿಯನ್ನು ಬಿಟ್ಟು ಬರುವಾಗಿನ ದುಃಖ ಇನ್ನೂ ಹೃದಯದಲ್ಲಿ ಕುದಿಯುತ್ತಿತ್ತು. ಭಾಸ್ಕರನನ್ನು ನೋಡಿದಮೇಲಂತೂ ಆ ದುಃಖ ರೋಷವಾಗಿ ಪರಿಣಮಿಸಿತು. ಕೊನೆಗೂ ಈತ ತನ್ನ ಆಟವನ್ನು ಸಾಧಿಸಿದನಲ್ಲ ಎಂದು ಸಿಡಿಮಿಡಿಗೊಂಡಳು. ಆದರೂ 'ಇಷ್ಟು ಬೆನ್ನುಬಿದ್ದು ಈತ ಮಾಡುವುದಾದರೂ ಏನು? ಬಂದಾದರೂ ಬರಲಿ ಹತ್ತಿರಕ್ಕೆ, ಒಂದು ಸಲ ಬುದ್ಧಿ ಕಲಿಸಿಯೇ ಬಿಡುವೆ' ಎಂದು ಧೈರ್ಯ ತಂದುಕೊಂಡು ಮುಂದೆ ಸಾಗುತ್ತಿರುವಾಗಲೇ ಭಾಸ್ಕರ ಮುಖದಲ್ಲಿ 'ದೇಶಾವರಿ' ನಗೆಯೊಂದನ್ನು ಬೀರುತ್ತ ಎದುರಿಗೇ ಬಂದುಬಿಟ್ಟ. ಮೋಹಿನಿ ನೋಡಿಯೂ ನೋಡದ ಹಾಗೆ ಮುಂದಕ್ಕೆ ನಾಗಿದ್ದಳು. ಬದಿಯಲ್ಲಿ ಒಂದು ಟ್ರಂಕ್, ಒಂದು ಎಲ್ಲಡಕ (ಹೋಲ್ಡಾಲ್)ವನ್ನು ಹೊತ್ತುಕೊಂಡಿದ್ದ ಕೂಲಿಯವನಿದ್ದ.

"ಓಹೋ! ಇದೇನು? ಮಧ್ಯಾಹ್ನದ ರೈಲಿಗೆ ಹೊರಡುತ್ತೇನೆಂದು ಬೆಳಗ್ಗೇ ಬಂದುಬಿಟ್ಟೆಯಲ್ಲ?" ಎಂದ ಭಾಸ್ಕರ.

ಮೋಹಿನಿ ಏನನ್ನೂ ಹೇಳಲಿಲ್ಲ. ಆದರೆ ಭಾಸ್ಕರ ಸುಮ್ಮನಾಗಲಿಲ್ಲ. ಮತ್ತೆ ಕೇಳಿದ:

"ಯಾಕೆ? ಇಷ್ಟರಲ್ಲಿಯೇ ಕಾರ್ಯಕ್ರಮ ಬದಲಾಯಿತೇನು?"

"ಹೌದು....ಮತ್ತೆ, ನೀವು ಹೇಗೆ ಬಂದಿರಿ ಈಗ?"

ನೇರವಾದ ಪ್ರಶ್ನೆಗೆ ಭಾಸ್ಕರ ಸಿದ್ಧನಿರಲಿಲ್ಲ. ತಡವರಿಸುತ್ತ ಹೇಳಿದ:

"ಅದು ನನ್ನದು ಹೀಗಾಯಿತು, ನೋಡು. ನಾನು ನಿನ್ನೆಯೇ ಹೇಳಿದ್ದೆನಲ್ಲ? ಕೆಲಸ ಮುಗಿದರೆ ಬೆಳಗಿನ ರೈಲಿನಿಂದ ಹೊರಟುಬಿಡುವೆ ಎಂದು. ಕೆಲಸ ನಿನ್ನೆ ಸಾಯಂಕಾಲವೇ ಮುಗಿದುಹೋಯಿತು. ಮತ್ತೆ ಇನ್ನು ಇದ್ದಾದರೂ ಏನು ಮಾಡುವುದು ಎಂದು ಹೊರಟುಬಿಟ್ಟೆ, ಆಯಿತು" ಎಂದು ಸುಳ್ಳು ಸಲಿಗೆಯ ನಗೆಯೊಡನೆ ಹೇಳುತ್ತಿದ್ದ. ಮೋಹಿನಿಯ ಲಕ್ಷ್ಯ ಎದುರಿಗೆ ಸಾಮಾನು ಹೊತ್ತುಕೊಂಡು ಹೊರಟಿದ್ದ ಕೂಲಿಯ ಕಡೆಗಿದ್ದಿತು. ತಾನು

ಬಂದದ್ದು ಮೋಹಿನಿಗೆ ಸರಿಬಂದಿರಲಿಲ್ಲವೆಂಬುದನ್ನು ತಿಳಿಯಲು ಭಾಸ್ಕರನಿಗೆ ತಡವಾಗಿರಲಿಲ್ಲ. ಒಂದು ವೇಳೆ ತನ್ನನ್ನು ತಪ್ಪಿಸಲಿಕ್ಕೆಂದೇ ತಾನು ಹೊರಡುವುದು ಮಧ್ಯಾಹ್ನದಲ್ಲಿ ಎಂದು ಆಕೆ ಹೇಳಿದ್ದರೂ ಇರಬಹುದು ಎಂಬ ವಿಚಾರ ಸುಳಿದುಹೋದಾಗ ತನ್ನ ವಿಚಕ್ಷಣೆಗಾಗಿ ಹೆಮ್ಮೆಪಟ್ಟ. ಒಂದು ವೇಳೆ ಮೋಹಿನಿ ಬೆಳಗಿನ ರೈಲಿನಿಂದ ಹೊರಡಬಹುದೆಂಬ ಅನುಮಾನ ಮನಸ್ಸಿನಲ್ಲಿ ಮೂಡಿದಾಗಲೇ ಭಾಸ್ಕರ ಬೆಳಗ್ಗೆ ನಿಲ್ದಾಣದವರೆಗೆ ತಾನು ಬಂದು ನೋಡಿ ಕೊಂಡು ಹೋಗತಕ್ಕದೆಂದೂ ಮೋಹಿನಿ ಬಂದರೆ ತಾನೂ ಅದೇ ರೈಲಿಗೆ ಹೊರಟುಬಿಡತಕ್ಕದೆಂದೂ ನಿಶ್ಚಯಿಸಿದ್ದ. ಅದರಂತೆಯೇ ತನ್ನ ಇದ್ದಬಿದ್ದ ಒಂದು ಕೈಚೀಲದೊಡನೆ ಸ್ಟೇಶನ್ನಿಗೆ ಬಂದಿದ್ದ. ಜೊತೆಯಲ್ಲಿಯೇ ಹೆಜ್ಜೆ ಹಾಕುತ್ತಿದ್ದ ಭಾಸ್ಕರ ಕೇಳಿದ:

"ಟಿಕೆಟ್ ತೆಗೆದುಕೊಂಡಾಯಿತೇ ?"

"ಹುಂ...."

"ನಾನಿನ್ನೂ ತೆಗೆದುಕೊಳ್ಳಬೇಕು. ಆಗಲೇ ಹೋಗಿದ್ದೆ. ತುಂಬ ಗದ್ದಲ. ಈಗ ಕಡಮೆಯಾಗಿರಬಹುದು" ಎಂದು ಮಾತಾಡುತ್ತಲೇ ಇದ್ದ. ಮೋಹಿನಿ ತನ್ನಲ್ಲಿ ಯಾವ ರೀತಿಯಿಂದಲೂ ಆಸೆ ತೋರದಿದ್ದದ್ದು ಒಮ್ಮೊಮ್ಮೆ ಆತನನ್ನು ಕೆಣಕುತ್ತಿತ್ತು. ಆದರೆ ತಾನಾದರೂ ಇನ್ನೇನನ್ನೂ ಮಾಡಲಾರನೆಂಬುದನ್ನು ತಿಳಿದೇ ಆತ ಸುಮ್ಮನಿರುತ್ತಿದ್ದ. ಕೊನೆಗೆ, ಟಿಕೆಟ್ ತರುತ್ತೇನೆಂದು ಹೇಳಿ ಭಾಸ್ಕರ ಹೊರಟುಹೋದ.

ಭಾಸ್ಕರನ ಲಾಂಗೂಲಚಾಲನ ವೃತ್ತಿ ಒಮ್ಮೊಮ್ಮೆ ಮೋಹಿನಿಯಲ್ಲಿ ಆತ್ಮಾಭಿಮಾನವನ್ನು ಕೆರಳಿಸುತ್ತಿತ್ತು. ಇಂಥ ಎಷ್ಟೋ ಜನರನ್ನು ತಾನು ಬೆರಳ ತುದಿಯ ಮೇಲೆ ಕುಣಿಸಬಲ್ಲೆನೆಂಬ ಹೆಮ್ಮೆಯೂ ತಲೆದೋರುತ್ತಿತ್ತು. ಆದರೆ ಅದು ಕ್ಷಣಮಾತ್ರವೇ. ಭಾಸ್ಕರನ ಇಂಗಿತದ ವಿಷಯದಲ್ಲಿ ಮೋಹಿನಿಗೆ ಯಾವ ಸಂದೇಹವೂ ಇರಲಿಲ್ಲ. ಆ ಇಂಗಿತದ ಪರಿಜ್ಞಾನವೇ ಅವನ ವೃತ್ತಿ ಯನ್ನು ಹೇಸಿಗೊಳ್ಳುವಂತೆ ಮಾಡುತ್ತಿತ್ತು. ಒಮ್ಮೊಮ್ಮೆ, ಯಾವುದಕ್ಕೂ ಹಿಂಜರಿಯದ ಈತ ಏನನ್ನೂ ಮಾಡಬಹುದೆಂಬುದನ್ನು ತಿಳಿದವಳಾದ್ದರಿಂದ ಮೋಹಿನಿಯ ಹೃದಯ ಹೆದರಿಕೆಯಿಂದ ನಡುಗುತ್ತಲೂ ಇತ್ತು. ಆದರೆ ಇಂಥ ಸ್ವಭಾವದವರಲ್ಲಿ ಪುಕ್ಕತನವೂ ಒಂದು ಅಪರಿಹಾರ್ಯವಾಗಿರುತ್ತದೆಯಾದ್ದ

ರಿಂದ ಮೋಹಿನಿಗೆ ಧೈರ್ಯಗೊಳ್ಳಲು ಅವಕಾಶವಾಗುತ್ತಿತ್ತು. ಆದ್ದರಿಂದಲೇ ಈತನಿಗೆ ಒಂದಿಲ್ಲೊಂದು ದಿನ ಬುದ್ಧಿ ಕಲಿಸುವೆನೆಂದು ಧೈರ್ಯವಾಗಿ ಬಗೆದಿದ್ದಳು.

ಹೆಣ್ಣುಮಕ್ಕಳ ಇಂಟರ್ ಕಂಪಾರ್ಟ್‌ಮೆಂಟ್‌ನಲ್ಲಿ ಯಾವ ಗದ್ದಲವೂ ಇರಲಿಲ್ಲ. ಒಬ್ಬಿಬ್ಬರು ತಮ್ಮ ಸಾಮಾನುಗಳೊಡನೆ ಕುಳಿತುಕೊಂಡಿದ್ದರು. ಮೋಹಿನಿ ಕಿಟಕಿಯ ಹತ್ತಿರದ ಒಂದು ಒಳ್ಳೆಯ ಸ್ಥಳವನ್ನು ಆಕ್ರಮಿಸಿ ಸಾಮಾನನ್ನು ಮೇಲಕ್ಕೆ ಹೇರಿಸಿ ಹಾಯಾಗಿ ಕುಳಿತುಕೊಂಡಳು. ತಾಯಿಯಿಂದ ಅಗಲಿದ ದುಃಖ ಇನ್ನೂ ಕಡಮೆಯಾಗುವ ಲಕ್ಷಣ ಕಾಣಲಿಲ್ಲ. ನಡುನಡುವೆ ತೆರೆತೆರೆಯಾಗಿ ಬಂದು ಹೃದಯದ ಮೇಲೆ ಅಪ್ಪಳಿಸುತ್ತಿತ್ತು. ಅತ್ತು ಅತ್ತು ಕಣ್ಣು ಕೆಂಪಾಗಿದ್ದವು. ಮೇಲೆ, ರಾತ್ರಿ ಎರಡು ಗಂಟೆಯವರೆಗೆ ಮಾತನಾಡುತ್ತಲೇ ಇದ್ದುದರಿಂದ ನಿದ್ದೆಗೇಡೂ ಆಗಿತ್ತು. ಆ ಮಾತುಗಳಲ್ಲಿಯು ತಾಯಿಯ ವಾತ್ಸಲ್ಯವನ್ನು ನೆನೆದಾಗಲೆಲ್ಲ ಮೋಹಿನಿಗೆನಿಸುತ್ತಿತ್ತು: 'ಜಗತ್ತಿನಲ್ಲಿ ನನಗೆ ಯಾರಿಲ್ಲದಿದ್ದರೂ ಸರಿ. ಈ ತಾಯಿ ಇರಲಿ' ಎಂದು.

ಗಾಡಿ ಹೊರಡುವ ಸಮಯ ಸಮೀಪಿಸಿತ್ತು. ಕಿಟಕಿಗಳೊಳಗೆ ಅವಸರ ಅವಸರವಾಗಿ ಹುಡುಕುತ್ತ ಭಾಸ್ಕರ ಬರುತ್ತಿದ್ದವ ಕಾಣಿಸಿಕೊಂಡ. ಮೋಹಿನಿ ಮುಖ ತಿರುವಿದಳು. ಆದರೆ ಗಾಡಿಯಲ್ಲಿ ಒಂದೆಡೆ ಕುಳಿತವಳು ಅವನನ್ನು ತಪ್ಪಿಸಲಸಮರ್ಥಳಾಗಿದ್ದಳು. ಭಾಸ್ಕರ ಅವಳು ಕುಳಿತ ಕಿಟಕಿಯ ಹತ್ತಿರ ನಿಂತು ಕೇಳಿದ:

"ಓ! ಇಲ್ಲಿ ಕುಳಿತಿದ್ದೆಯ? ಎಷ್ಟು ಹುಡುಕಿದೆ. ಆಚೆಗೇ ಕೂಡಬಹುದಾಗಿತ್ತಲ್ಲ? ಬೇಕಾದಷ್ಟು ಸ್ಥಳವಿದೆ—"

"ಇಲ್ಲಿಯೂ ಇದೆ" ಎಂದು ಮೋಹಿನಿ ಮಾತು ಮುಗಿಸಿದಳು.

"ಅಲ್ಲಿಯೆ ಬಂದಿದ್ದರೆ ಚೆನ್ನಾಗಿತ್ತು, ಮೋಹಿನಿ, ಮಾತನಾಡುತ್ತ ಕುಳಿತುಕೊಳ್ಳಬಹುದಾಗಿತ್ತು....ನನಗೆ ನಿನ್ನ ಕೂಡ ಎಷ್ಟೋ ಮಾತನಾಡುವುದಿದೆ."

"ನನಗೆ ಮಾತನಾಡುವ ಇಚ್ಛೆ ಇಲ್ಲ."

"ಈ ಹುಚ್ಚುತನ ಬಿಡು ಇನ್ನು, ಸಾಕು. ಬೇಕಾದಷ್ಟಾಯಿತು...." ಏನೇನನ್ನೋ ಹೇಳುತ್ತಿದ್ದ. ಗಾರ್ಡ್ ಸೀಟಿ ಊದಿದ. ಗಾಡಿ ಹೊರಟಿತು. ಬದಿಯಲ್ಲಿಯ ಗಂಡಸರ ಕಂಪಾರ್ಟ್‌ಮೆಂಟ್‌ನಲ್ಲಿ ಭಾಸ್ಕರ ಸೇರಿಕೊಂಡ.

ತಳೇಗಾಂವ್ ಸ್ಟೇಶನ್ ಸಮೀಪಿಸುತ್ತಿರುವಾಗಲೇ ಚಹದ ಸ್ಪೆಶಲ್ ಟ್ರೇಯೊಂದನ್ನು ಹಿಡಿದುಕೊಂಡು ವೇಟರನೊಬ್ಬನು ಬಂದ. ಅವನ ಬೆನ್ನ ಹಿಂದೆ ಭಾಸ್ಕರನೂ ಬಂದ. ಭಾಸ್ಕರ ಟ್ರೇಯನ್ನು ಮೋಹಿನಿಯ ಬದಿಯಲ್ಲಿ ಇಡಲು ಸನ್ನೆಮಾಡಿದ. ವೇಟರ್ ಹೊರಟುಹೋದನಂತರ ಭಾಸ್ಕರ ಹೇಳಿದ:

" ಚಹ ಚೆನ್ನಾಗಿದೆ ನೋಡು, ಮೋಹಿನಿ."

" ನನಗೆ ಚಹ ಬೇಕಾಗಿರಲಿಲ್ಲ. ನಾನಾಗಲೇ ತೆಗೆದುಕೊಂಡಿದ್ದೇನೆ."

" ಆಗಲೇ—ಯಾವಾಗ ? "

" ಮನೆ ಬಿಡುವ ಮುಂದೆ."

" ಅದಕ್ಕಾಗಲೇ ಎರಡು ಗಂಟೆಯಾಗುತ್ತ ಬಂತು. ತೆಗೆದುಕೋ, ನಿನಗಾಗಿಯೇ ತರಿಸಿದೆ."

" ನನಗೆ ಬೇಡ ! "

" ನಿನಗಾಗಿ ಹೇಳಿದೆ. ಮೋಹಿನಿ, ತೆಗೆದುಕೋ. ಹೀಗೇಕೆ ಮಾಡುತ್ತೀ ? ಸುತ್ತಲೂ ನಾಲ್ಕು ಜನ ನೋಡಿದವರು ಏನಂದಾರು ? "

" ಅದರ ವಿಚಾರವನ್ನು ನೀವು ಮಾಡಬೇಕಾಗಿದ್ದಿತು, ನಾನಲ್ಲ ! "

" ನಾನೆಲ್ಲವನ್ನೂ ವಿಚಾರಮಾಡಿದ್ದೇನೆ, ಬೇಕೆಂತಲೆ ನಿನಗಾಗಿ ತರಿಸಿದೆ."

" ಅಂತೆಯೇ ನಾನು ತೆಗೆದುಕೊಳ್ಳುವುದಿಲ್ಲ."

" ಯಾಕೆ ? "

" ನನಗಾಗಿ ತರಿಸಿದ್ದೆಲ್ಲ ಸರಿಯಾಯಿತು. ಆದರೆ ತರಿಸಿದವರು ನೀವು ಎಂದು ತೆಗೆದುಕೊಳ್ಳುವುದಿಲ್ಲ ! "

ಭಾಸ್ಕರನಿಗೆ ಮುಖದ ಮೇಲೆ ಹೊಡೆದ ಹಾಗಾಯಿತು. ಆದರೆ ಆತ ಹಿಂಜರಿಯಲಿಲ್ಲ. ಆಕೆಯ ಹತ್ತಿರವೇ ಬಂದು ಕುಳಿತು ಮತ್ತೆ ಹೇಳಿದ:

" ಸುಮ್ಮನೆ ನಾಲ್ಕು ಜನರಲ್ಲಿ ನನ್ನ ಮಾನ ತೆಗೆಯಬೇಡ, ತಿಳಿಯಿತೇ ? ನಾನೇ ಕಪ್ಪಿನಲ್ಲಿ ಸುರುವಿ ಕೊಡಲೆ ? " ಎಂದು ಟ್ರೇಗೆ ಕೈಹಾಕಿದ.

" ನಾಲ್ಕು ಜನರ ಅಭಿಪ್ರಾಯಕ್ಕೆ ಹೆದರಿ ನಿಮ್ಮ ಕೂಡ ನಾನು ಇಲ್ಲಿ ಸರಸವಾಡಬೇಕಾಗಿಲ್ಲ—ನೀವು ಸುಮ್ಮನೆ ಇಲ್ಲಿಂದ ಹೊರಟುಹೋಗಿರಿ."

" ಹೋಗುತ್ತೇನೆ, ಮೋಹಿನಿ. ನೀನು ಚಹವನ್ನು ಕುಡಿ. ಆಮೇಲೆ ಹೋಗುತ್ತೇನೆ."

" ಅದು ಸಾಧ್ಯವಿಲ್ಲ. ಚಹವನ್ನು ನಾನು ಕುಡಿಯುವಂತಿಲ್ಲ! "

" ಹೀಗೆ ಹಟಕ್ಕೆ ಬೀಳಬೇಡ. ಇನ್ನೂ ಯೋಚಿಸು. ನಿನಗೆ ಹತ್ತು ಸಾರೆ ಈ ಮಾತನ್ನು ಹೇಳಿದ್ದೇನೆ—"

" ನನಗೆ ಗೊತ್ತು, ನಾನೂ ಎಲ್ಲವನ್ನೂ ಯೋಚಿಸಿಯೇ ಮಾಡುತ್ತೇನೆ, ಆಡುತ್ತೇನೆ. ಇಲ್ಲಿ ನನ್ನವರು ಯಾರೂ ಇಲ್ಲವೆಂದು ಹೀಗೆ ಮಾತಾಡುತ್ತಿದ್ದೀರಾ ? "

" ಇಲ್ಲಿಯಷ್ಟೇ ಏಕೆ? ನಿನ್ನವರು ಯಾರೂ ಇಲ್ಲ, ಎಲ್ಲಿಯೂ ಇಲ್ಲ."

" ಅದಕ್ಕೇ ಈ ಹೇಡಿತನದ ಹಾದಿಯನ್ನು ಹಿಡಿದು ಬಂದಿದ್ದೀರಾ? "

ಮೋಹಿನಿಯ ಮುಖ ರೋಷದಿಂದ ಉರಿಯುತ್ತಿತ್ತು. ಅವಳ ತುಟಿಗಳು ನಡುಗುತ್ತಿದ್ದವು. ಸುತ್ತಲು ಕುಳಿತವರು ಉತ್ತರ ದೇಶೀಯರಾದ್ದರಿಂದ ಇವರ ಮಾತು ಅವರಿಗೆ ತಿಳಿಯದಿರಬೇಕು. ಅವರು ಸುಮ್ಮನೆ ಆಗೀಗ ಕಣ್ಣು ತಿರುವಿ ನೋಡಿಯೂ ನೋಡದ ಹಾಗೆ ನೋಡುತ್ತಿದ್ದರು. ಏನೋ ಗಂಡಹೆಂಡಿರ ಜಗಳ ಎಂದುಕೊಂಡಿರಬೇಕು, ಇವರ ಮಾತಿನ ಬಗೆಯನ್ನು ನೆನೆದು.

" ಇದು ಹೇಡಿತನದ ಹಾದಿಯಲ್ಲ, ಮೋಹಿನಿ."

" ಹಾಗಾದರೆ ಹೆಜ್ಜೆಗೊಂದು ಸುಳ್ಳು ಹೇಳುತ್ತ ನನ್ನ ಬೆನ್ನು ಯಾಕೆ ಹತ್ತಿದ್ದೀರಿ ? "

" ನಿನ್ನ ಹುಚ್ಚುತನದಿಂದ ನೀನು ಹಾಳಾಗಬೇಡ ಎಂದು ಹೇಳಲಿಕ್ಕೆ ! "

" ನನ್ನ ಹಿತ-ಅಹಿತ ನನಗೆ ಸಂಪೂರ್ಣ ಗೊತ್ತಿದೆ. ನೀವು ಸುಮ್ಮನೆ ನನಗಾಗಿ ಚಿಂತೆಮಾಡಿ ಕೊರಗಬೇಡಿರಿ—"

" ಈ ಕೊಂಕುಮಾತು ಸಾಕಿನ್ನು, ಮೋಹಿನಿ. ನಾನು ಹೇಳುವುದನ್ನಾದರೂ ಕೇಳು—"

" ಏನು ನೀವು ಹೇಳುವುದು ? "

" ನಿಧಾನವಾಗಿ ಕೇಳಿದರೆ ಎಲ್ಲವನ್ನೂ ಹೇಳುತ್ತೇನೆ. ಸುಮ್ಮನೆ ಸಿಡುಕು ಯಾತಕ್ಕೆ ? "

" ನನಗೆ ಏನನ್ನೂ ಕೇಳಬೇಕಾಗಿಲ್ಲ. ತಿಳಿಯಿತೆ? ನೀವು ಇಲ್ಲಿಂದ ಹೊರಡುತ್ತೀರೊ ಇಲ್ಲವೊ ? "

" ಈ ಮಾತನ್ನು ನೀನು ಈಗ ಹೇಳಬಹುದು. ಮುಂಬಯಿಗೆ ಹೋದ ಮೇಲೆ ತಿಳಿದೀತು ! "

ಮೋಹಿನಿಯ ಎದೆ ಒಂದರೆಕ್ಷಣ ನಡುಗಿತು. ತಾನಿಲ್ಲದಾಗ ಯಾವ ಯಾವ ಸುಳ್ಳಿನ ವ್ಯೂಹವನ್ನು ಈತ ಹೆಣೆದು ಸಿದ್ಧವಾಗಿರಿಸಿರಬಹುದೋ ಎಂದು.

" ಏನು ತಿಳಿಯುವುದು ಅಲ್ಲಿಯೇ ತಿಳಿಯಲಿ. ಇಲ್ಲಿ ಯಾವುದೂ ಬೇಡ."

" ನಿನಗೇನು ಹುಚ್ಚು, ಮೋಹಿನಿ ? ಆನಂದನ ಮನಸ್ಸು ತೀರ ಕೆಟ್ಟು ಹೋಗಿದೆ ನಿನ್ನ ವಿಷಯದಲ್ಲಿ...."

" ಅಷ್ಟು ಪುಣ್ಯದ ಕೆಲಸವನ್ನಾದರೂ ಮಾಡಿದ್ದೀರಲ್ಲ—ಇನ್ನಾದರೂ ಸಾಕುಮಾಡಿರಿ...."

" ನಾನು ಮಾಡಿದ್ದೇನೋ, ನೀನೇ ಮಾಡಿಕೊಂಡಿದ್ದೀಯೋ ಯಾರು ಹೇಳಬೇಕು ? ಈ ಹುಚ್ಚು ಹುಮ್ಮಸ್ಸು ಬಿಟ್ಟುಬಿಡು. ನಿನಗೆ ಎಲ್ಲಿಯೂ ಆಶ್ರಯ ದೊರೆಯಲಿಕ್ಕಿಲ್ಲ ! "

" ನಿಮಗೇಕೆ ಅಷ್ಟು ಚಿಂತೆ ? "

" ಅವನ್ನೇ ನೀನು ತಿಳಿದುಕೊಳ್ಳಬೇಕು. ನಿನಗೆ ವಿರುದ್ಧವಾಗಿ ನಾನು ವರ್ತಿಸುತ್ತೇನೆಂದು ನೀನು ತಿಳಿದುಕೊಂಡದ್ದೇ ತಪ್ಪು. ನಿನಗಾಗಿ ನಾನು ಎಷ್ಟು ಕಳವಳಪಡುತ್ತೇನೆಂಬುದು ನಿನಗೆ ತಿಳಿದಿದ್ದರೆ...."

" ನನಗೆ ಅದು ತಿಳಿಯಬೇಕಾಗಿಲ್ಲ. ನನಗಾಗಿ ತಳಮಳಪಡುವವರು ಇದ್ದಾರೆ."

ಮೋಹಿನಿಯ ಕಣ್ಣೆದುರು ವಸಂತನ ಚಿತ್ರ ಹಾಯ್ದುಹೋಯಿತು. ಆಮೇಲೆ ಅವನ ಸ್ಥಳದಲ್ಲಿ ಆನಂದನ ಮೂರ್ತಿ ಬಂದು ನಿಂತಿತು.

" ಅದೇ ನಿನ್ನನ್ನು ಹಾಳುಮಾಡುತ್ತಿದ್ದದ್ದು—"

" ಯಾಕೆ ? ಇವರು ನನ್ನನ್ನು ಹಾಳುಮಾಡಬೇಕೆಂದೇ ಮದುವೆ ಯಾಗಿದ್ದಾರೇನು ? "

" ಅದು ಅವನಿಗೆ ಗೊತ್ತು. ಆದರೆ ಅವನ ಆಶ್ರಯ ನಿನಗಿಲ್ಲದಿದ್ದರೆ ನಾನು ನಿನಗೆ ಯಾವಾಗಲೂ ಸಹಾಯ ಮಾಡಲು ಸಿದ್ಧನಿದ್ದೇನೆ ಎಂಬುದನ್ನು ನೀನು ಮರೆಯಬಾರದು—"

" ನನಗೆ ಇಂಥ ಸಾಲದ ಸಹಾಯ ಬೇಕಾಗಿಲ್ಲ."

" ಆ ಸಾಲದ ಸಹಾಯಕ್ಕೆ ನಾಳೆ ನೀನು ಬಾಯ್ದೆರೆಯಬೇಕಾದೀತು."

" ಹುಚ್ಚು ಕಲ್ಪನೆ ಅದು, ನಿಮ್ಮದು. ಅಂಥ ಸಾಲದ ಸಹಾಯವನ್ನು

ನಾನು ಎರಡನೆಯವರಿಂದ ಪಡೆಯಬೇಕಾಗಿದ್ದರೆ ನಿಮಗಿಂತ ಹತ್ತು ಪಾಲು, ಸಾವಿರ ಪಾಲು ಒಳ್ಳೆಯವರಿಂದ ನಾನು ಪಡೆಯಬಲ್ಲೆ. ಆದರೆ ಅದು ನನಗೆ ಬೇಕಾಗಿಲ್ಲ!"

"ಯಾಕೆ ಈ ಹಟ?"

"ಯಾಕೆ ಈ ಹಟ! ನಾನು ಹೆಣ್ಣೆಂದ ಮಾತ್ರಕ್ಕೆ ಬೀದಿಯ ನಾಯಿ ಅಲ್ಲ, ತಿಳಿಯಿತೆ? ನಾಲ್ಕು ಜನರಲ್ಲಿ ಮಾನದಿಂದ ಬದುಕಿ ಇರಬೇಕಾಗಿದೆ ನನಗೆ!"

"ಈಗ ನಡೆದದ್ದು ಒಳ್ಳೆ ಚೆಂದವಾಗಿಯೇ ನಡೆದಿದೆ, ಅಲ್ಲವೆ?"

"ಅದರ ಯೋಚನೆ ನಿಮಗೆ ಇರಬೇಕಾಗಿಲ್ಲ."

"ನನಗೇ ಇರಬೇಕಾಗಿದೆ. ನಮ್ಮ ಮನೆತನದ ಮಾನದ ಪ್ರಶ್ನೆಯಾಗಿದೆ ಈಗ ನಿನ್ನ ವಿಷಯ."

"ನಿಮ್ಮ ಮನೆತನ! ಬೆಂಕಿಬಿತ್ತು ಅದಕ್ಕೆ. ಕಳೆದ ಎರಡು ವರ್ಷಗಳಲ್ಲಿ ಬೇಕಾದಷ್ಟು ಮರ್ಯಾದೆ ತಂದಿದ್ದೀರಿ!"

"ಸಾಕುಮಾಡು ಮೋಹಿನಿ, ಬಾಯಿಬಿಡಬೇಡ. ನಿನ್ನ ಇಡೀ ಭವಿಷ್ಯವೇ ನನ್ನ ಕೈಯಲ್ಲಿದೆ ಎಂಬುದನ್ನು ಮರೆಯಬೇಡ."

"ಏನು ಮಾಡುವ ಹಾಗಿದ್ದೀರಿ?"

"ನೀನು ಇನ್ನೊಬ್ಬರ ಜೊತೆಯಲ್ಲಿ ಅಡ್ಡಾಡಿದ್ದನ್ನು ನಾನು ನೋಡಿದ್ದೇನೆ. ಸುಮ್ಮನೆ ನಾನು ಹೇಳಿದಂತೆ ಕೇಳಿದರೆ ಎಲ್ಲವೂ ಸರಿಯಾದೀತು. ಒಂದು ಚಾನ್ಸ್ ಕೊಟ್ಟಿದ್ದೇನೆ. ವಿಚಾರ ಮಾಡು."

"ನಾನು ಯಾವುದರಲ್ಲಿಯೂ ಇಲ್ಲದಾಗ ನೀವು ಏನು ಹೇಳಿದರೆ ಏನಾಗಬೇಕು?"

"ಏನಾಗಬೇಕು! ಈಗ ಹೇಗೆ ತಿಳಿದೀತು?"

"ತಿಳಿದಾಗ ತಿಳಿಯಲಿ. ನಾನು ಯಾವುದಕ್ಕೂ ಸಿದ್ಧಳಾಗಿದ್ದೇನೆ."

"ಈ ಹುಚ್ಚುತನಕ್ಕೆ ಬೀಳಬೇಡ, ಬೇಡ, ಮೋಹಿನಿ. ಇನ್ನೂ ಹತ್ತು ಸಾರೆ ಹೇಳುತ್ತೇನೆ. ನೀನು ಸುಖವಾಗಿರಬಹುದು. ಸುಮ್ಮನೆ ಆಮೇಲೆ ಪಶ್ಚಾತ್ತಾಪವಾದೀತು, ನೋಡು, ವಿಚಾರ ಮಾಡು—"

ಎದ್ದು ನೇರವಾಗಿ ಭಾಸ್ಕರನ ಕೆನ್ನೆಯ ಮೇಲೆ ಹೊಡೆಯಬೇಕೆನ್ನುವಷ್ಟು

ಸಂತಾಪ ಮೋಹಿನಿಯಲ್ಲಿ ಉರಿಯುತ್ತಿತ್ತು. ಆದರೆ ಸಿಟ್ಟನ್ನು ಬಿಗಿಹಿಡಿದು ಹೇಳಿದಳು :

" ನಾನೆಲ್ಲವನ್ನೂ ವಿಚಾರ ಮಾಡಿದ್ದೇನೆ........ಏನೆಂದು ತಿಳಿದಿದ್ದೀರಿ, ನಾನೆಂದರೆ ? ನಾಚಿಕೆಯಾಗುವುದಿಲ್ಲವೆ ಹೀಗೆ ಬೆನ್ನುಹತ್ತಿ ಬಂದು ಹೀಗೆಲ್ಲ ಮಾತನಾಡಲಿಕ್ಕೆ ? ಸುಖಕ್ಕಾಗಿ, ಬೇಕಾದವರು ಹೇಳಿದಂತೆ ನಡೆಯಲಿಕ್ಕೆ ನಾನೆಂದರೆ ಸೂಳೆಯೆಂದು ತಿಳಿದಿದ್ದೀರಾ ? ನೀವಿಲ್ಲಿಂದ ಏಳದಿದ್ದರೆ ನಾನೀಗಲೇ ಗಾರ್ಡನನ್ನು ಕರೆಯಬೇಕಾದೀತು. ಸುಮ್ಮನೆ ಎದ್ದುಹೋಗಿರಿ ಇಲ್ಲಿಂದ...."

ಕಪ್ಪಿನಲ್ಲಿ ಚಹವನ್ನು ಭಾಸ್ಕರ ಯಾವಾಗಲೋ ಸುರುವಿ ಇಟ್ಟಿದ್ದು ಆರಿಹೋಗುತ್ತಿತ್ತು. ಇಬ್ಬರೂ ಸುಮ್ಮನಾದರು. ಕೊನೆಗೆ ಭಾಸ್ಕರನೆಂದ :

" ಚಹವನ್ನು ತೆಗೆದುಕೊಳ್ಳುವುದೇ ಇಲ್ಲವೆ ಹಾಗಾದರೆ ? "

" ಇಲ್ಲ—"

" ತೆಗೆದುಕೊ, ನನ್ನ ಮಾತು ಕೇಳು...." ಎಂದು ಕಪ್ಪನ್ನು ಆಕೆಯೆದುರು ಹಿಡಿದ. ಮೋಹಿನಿ ಕಪ್ಪನ್ನು ಕೈಯಲ್ಲಿ ತೆಗೆದುಕೊಂಡು ಕ್ಷಣಾರ್ಧದಲ್ಲಿಯೇ ಚಹವನ್ನು ಕಿಟಕಿಯೊಳಗಿಂದ ಹೊರಗೆ ಸುರುವಿದಳು. ಭಾಸ್ಕರನಿಗೆ ತಡೆಯು ದಾಯಿತು. ತಟ್ಟನೆ ಎದ್ದುನಿಂತ. ಆಪಾದಮಸ್ತಕವೂ ಸಂತಾಪದಿಂದ ಉರಿಯು ತ್ತಿದ್ದ. ಮಾತಿನಿಂದ, ಕೃತಿಯಿಂದ ಮೋಹಿನಿ ಆತನ ಅಪಮಾನ ಮಾಡಿದ್ದಳು. ಸೇಡಿಗಾಗಿ ಹಾತೊರೆಯುತ್ತಿದ್ದ. ಕಂಪಾರ್ಟ್‌ಮೆಂಟ್‌ನಲ್ಲಿ ಇನ್ನು ಒಬ್ಬಿಬ್ಬರು ಹೆಣ್ಣುಮಕ್ಕಳಿದ್ದರೆಂದು ಒಳ್ಳೆಯದಾಯಿತು. ಆ ಉದ್ವೇಗದಲ್ಲಿ ಭಾಸ್ಕರ ಏನನ್ನೂ ಮಾಡಬಹುದಾಗಿತ್ತು. ಹೊರಹೊರಡುತ್ತ ಹೇಳಿದ :

" ಇದು ಇಷ್ಟು ಸಹಜವಾಗಿ ಮುಗಿಯಲಾರದು. ತಿಳಿಯಿತೆ, ಮೋಹಿನಿ. ಇಷ್ಟರಿಂದ ನೀನು ಪಾರಾಗಲಾರೆ. ಈ ಚಹ ಸುರುವಿದಂತೆ, ನಿನ್ನ ಜೀವವನ್ನೇ ಸುರುವಬೇಕಾದೀತು. ನೆನಪಿನಲ್ಲಿರಲಿ. ಇಷ್ಟೇ...." ಎಂದವನೆ ಹೊರಟುಹೋದ.

' ಅಷ್ಟು ಸುಲಭವಾಗಿಲ್ಲ, ಆ ಮಾತು. ಈ ಜೀವ ಅಷ್ಟು ಸುಲಭವಾಗಿ ಹೋಗಬೇಕಾಗಿದ್ದರೆ ಅದು ಹುಟ್ಟುತ್ತಲೇ ಇರಲಿಲ್ಲ ' ಎಂದು ಮೋಹಿನಿ ಮನಸ್ಸಿನಲ್ಲಂದುಕೊಂಡಳು.

ಗಾಡಿ ಯಾವಾಗಲೋ ಘಟ್ಟವನ್ನಿಳಿದು ಬಂದಿತ್ತು. ಮೋಹಿನಿಯ ಮನಸ್ಸು ನೊಂದುಕೊಂಡಿತ್ತು. ಸಿಟ್ಟೆಲ್ಲ ಇಳಿದು ಆತ್ಮಾನುಕಂಪ ಅದರ ಸ್ಥಳದಲ್ಲಿ

ಬಂದು ನಿಂತಿತ್ತು. 'ಏನು ದೈವ?' ಎಂದುಕೊಳ್ಳುತ್ತಿದ್ದಳು. ಕಳೆದ ಮೂರು ವಾರಗಳನ್ನು ಯಾವ ಮನಸ್ತಾಪವೂ ಇಲ್ಲದೆ ನಿಶ್ಚಿಂತೆಯಿಂದ ಕಳೆದದ್ದನ್ನು ನೆನೆದಾಗ ಹೃದಯ ಕಾತರವಾಗಿ ತಾಯಿಯನ್ನು ನೆನೆಯಿತು. ಅವಳ ವಾತ್ಸಲ್ಯ ಕಣ್ಣೀರನ್ನು ಕರೆತಂದಿತು. 'ಇನ್ನು ದಿನಬೆಳಗೂ ಇದೇ. ಹೆದರಿ ಏನು ಪ್ರಯೋಜನ?' ಎಂದು ಸಮಾಧಾನ ತಂದುಕೊಳ್ಳಲೆತ್ನಿಸಿದಳು.

ಅಕಸ್ಮಾತ್ತಾಗಿ ರೈಲಿನಲ್ಲಿ ಸಿಕ್ಕ ಆನಂದರಾಯನಿಂದ ಮೋಹಿನಿಯನ್ನು ಕುರಿತು ಸಾಕಷ್ಟು ಸಮಾಚಾರವನ್ನು ಸಂಗ್ರಹಿಸಿದ ವಸಂತನ ಮನಸ್ಸು ಎಷ್ಟೋ ಶಾಂತವಾಗಿತ್ತು. ಅವಳು ಊರಲ್ಲಿ ಇಷ್ಟು ದಿವಸ ಇಲ್ಲದಿದ್ದುದು ಯಾವ ಕಾರಣಕ್ಕಾಗಿ ಎಂಬುದನ್ನು ತಿಳಿಯಲು ಆತ ಆತುರಪಡುತ್ತಿದ್ದ. ಆ ಆತುರ ವನ್ನು ಇನ್ನು ಒಂದೆರಡು ದಿವಸದ ಮಟ್ಟಿಗೆ ತಡೆಹಿಡಿಯದೆ ಗತ್ಯಂತರವಿರಲಿಲ್ಲ. ಶನಿವಾರ ಆಕೆಯ ಪರೀಕ್ಷೆಗಾರಂಭ. ಪರೀಕ್ಷೆಯ ಸ್ಥಳವೂ ಗೊತ್ತಾಗಿತ್ತು. ಆ ದಿನ ಸುಮಾರು ಮುಂಜಾನೆ ಹತ್ತೂವರೆಗೆ ಅಲ್ಲಿಯೇ ಎಲ್ಲಾದರೂ ಕಾಯ್ದರೆ ಮೋಹಿನಿ ಸಿಕ್ಕೇ ಸಿಗುವಳೆಂಬ ಭರವಸೆಯಿದ್ದರೂ ಪರೀಕ್ಷೆಯ ಮೊದಲನೇ ದಿನ ಆಕೆಯನ್ನು ಕಾಣುವ ವಿಚಾರವನ್ನು ರದ್ದುಗೊಳಿಸಿದ್ದ. ಆನಂದನ ಮಾತಿನ ಮೇಲಿಂದ ಮೊದಲ ದಿನ ಆತ ಆಕೆಯ ಜೊತೆಯಲ್ಲಿ ಬಂದರೂ ಬರಬಹುದು ಎನಿಸಿದ್ದೇ ಹೀಗೆ ರದ್ದುಗೊಳಿಸುವುದಕ್ಕೆ ಕಾರಣವಾಗಿತ್ತು. ಹೇಗಿದ್ದರೂ ಸೋಮವಾರ ಬೆಳಗ್ಗೆ ಮೋಹಿನಿಗಾಗಿ ಕಾಯತಕ್ಕದ್ದು ಎಂದು ನಿರ್ಧರಿಸಿಕೊಂಡೇ ವಸಂತ ಮನೆಯಿಂದ ಹೊರಬಿದ್ದ.

ಒಂದು ಬಗೆಯಲ್ಲಿ ಮನಸ್ಸು ಹಿಂತೆಗೆಯುತ್ತಿತ್ತು. ಹಿಂದಿನ ಸಲ ತಾನು ಮೋಹಿನಿ ನಿಲ್ದಾಣದ ಹತ್ತಿರ ಮಾತನಾಡುತ್ತ ನಿಂತ ಸಮಾಚಾರ ಆನಂದನ ವರೆಗೂ ಮುಟ್ಟಿತ್ತು. ಅದು ಭಾಸ್ಕರನ ಮುಖಾಂತರ. ಮೋಹಿನಿಯೂ ಹೇಳಿ ದ್ದಳು. ಆದರೆ ಮೊದಲು ಹೇಳಿದವರು ಯಾರು? ಭಾಸ್ಕರ ಮೊದಲು ಹೇಳಿ ಅದಕ್ಕೆ ಅನುಸರಿಸಿ ಆನಂದ ಮೋಹಿನಿಯನ್ನು ಕೇಳಿದಾಗ್ಗೆ ಆಕೆ ಒಪ್ಪಿಕೊಂಡಿ ದ್ದಾದರೆ ಅದಕ್ಕೊಂದು ಬೇರೆಯಾದ ಸ್ವರೂಪ ಬರುತ್ತಿತ್ತು. ಅಂತೂ ಭಾಸ್ಕರ ಆ ಸನ್ನಿವೇಶದ ಉಪಯೋಗವನ್ನು ಯಾವ ರೀತಿಯಿಂದ ಮಾಡಿಕೊಳ್ಳಬಹು ದೆಂಬುದನ್ನು ಊಹಿಸಲು ವಸಂತನಿಗೆ ಸಾಧ್ಯವಾಗಲಿಲ್ಲ. ಒಂದು ವೇಳೆ ಆತ ಮೋಹಿನಿಯನ್ನು ಇಕ್ಕಟ್ಟಿನಲ್ಲಿ ತರುವುದಕ್ಕಾಗಿ ತನ್ನ ಮೇಲೆಯೂ ಸಂಶಯದ ದೃಷ್ಟಿಯನ್ನಿಡುವುದು ಅಸಾಧ್ಯವಿರಲಿಲ್ಲ. ಆದ್ದರಿಂದ ಮೋಹಿನಿಯನ್ನು ನೋಡಲು, ಅವಳನ್ನು ಮಾತಾಡಿಸಲು ವಸಂತ ಎಷ್ಟೇ ಆತುರನಾಗಿದ್ದರೂ, ಸಂದರ್ಶನವನ್ನು ಅತ್ಯಂತ ಯೋಚನಾಪೂರ್ವಕವಾಗಿ ನಡೆಸಬೇಕು ಎಂದು ಜಾಗರೂಕನಾಗಿಯೇ ಇದ್ದ.

ಸೋಮವಾರ ಸರಿಯಾಗಿ ಹತ್ತೂವರೆಗೆ ಎಲ್‌ಫಿನ್‌ಸ್ಟನ್ ಕಾಲೇಜಿನ ಹಿಂಬಾಗಿಲಿನ ಹತ್ತಿರ ವಸಂತ ಸಿದ್ಧವಾಗಿದ್ದ. ಚರ್ಚ್‌ಗೇಟ್‌ನಿಂದ ಬರುವವರು ಅಲ್ಲಿಂದಲೇ ಪರೀಕ್ಷಾಮಂದಿರವನ್ನು ಸೇರುವುದು ಸಹಜವಾದ್ದರಿಂದ ಮೋಹಿನಿ ಅಲ್ಲಿಂದಲೇ ಒಳಗಡೆ ಹೋಗಬೇಕು, ಅಲ್ಲಿ ಸಿಕ್ಕೇ ಸಿಕ್ಕುವಳು ಎಂದು ಕಾಯುತ್ತಿದ್ದ. ವಸಂತನ ಎಣಿಕೆ ತಪ್ಪಲಿಲ್ಲ. ಹತ್ತೂಮುಕ್ಕಾಲಾಗುತ್ತ ಬಂದಿತ್ತು. ಅವಸರವಸರವಾಗಿ ಮೋಹಿನಿ ಬಂದಳು, ಎದುರಿನಿಂದ. ತನ್ನ ಅವಸರದಲ್ಲಿ ತನ್ನನ್ನು ನೋಡದೆಯೇ ಎಲ್ಲಿ ಒಳಗಡೆ ಹೋಗಿಬಿಡುವಳೋ ಎಂದು ಭಯ. ನಾಲ್ಕಾರು ಹೆಜ್ಜೆ ಮುಂದೆ ಬರುವಷ್ಟರಲ್ಲಿ ಮೋಹಿನಿ ನೋಡಿದಳು! ಆಕೆಗೆ ತುಂಬ ಆಶ್ಚರ್ಯ. ಊರಲ್ಲಿ ತಾನು ಬಂದು ಮೂರು ದಿನಗಳಾಗಿದ್ದರೂ ವಸಂತನನ್ನು ಸಂಧಿಸುವುದು ಸಾಧ್ಯವಾಗಿರಲಿಲ್ಲ. ಅದೇ ವಸಂತ ಹೀಗೆ ಅಕಸ್ಮಾತ್ತಾಗಿ ಸಿಗಬೇಕೆಂದರೆ! ಸರಕ್ಕನೆ ಮುಂದಕ್ಕೆ ಬಂದಳು.

"ಎಲ! ನೀವು—ಇಲ್ಲಿ ಹೀಗೆ?"

"ಇಲ್ಲಿ ಒಬ್ಬ ಫ್ರೆಂಡ್‌ಗಾಗಿ ಕಾಯುತ್ತಿದ್ದೆ!" ಎಂದು ತುಂಟುನಗೆ ಬೀರಿ ಹೇಳಿದ.

"ಪರೀಕ್ಷೆಗೆ ಕುಳಿತಿದ್ದಾರೇನು?"

"ಹೌದು!"

"ನಾನು ನಿಮ್ಮನ್ನು ಅಲ್ಲಿಂದಲೇ ನೋಡಿದೆ. ಆದರೆ ಹೌದೋ ಅಲ್ಲವೋ ಅಂದುಕೊಂಡೆ. ಮೇಲಾಗಿ ನೀವು ಇಲ್ಲಿ ಹೇಗೆ ಇದ್ದೀರಿ ಎಂಬ ಅನುಮಾನ—"

"ಅಂತೂ ಇದ್ದೇನೆ!"

"ಏನು ಹಾಗೆನ್ನುತ್ತೀರಿ?"

"ಹೇಳದೆ ಕೇಳದೆ ಅದೃಶ್ಯರಾಗುವವರಿಗೆ ಏನು ಹೇಳಿದರೇನು?" ಎಂದು ನಕ್ಕ.

"ಅದೃಶ್ಯವಾಗಬೇಕಾಗಿತ್ತು."

"ಯಾಕೆ?"

"ಯಾಕೇನು, ಮೋಹಿನಿ ಯಾವಾಗಲೂ ಇಲ್ಲಿಯೇ ಇರಬೇಕೆ?"

"ಹಾಗಾದರೆ ಈಗ ಸ್ವರ್ಗಲೋಕಕ್ಕೆ ಹೋಗಿಬಂದಿರೇನು?"

" ಹೌದು. ಸ್ವರ್ಗಲೋಕಕ್ಕೆಯೇ ಹೋಗಿದ್ದೆ ! "

" ಅಂದರೆ ? "

" ತಾಯಿಯಿದ್ದಲ್ಲಿ ಸ್ವರ್ಗ. ತಾಯಿಯ ಹತ್ತಿರ ಹೋಗಿದ್ದೆ."

" ಅದು ನನಗೆ ಗೊತ್ತು."

" ನಿಮಗೆ ಯಾರು ಹೇಳಿದರು ? "

" ಹೀಗೆಯೇ ಹೇಳಿದರು—ಒಬ್ಬರು. ನೀವು ಹೇಳದೇ ಇದ್ದರೆ ನನಗೆ ಗೊತ್ತೇ ಆಗುವುದಿಲ್ಲವೆ ? "

" ಹೇಳಿರಿ—ಯಾರು ಹೇಳಿದರು ? "

" ಆನಂದರಾಯರು ! "

" ಸಿಕ್ಕಿದ್ದರೆ ನಿಮಗೆ ? "

" ಹೌದು. ಅವರು ಸಿಕ್ಕಿದ್ದರೆಂದೇ ನೀವೂ ಸಿಕ್ಕಿರಿ. ಇಲ್ಲವಾದರೆ...."

" ಇಲ್ಲವಾದರೆ ಏನು ? "

" ಅದೆಲ್ಲ ನಿಮಗೇಕೆ ? "

" ಅದೇನು, ಹೀಗೆ ಮಾತಾಡುತ್ತಿದ್ದೀರಲ್ಲ ? "

" ಬರುತ್ತೇನೆಂದು ಹೇಳಿ ಬಾರದವರೆದುರು ಹೀಗೆಯೇ ಮಾತಾಡ ಬೇಕು ! "

" ಅಷ್ಟು ಕೋಪಿಸಿಕೊಂಡಿದ್ದೀರಾ ನನ್ನ ಮೇಲೆ ? "

" ನಾನೇನೋ ಕೋಪಿಸಿಕೊಂಡೇನು, ಕೇಳುವರಾರು ? "

" ಹೀಗೆಲ್ಲ ಹೇಳಬೇಡಿರಿ...."

" ಅದಿರಲಿ, ಹೀಗೇಕೆ ಒಮ್ಮಿಂದೊಮ್ಮೆ ಊರಿಗೆ ಹೊರಟುಬಿಟ್ಟಿರಿ ? "

" ಓ ! ಅದೊಂದು ದೊಡ್ಡ ಕತೆ."

" ಹೇಳಕೂಡದೆ ? "

" ಹೇಳದೆ ಏನು ? " ಎಂದು ಮೋಹಿನಿ ವಸಂತನ ಮುಖವನ್ನು ನೋಡಿದಳು. ' ನಿಮಗೆ ಹೇಳದಿದ್ದರೆ ಬೇರೆ ಯಾರಿಗೆ ಹೇಳಬಹುದು ? ' ಎಂದು ಕೇಳುತ್ತಿರುವಂತಿತ್ತು ಅವಳ ಕಣ್ಣುಗಳಲ್ಲಿಯ ಭಾವ.

" ಹಾಗಾದರೆ ಯಾವಾಗ ? "

ಎಂದು ವಸಂತ ಕೇಳುತ್ತಿರುವಾಗಲೇ ಹತ್ತು ನಿಮಿಷ ಮೊದಲಿನ ಗಂಟೆ

ಹೊಡೆಯಿತು. ಹೊರಗಡೆ ಅಲೆದಾಡುತ್ತಿದ್ದ ಹುಡುಗ ಹುಡುಗಿಯರೆಲ್ಲರೂ ಅವಸರವಸರವಾಗಿ ಪುಸ್ತಕಗಳ ಪುಟಗಳನ್ನು ತಿರುವಿಹಾಕಿ ಒಳಗಡೆ ಹೊರಟರು. ಮೋಹಿನಿಗೂ ಅವಸರವೆನಿಸತೊಡಗಿತು. ಅವಳೆಂದಳು :

" ಗಂಟೆಯಾಗಿಹೋಯಿತು. ನಾನೀಗ ಹೊರಡಲೇಬೇಕು."

" ಹಾಗಾದರೆ ಯಾವಾಗ? ಸಂಜೆ ಪೇಪರ್ ಯಾವಾಗ ಮುಗಿಯುತ್ತದೆ ? "

" ಆರು ಗಂಟೆ."

" ಹಾಗಾದರೆ ಆಗ ಬರಲೇ ನಾನಿಲ್ಲಿ ? "

" ಇವತ್ತು ಬೇಡ. ನನಗೆ ಹೋಗಲಿಕ್ಕೆ ತಡವಾಗುತ್ತದೆ. ನಾಳಿನ ವಿಷಯ ನೋಡಿಕೊಳ್ಳಬೇಕು...."

" ಪರೀಕ್ಷೆ ಮುಗಿಯುವುದು ಯಾವತ್ತು ? "

" ಗುರುವಾರ ಮಧ್ಯಾಹ್ನ ! "

" ಎಷ್ಟು ಗಂಟೆಗೆ? "

" ಎರಡು."

" ಹಾಗಾದರೆ ಆಗ ಬರಲೆ ? "

" ಹುಂ...."

" ಇಲ್ಲಿಯೆ ? "

" ಹುಂ "

" ತಪ್ಪಿಸಕೂಡದು, ಮತ್ತೆ ! " ಎಂದು ನಸುನಕ್ಕ.

" ಇಲ್ಲ " ಎಂದು ಮೋಹಿನಿ ನಕ್ಕು ಒಳಗಡೆ ಹೊರಟಳು. ವಸಂತ ಮೋಹಿನಿಯನ್ನು ನೋಡುತ್ತಲೇ ಇದ್ದ. ಹೋಗುವಾಗ ಮೋಹಿನಿಯೂ ಮತ್ತೊಮ್ಮೆ ಹಿಂತಿರುಗಿ ನೋಡಿದಳು. ತಿರುಗಿ ಆಫೀಸಿನ ಕಡೆಗೆ ಹೋಗುತ್ತಿದ್ದಾಗ ವಸಂತ ಮೋಹಿನಿಯ ಮಾತುಗಳನ್ನೇ ನೆನೆಯುತ್ತಿದ್ದ : ' ತಾಯಿ ಇದ್ದಲ್ಲಿ ಸ್ವರ್ಗ, ಸ್ವರ್ಗಲೋಕಕ್ಕೆ ಹೋಗಿದ್ದೆ ' ಎಂದಿದ್ದಳು. ವಸಂತನೆಂದುಕೊಂಡ : ' ಹೌದು, ನಿಜವಾಗಿಯೂ ಸ್ವರ್ಗಲೋಕಕ್ಕೆ ಹೋಗಿ ಬಂದಂತಿದೆ ' ಎಂದು. ಮೂರು ವಾರಗಳಲ್ಲಿಯೇ ತುಸು ಮೈದುಂಬಿಕೊಂಡಿದ್ದ ಮೋಹಿನಿ ' ನಿಜವಾಗಿಯೂ ಸ್ವರ್ಗಲೋಕದ ಅಪ್ಸರೆಯೇ ಆಗಿದ್ದಾಳೆ ' ಎಂದುಕೊಂಡ.

೮

ಸೋಮವಾರದಿಂದ ಗುರುವಾರದವರೆಗೆ ವಸಂತ ಗುರುವಾರದ ಮಧ್ಯಾಹ್ನ ವನ್ನೇ ಇದಿರುನೋಡುತ್ತಿದ್ದನೆಂದೇ ಹೇಳಬಹುದು. ಮೋಹಿನಿ ತನ್ನ ಮನಸ್ಸನ್ನು ಇಷ್ಟರಮಟ್ಟಿಗೆ ವ್ಯಾಪಿಸಬಹುದೆಂದು ಆತನಿಗೆ ತೋರಲಿಲ್ಲ. ಅದನ್ನು ನೆನೆದಾಗ ತಾನೇ ಹೇಳಿಕೊಳ್ಳುತ್ತಿದ್ದ : ' ಇದು ಸರಿಯಲ್ಲ. ಇದನ್ನು ತಡೆಯಲೇಬೇಕು ಎಷ್ಟಾದರೂ ಮೋಹಿನಿ ಪರಸ್ತ್ರೀ ' ಎಂದು. ಆದರೆ ಮೋಹಿನಿಯ ಮೂರ್ತಿ ಕಣ್ಣೆದುರು ನಿಂತಾಗ, ಅದರಲ್ಲಿಯಂತೂ ಕಳೆದ ಎರಡು ಮೂರು ವಾರಗಳ ನಂತರ ಮೊನ್ನಿನ ದಿವಸ ಇನ್ನೂ ಮೋಹಿತಳಾದ ಮೋಹಿನಿಯನ್ನು ನೆನೆದಾಗ ಆ ವಿಚಾರಗಳು ಮಾಯವಾಗಿ ಮನಸ್ಸು ಅವಳಿಗೆ ಸಂಪೂರ್ಣವಾಗಿ ಮಾರು ಹೋಗಿತ್ತು. ಈ ರೀತಿಯಾಗಿ ಸೆರೆಹೋದ ಮನಸ್ಸು ಮೋಹಿನಿಯನ್ನು ಎಲ್ಲಿ ಯಾದರೂ ಮಾತಿನಿಂದ ಮನ ನೋಯಿಸಬಹುದೇ ಎಂದು ಆಗಾಗ ಯೋಚಿಸು ತ್ತಿದ್ದ. ಮೋಹಿನಿ ತನ್ನ ಕೂಡ ನಿಶ್ಶಂಕವಾಗಿ ಮಾತನಾಡುತ್ತಿದ್ದಳು. ಆದರೆ ಅವಳ ಹೃದಯ ತನ್ನ ಬಗೆಯಲ್ಲಿ ಯಾವ ರೀತಿಯಾಗಿ ಮಿಡಿಯುತ್ತಿರಬಹುದು ಎಂಬುದನ್ನು ಇದುವರೆಗೆ ವಸಂತ ಯೋಚಿಸಿರಲಿಲ್ಲ. ಸೋಮವಾರ ಆಕೆಯನ್ನು ನೋಡಿದಾಗಿನಿಂದ, ತನ್ನನ್ನು ನೋಡಲು, ತನ್ನಷ್ಟೇ ಉತ್ಕಂಠೆಯನ್ನು ಆಕೆ ತೋರಿಸಿದಾಗಿನಿಂದ, ವಸಂತ ಅದನ್ನು ತಿಳಿಯಲು ಕುತೂಹಲಪಡುತ್ತಿದ್ದ. ಆದ್ದರಿಂದಲೇ ಗುರುವಾರದ ಮಧ್ಯಾಹ್ನವನ್ನು ವಸಂತ ಕ್ಷಣಕ್ಷಣಕ್ಕೂ ಇದಿರು ನೋಡುತ್ತಿದ್ದ.

ಗುರುವಾರ ಆಫೀಸಿಗೆ ಹೋದಾಗಿನಿಂದ ತನಗೆ ಮೈಯಲ್ಲಿ ಅಷ್ಟು ಸ್ವಸ್ಥ ವಿಲ್ಲವೆಂದು ಸುದ್ದಿಯನ್ನು ಸಾರಿ ತಾನು ಬೇಗನೆ ಹೊರಡುವುದಕ್ಕೆ ಪೂರ್ವ ಪೀಠಿಕೆಯನ್ನು ಹಾಕಿದ್ದ. ಒಂದೂವರೆ ಗಂಟೆಯ ಸುಮಾರಿಗೆ ತನ್ನಿಂದ ಕೆಲಸ ವಾಗದೆಂದೂ ತಾನು ಮನೆಗೆ ಹೋಗಬೇಕೆಂದೂ ಹೇಳಿ ಹೊರಟುಬಿಟ್ಟ. ವಸಂತ ಕಾಲೇಜಿನ ಹತ್ತಿರ ಬಂದು ನಿಂತಾಗ ಇನ್ನೂ ಎರಡು ಹೊಡೆದಿರಲಿಲ್ಲ. ಬಿಸಿಲು ಉರಿಯುತ್ತಿತ್ತು. ಆದರೆ ವಸಂತನ ಲಕ್ಷ್ಯವೆಲ್ಲವೂ ಒಬ್ಬೊಬ್ಬರಾಗಿ ಪರೀಕ್ಷಾಮಂದಿರದಿಂದ ಹೊರಬರುತ್ತಿದ್ದ ವಿದ್ಯಾರ್ಥಿನಿಯರ ಮೇಲಿತ್ತು. ಎರಡು ಗಂಟೆಯಾಯಿತು. ತೆರೆತೆರೆಯಾಗಿ ವಿದ್ಯಾರ್ಥಿಗಳು ಹೊರಗೆ ಧುಮುಕ

ಹತ್ತಿದರು. ಪ್ರತಿಯೊಬ್ಬನಲ್ಲಿಯೂ ಪರೀಕ್ಷೆ ಮುಗಿದ ಉತ್ಸಾಹ. ಆ ಕ್ಷಣದಲ್ಲಿ ಪರಿಣಾಮವೇನಾದೀತೆಂಬುದಕ್ಕಿಂತ ಪರೀಕ್ಷೆಯಂತೂ ಮುಗಿತುಹೋಯಿತೆಂಬ ವಿಚಾರವೇ ಪ್ರಧಾನವಾದಂತಿತ್ತು. ಕೊನೆಗೆ ಮೋಹಿನಿ ಇನ್ನೂ ಮೂರು ನಾಲ್ಕು ಜನ ವಿದ್ಯಾರ್ಥಿನಿಯರ ಜೊತೆಯಲ್ಲಿ ಬರುತ್ತಿದ್ದಳು. ಎಲ್ಲಿ ಅವರ ಜೊತೆಯಲ್ಲಿ ಹೊರಟುಹೋಗಿಬಿಡುವಳೋ ಎಂದು ವಸಂತ ತವಕಪಡುತ್ತಿರುವಾಗಲೇ ಮೋಹಿನಿ ವಸಂತನನ್ನು ಕಂಡು ಕೊರಳಲ್ಲಾಡಿಸಿ ಕಣ್ಣಿನಿಂದ ಸೂಚಿಸಿದಳು: 'ಅಲ್ಲಿಯೇ ತಡೆಯಿರಿ. ಈ ಜೊತೆಗಾರ್ತಿಯರನ್ನು ಇದೇ ಬಿಟ್ಟು ಬರುತ್ತೇನೆ' ಎಂದು.

ಮೂರು ನಾಲ್ಕು ನಿಮಿಷಗಳಲ್ಲಿಯೇ ಮೋಹಿನಿ ಬಂದಳು. ಮುಖದ ಮೇಲೆ ದಣಿವು ಸ್ಪಷ್ಟವಾಗಿ ಕಾಣುತ್ತಿದ್ದರೂ ಆ ದಣಿವಿನಲ್ಲಿಯೂ ಒಂದು ಬೇರೆಯಾದ ಬೆಡಗಿತ್ತೆನಿಸಿತು ವಸಂತನಿಗೆ.

"ಉಶ್ ಅಂತೂ ಒಮ್ಮೆ ಮುಗಿದೇಹೋಯಿತು–"

"ಹೇಗಿದ್ದುವು ಪೇಪರು?"

"ಅಷ್ಟೇನೂ ಕಠಿನವಿರಲಿಲ್ಲ."

"ನೀವು ಹೇಗೆ ಬರೆದಿದ್ದೀರಿ?"

"ಚೆನ್ನಾಗಿಯೇ ಬರೆದೆ. ಯಾವ ಹೆದರಿಕೆಯೂ ಇಲ್ಲ."

"ಹಾಗಾದರೇನು? ಪರೀಕ್ಷೆಯ ಪರಿಣಾಮದ ಚಹವನ್ನು ನೀವು ಈಗಲೇ ಕೊಡಬೇಕಾಯಿತಲ್ಲ!"

"ಓ. ಎಸ್! ಅದಕ್ಕೇನಂತೆ? ಆದರೆ ನನಗಾಗಬೇಕಾದಷ್ಟು ಸಮಾಧಾನ ಆಗಲಿಲ್ಲ."

"ಯಾಕೆ? ಆನರ್ಸ್ ಇಲ್ಲವೇನು?"

"ಆನರ್ಸ್ ಏನು ಯಾವಾಗಲೂ ಆಗಬಹುದು. ಅದರ ಹೆದರಿಕೆಯೇ ನನಗಿರಲಿಲ್ಲ. ಏನೋ ನಂಬರ್ ಮೇಲಕ್ಕೆ ಬರಬೇಕು ಎಂದುಕೊಳ್ಳುತ್ತಿದ್ದೆ."

"ಈಗೇನಾಯಿತು?"

"ನೋಡಬೇಕು. ಇತಿಹಾಸದ ಗ್ರೂಪ್‌ನಲ್ಲಿ ಒಂದು ಪೇಪರ್ ಅಷ್ಟು ಸರಿಯಾಗಿ ಬರೆಯಲಾಗಲಿಲ್ಲ."

"ಅದು ಒಂದರಿಂದ ಎಷ್ಟು ನಷ್ಟ ಆದೀತು?"

"ನಷ್ಟವೇನು ವಿಶೇಷವಾಗದಿದ್ದರೂ ಅದೂ ಒಂದು ಚೆನ್ನಾಗಾಗಿದ್ದರೆ ಇನ್ನೂ ನನಗೆ ಹೆಚ್ಚು ಆತ್ಮವಿಶ್ವಾಸವಿರುತ್ತಿತ್ತು, ಅಲ್ಲವೆ?"

ಇಬ್ಬರಿಗೂ ತಿಳಿಯದಲೇ ವಿಶ್ವವಿದ್ಯಾಲಯವನ್ನು ದಾಟಿ ಹಿಂಬದಿಯ ದೊಡ್ಡ ಬೀದಿಗುಂಟ ನಡೆದಿದ್ದರು.

ವಸಂತ ಕೇಳಿದ:

"ಈಗ ಎಲ್ಲಿಗೆ?"

"ಎಲ್ಲಿಯೂ ಇಲ್ಲ, ನಾನೀಗ ನೇರ ಮನೆಗೆ ಹೋಗಬೇಕು!"

ವಸಂತನಿಗೆ ಉತ್ಸಾಹಭಂಗವಾಯಿತೆನ್ನುವುದನ್ನು ಮೋಹಿನಿ ತಟ್ಟನೆ ಗುರುತಿಸಿದಳು. ತಪ್ಪನ್ನು ಒಪ್ಪಿಕೊಳ್ಳುತ್ತಿರುವಂತೆ ಹೇಳಿದಳು:

"ಏನು ಮಾಡಲಿ? ಬೆಳಗ್ಗೆ ತುಂಬ ಅವಸರವಾಗಿಬಿಟ್ಟಿತು. ಊಟ ಮಾಡಲಿಲ್ಲ. ಊಟಕ್ಕಾಗಿ ಬರುತ್ತೇನೆಂದು ಹೇಳಿದ್ದೇನೆ."

"ಇಷ್ಟೇ ತಾನೆ?" ವಸಂತ ಉತ್ಸಾಹಿತನಾಗಿ ಕೇಳಿ, "ಊಟವೇನು? ಎಲ್ಲಿಯಾದರೂ ಮಾಡಬಹುದು" ಎಂದ.

"ಬೇಡ. ಮನೆಯಲ್ಲಿ ದಾರಿ ನೋಡುತ್ತಿರಬಹುದು. ಬರುತ್ತೇನೆಂದು ಹೇಳಿದ್ದೇನೆ."

ತನ್ನ ಸೂಚನೆಯಿಂದ ಮೋಹಿನಿ ಅನುಮಾನಿಸುತ್ತಿದ್ದಾಳೆಂಬುದನ್ನು ತಿಳಿದು ಬೇರೊಂದು ದಾರಿಯನ್ನು ಹಿಡಿದು ಕೇಳಿದ:

"ಬರುತ್ತೇನೆಂದು ಹೇಳಿದ್ದೀರಾ? ಹಾಗಾದರೆ ನಾನು ಇಲ್ಲಿ ಬಾರದೇ ಇದ್ದರೂ ನಡೆಯುವಂತಿತ್ತು!"

ವಸಂತನ ಭಾವ ಮೋಹಿನಿಗೆ ತಟ್ಟನೆ ಹೊಳೆಯಿತು. ಅಸಹಾಯತೆಯಿಂದ ಉಸಿರಿದಳು: "ನಾನೇನು ಮಾಡಲಿ? ತುಂಬ ಗಡಿಬಿಡಿಯಾಗಿಬಿಟ್ಟಿತು. ಹೊರಡುವ ಅವಸರದಲ್ಲಿ ಬರುತ್ತೇನೆಂದು ಅಂದುಬಿಟ್ಟೆ."

'ನಿಮಗಾಗಿ ಅಷ್ಟೊಂದು ದಾರಿಯನ್ನಾದರೂ ಯಾರು ಕಾಯುತ್ತಾರೆ?' ಎಂದು ಮಾತು ನಾಲಗೆಯ ತುದಿಯ ಮೇಲೆ ಬಂದಿತ್ತು. ಆದರೆ ಹಾಗೆ ಹೇಳುವುದು ಸರಿಯಾಗಲಿಕ್ಕಿಲ್ಲವೆಂದು ಅಂದ: "ನೀವು ಹೋಗಲೇಬೇಕಾದರೆ ನಾನು ತಿರುಗಿ ಆಫೀಸಿಗೆ ಹೊರಟುಬಿಡುವೆ!" ಎಂದು ವಸಂತ ತಡೆದು ನಿಂತೇಬಿಟ್ಟ. ಮೋಹಿನಿಗೆ ಏನು ಮಾಡಬೇಕೆಂಬುದು ತಿಳಿಯದಾಯಿತು. ತನಗಾಗಿ

ಅಲ್ಲಿಯ ವರೆಗೆ ಬಂದು, ದಾರಿ ಕಾಯ್ದು ವಸಂತನನ್ನು ನಿರಾಶೆಗೊಳಿಸಲು ಮನಸ್ಸೊಪ್ಪಲೊಲ್ಲದು. ಕೊನೆಗೆ ಹೇಳಿದಳು :

" ಹಾಗಾದರೆ ಹೀಗೆ ಮಾಡಬಹುದು : ನೀವು ಈಗ ದಾದರಿನ ವರೆಗೆ ಬನ್ನಿರಿ. ಅಂದರೆ ವಿಚಾರ ಮಾಡಲಿಕ್ಕೆ ಅರ್ಧ ಗಂಟೆ ಸಿಗುತ್ತದೆ."

" ಏನು ವಿಚಾರ ಮಾಡಲಿಕ್ಕೆ ? "

" ನಾನೀಗ ಬೋರಿವಲಿಗೆ ಹೋಗಬೇಕೋ ಬೇಡವೊ ಎಂಬುದನ್ನು."

" ನನ್ನ ಮಟ್ಟಿಗೆ ವಿಚಾರಕ್ಕೆ ಅವಕಾಶವೇ ಇಲ್ಲ ! "

" ನಿಮ್ಮ ನಿರ್ಣಯ ನನಗೆ ಗೊತ್ತು. ಆದರೆ ಅದನ್ನು ನಾನು ಸ್ವೀಕರಿಸ ಬೇಕೇ ಎಂಬುದನ್ನು ವಿಚಾರಿಸಲಿಕ್ಕೆ ನನಗೆ ಅವಕಾಶವೂ ಇರಬಾರದೆ ? "

" ಆಲ್‌ರಾಯಿಟ್, ದಾದರ್ ಸ್ಟೇಶನ್ ಬರುವುದರೊಳಗಾಗಿ ನಿರ್ಣಯ ಹೇಳಬೇಕು ! "

ಎಂದು ಒಬ್ಬರನ್ನೊಬ್ಬರು ನೋಡಿ ನೋಡಿ ನಸುನಕ್ಕರು. ವಸಂತನಿಗೆ ತಿಳಿದುಹೋಗಿತ್ತು, ಮನೆಗೆ ಹೋಗಲೇಬೇಕೆಂಬ ಮೋಹಿನಿಯ ನಿರ್ಧಾರ ಆಗಲೇ ಕುಸಿಯಹತ್ತಿದೆಯೆಂದು ! ವಸಂತನ ಎಣಿಕೆ ತಪ್ಪಲಿಲ್ಲ....ಪರೇಳ್ ನಿಲ್ದಾಣವನ್ನು ದಾಟುವಾಗಲೇ ಮೋಹಿನಿಯ ಅನುಮಾನ ಆಗಲೇ ಕರಗಿ ಹೋಗಿತ್ತು. ದಾದರಿನಲ್ಲಿ ಗಾಡಿ ನಿಂತ ಕೂಡಲೇ ಮೋಹಿನಿ ಏನನ್ನೂ ಮಾತಾಡದೆ ಕೆಳಗಿಳಿಯಹೊರಟದ್ದನ್ನು ನೋಡಿ ವನಂತನಿಗೆ ಮೋಜೆನಿಸಿತು. ಕೆಳಗಿಳಿದು ಬಂದಮೇಲೆ ಅವಳ ಮುಖವನ್ನೇ ನೋಡುತ್ತ ವಸಂತನೆಂದ :

" ಯಾಕೆ ? ನಿರ್ಧಾರವಾಯಿತೆ ? "

" ಮಾಡುವುದೇನು ಮತ್ತೆ, ಈ ಪರಿ ಹಟವನ್ನೇ ಹಿಡಿದರೆ ? "

" ನಾನೇನು ಹಟ ಹಿಡಿದೆ ? "

" ಹಟ ಹಿಡಿಯಲಿಲ್ಲವೆ ? ಹಾಗಾದರೆ ಇಲ್ಲಿ ಬರುವವರೆಗೂ ಸುಮ್ಮನೇಕೆ ಕುಳಿತಿದ್ದಿರಿ ? "

" ನಿಮ್ಮ ನಿರ್ಣಯಕ್ಕೆ ತೊಂದರೆಯಾಗಬಾರದು ಎಂದು ! "

ಮೋಹಿನಿಗೆ ವಸಂತನ ಮಾತು ಸೇರಿಕೆಯಾಯಿತು. ಪ್ಲಾಟ್‌ಫಾರ್ಮ್‌ನಿಂದ ಹೊರಗೆ ಬಂದ ಕೂಡಲೆ ಕೇಳಿದಳು :

" ಈಗ ಎಲ್ಲಿಗೆ ಹೋಗುವುದು ? "

" ನಿಮಗೆ ಊಟವಾಗಬೇಕಲ್ಲವೆ ? "

" ಆಗಬೇಕೆಂದೇನೂ ಇಲ್ಲ ! "

" ನೋ, ನೋ, ಊಟ ಮಾಡಲೇಬೇಕು. ಇಲ್ಲಿಯೇ ಶಿವಾಜಿ ಪಾರ್ಕಿನ ಹತ್ತಿರ ಸೊಗಸಾದ ಹೊಟೇಲೊಂದಿದೆ. ಕುಳಿತು ಮಾತನಾಡಲಿಕ್ಕೂ ಉತ್ತಮ ಸ್ಥಳ. ಅಲ್ಲಿಗೆ ಹೋಗೋಣವೆ ? "

" ಹುಂ...."

ಫುಟ್‌ಪಾಥ್‌ಗುಂಟ ಇಬ್ಬರೂ ಹೊರಟರು. ದಾದರಿನಲ್ಲಿ ತನಗೆ ಪರಿಚಿತರು ಬಹಳವೆಂದೋ, ಭಾಸ್ಕರರಾಯ ತಮ್ಮಿಬ್ಬರನ್ನು ಆ ದಿನ ನೋಡಿದ್ದನ್ನು ನೆನೆದೋ, ವಸಂತ ಮೋಹಿನಿಯ ಜೊತೆಯಲ್ಲಿಯೇ ಹೊರಟಿದ್ದರೂ ತುಸು ದೂರದೂರವಾಗಿಯೇ ಇರುತ್ತಿದ್ದ. ಮೋಹಿನಿಯ ಸಾನ್ನಿಧ್ಯ ಮತ್ತೆ ದೊರಕಿತೆಂಬ ಉತ್ಸಾಹವು ಒಂದೆಡೆಯಾದರೆ, ಯಾರಾದರೂ ನೋಡಿದರೇನೆಂಬ ಭೀತಿ ಇನ್ನೊಂದೆಡೆ. ಇವೆರಡರ ನಡುವೆ ಮೋಹಿನಿಯಿಂದ ಕಳೆದ ಮೂರು ವಾರಗಳ ಸಮಾಚಾರವನ್ನು ತಿಳಿಯಬೇಕೆಂಬ ಕುತೂಹಲ. ಯಾರಾದರೂ ನೋಡುತ್ತಿರ ಬಹುದೇನೆಂದು ವಸಂತ ಒಮ್ಮೆ ಹಿಂತಿರುಗಿ ನೋಡಿದ. ಯಾರೂ ಇರಲಿಲ್ಲ. ಹತ್ತಿಪ್ಪತ್ತು ಮಾರುಗಳ ಅಂತರದ ಮೇಲೆ ಶಾಲೆಯ ಹುಡುಗನೊಬ್ಬ ಕೈಯಲ್ಲಿ ಒಂದೆರಡು ಪುಸ್ತಕಗಳನ್ನು ಹಿಡಿದುಕೊಂಡು ಬರುತ್ತಿದ್ದ. ವಸಂತನೆಂದ :

" ಅದೇನು, ಅಕಸ್ಮಾತ್ತಾಗಿ ಊರಿಗೆ ಹೊರಟುಹೋಗಿಬಿಟ್ಟಿರಲ್ಲ ? "

" ಹೌದು, ಹೋಗಬೇಕಾಯಿತು."

" ಹೋಗಿಯೇ ಬಿಟ್ಟಿರೆಂದಮೇಲೆ ಹೋಗಲೇಬೇಕಾಯಿತೆಂಬುದಂತೂ ಸ್ಪಷ್ಟ. ಆದರೆ ಯಾಕೆ ಎಂದು ನಾನು ಕೇಳೋದು " ಎಂದು ವಸಂತ ನಕ್ಕ.

ಒಂದೆರಡು ನಿಮಿಷ ಮೋಹಿನಿ ಯೋಚನೆಯಲ್ಲಿದ್ದಳು. ಮೋಹಿನಿ ಊರಿಗೆ ಹೊರಡುವ ಮೊದಲು ಏನಾದರೂ ವಿಶೇಷ ನಡೆದಿರಬೇಕೆಂದೇ ಆಕೆ ಸುಮ್ಮನಾದಳೆಂದುಕೊಂಡು ವಸಂತನೆಂದ :

" ಮತ್ತೇನಾದರೂ ಮಾತು ಬೆಳೆಯಿತೇನು ? "

" ಇಲ್ಲ. ಆ ದಿವಸ ಹೇಳಿದ್ದೆನಲ್ಲ—ಆ ಶನಿವಾರ ರಾತ್ರಿಯೇ ಅವರೆಲ್ಲರೂ ಕೂಡಿ ಮಾತಾಡಿಕೊಂಡಿದ್ದರೆಂದು ಕಾಣುತ್ತದೆ. ನಾರಾಯಣರಾಯರಂತೂ ಸ್ಪಷ್ಟವಾಗಿ ಇವರಿಗೆ ಹೇಳಿಯೇ ಬಿಟ್ಟಿದ್ದರು : ' ಇನ್ನು ಮುಂದೆ ಅಲ್ಲಿರುವುದು ಸಾಧ್ಯವಿಲ್ಲ ' ಎಂದು."

" ಆಮೇಲೆ ? "

" ಆಮೇಲೆ ನನ್ನ ಪರೀಕ್ಷೆಯವರೆಗಾದರೂ ನಾನು ಅಲ್ಲಿರದೆ ಪುಣೆಗೆ ಹೋಗಬೇಕು ಎಂದು ನಿಶ್ಚಯ ಮಾಡ್ಡಿದರೆಂದು ಕಾಣುತ್ತದೆ."

" ನಿಮಗೆ ಆಗ ಹೇಳಲೇ ಇಲ್ಲವೇನು ? "

" ಇಲ್ಲ. ನನಗೆ ಆಗ ಗೊತ್ತಾಗಿದ್ದಿದ್ದರೆ, ಬುಧವಾರ ನೀವು ಭೇಟಿ ಆದಾಗ ಹೇಳುತ್ತಿದ್ದೆ."

" ಅಂದರೆ, ನಿಮಗೆ ಯಾವಾಗ ಹೇಳಿದರು ? "

" ಬುಧವಾರ ಸಾಯಂಕಾಲ ನಾನು ಮನೆಗೆ ಹೋದ ಕೂಡಲೆ ನನಗೆ ತಿಳಿಸಿದರು, ಒಂದೇ ಒಂದು ಮಾತಿನಲ್ಲಿ : 'ಮರುದಿವಸ ನಾನು ಪುಣೆಗೆ ಹೋಗುವ ಸಿದ್ಧತೆಯಲ್ಲಿರಬೇಕು ' ಎಂದು."

" ಯಾರು ? "

" ನಾದಿನಿ. ಮಧ್ಯಾಹ್ನ ಇವರು ಬಂದು ಹಾಗೆ ಹೇಳಿ ಹೋದರು ಎಂದೂ ಅಂದಳು. ಆದರೆ ಅದೆಲ್ಲ ಸುಳ್ಳು. ನನಗೆ ಮೊದಲೇ ತಿಳಿಯಗೊಡ ಬಾರದು ಎಂದಿರಬೇಕು ಅವರ ಮನಸ್ಸಿನಲ್ಲಿ."

" ಮೊದಲೇ ತಿಳಿಸಿದ್ದರೆ ಏನಾಗುತ್ತಿತ್ತಂತೆ ? "

" ಕೇಳುವವರು ಯಾರು ಅವರನ್ನು ? ನನ್ನ ಕೂಡ ಅವರು ನಡೆದು ಕೊಳ್ಳುವ ರೀತಿ ಇದೇ, ಯಾವಾಗಲೂ."

ಆ ದನಿ ನೊಂದವಳ ದನಿಯಾಗಿತ್ತು. ಆ ದನಿಯಲ್ಲಿಯೇ ಹೇಳಿದಳು :

" ಈಕೆಯನ್ನು ಹೇಗೆ ಬೇಕಾದ ಹಾಗೆ ನಾವು ಕುಣಿಸಬಹುದು, ಎಂದು ಅವರಿಗೆ ಅನಿಸುತ್ತಿರಬೇಕು. ಆ ಹಿರಿತನದಲ್ಲಿ ಹೆಮ್ಮೆ ಅವರಿಗೆ."

" ಇದೆಂಥ ಹಿರಿತನವೋ, ಏನು ಹೆಮ್ಮೆಯೋ ? " ಎಂದ ವಸಂತ.

ಪಾರ್ಕಿನ ಹತ್ತಿರದ ಹೊಟೇಲನ್ನು ಸೇರಿದರು. ಚಿಕ್ಕದಾದರೂ ಚೊಕ್ಕಟ ಕೋಣೆಯೊಂದನ್ನು ಸೇರಿ ಕುಳಿತುಕೊಂಡರು. ಹೊರಗಡೆ ಮಧ್ಯಾಹ್ನದ ಉರಿಬಿಸಿಲು ರಣಗುಡುತ್ತಿತ್ತಾದರೂ ಕೋಣೆಯಲ್ಲಿಯ ಇನಿಬೆಳಕು ಸುತ್ತಲಿನ ತಿಳಿಹಸಿರು ಬಣ್ಣದ ಗೋಡೆಗಳಂತೆ ಆಹ್ಲಾದಕರವಾಗಿತ್ತು. ಅಲ್ಲಿ ಹೋದ ಕೂಡಲೆ ತಲೆಯ ಮೇಲೆ ಗಾಳಿಚಕ್ಕಿ ತಿರುಗಲಾರಂಭಿಸಿತ್ತು. ವೇಟರ್‌ನೊಬ್ಬ ಹಾಜರಾದ.

" ಸಾಬ್...."

" ಏ ದೇಖೋ—ಏಕ್ ಕರಿ, ದೋನ್ ರಾಯಿಸ್....ಲಾವ್."

" ಔರ್ ಕುಛ್—ಸಾಬ್...."

" ಔರ್ ಏಕ್ ಆರೆಂಜ್ ಜೂಸ್—"

" ಜೀ ಸಾಬ್—" ವೇಟರ್ ಮಾಯವಾದ. ಅವನ ಬೆನ್ನ ಹಿಂದೆ ಸ್ಪ್ರಿಂಗ್ ಬಾಗಿಲು ತಾನಾಗಿಯೇ ಮುಚ್ಚಿಕೊಂಡಿತು. ವೇಟರ್ ತಂದಿಟ್ಟ ಸ್ಪೂನ್-ಫೋರ್ಕ್‌ಗಳೊಡನೆ ಆಟವಾಡುತ್ತ ಮೋಹಿನಿ ಕೇಳಿದಳು :

" ಆ ದಿವಸ ನೀವು ಬಹಳ ದಾರಿ ಕಾಯ್ದಿರಬೇಕು, ಅಲ್ಲವೆ ? "

" ಓ ! ದಾರಿ ಕಾಯ್ದು ಕಾಯ್ದು ಸಾಕಾಗಿ ಹೋಯಿತು. ಒಂದು ಗಂಟೆಯ ಮೇಲೆ ನಾನು ಅಲ್ಲಿ ನಿಂತಿರಬೇಕು—"

" ಅಯ್ಯೋ ಪಾಪ ! ನನಗೂ ಅದೇ ಯೋಚನೆ. ಅಂದು ಇಡೀ ದಿವಸ ಅದೇ ಯೋಚನೆಯಲ್ಲಿದ್ದೆ."

ಮೋಹಿನಿಗೆ ಮಧ್ಯಾಹ್ನದ ಕನಸು ಕಣ್ಣೆದುರು ನಿಂತಿತು. ಹೃದಯದಲ್ಲಿ ಯಾವುದೋ ಒಂದು ಮಧುರ ಭಾವ ಕಚಕುಳಿಯಾಡಿಸಿದಂತಾಯಿತು. ಆ ಭಾವವೇ ಅವಳ ತುಟಿಗಳ ಮೇಲೆ ಅರೆ ಅರಳಿದ ಹೂವಿನಂತೆ ಸ್ಮಿತವಾಗಿ ಕಾಣಿಸಿಕೊಂಡಿತು. ವಸಂತನೆಂದ :

" ನನಗೇನೂ ಗೊತ್ತಿರಲಿಲ್ಲ. ನಿಮ್ಮ ಬಗೆಯಲ್ಲಿ ಏನೂ ತಿಳಿಯದಾಗಿದ್ದೆ. ಆಗ ಕಾಯ್ದು ಕಾಯ್ದು ಕೊನೆಗೆ ನಿಮ್ಮ ಮೇಲೆ ವಿಪರೀತ ಕೋಪಿಸಿಕೊಂಡೆ."

" ಆಮೇಲೆ ? "

" ಆಮೇಲೆ ನನ್ನ ತಲೆ ! ನಿಂತು ನಿಂತು ಮುಖ ಒಣಗಿಸಿಕೊಂಡು ದಾದರಿಗೆ ಹಿಂತಿರುಗಿದೆ, ಆಯಿತು."

" ನಾನೂ ಇಡೀ ದಿವಸವೇಕೆ, ಇಲ್ಲಿಂದ ಹೊರಟಾಗಿನಿಂದ ವಿಚಾರ ಮಾಡಿಯೇ ಮಾಡಿದೆ, ಹೇಗಾದರೂ ಮಾಡಿ ನಿಮಗೆ ತಿಳಿಸಬೇಕೆಂದು."

" ಯಾಕೆ ತಿಳಿಸಲಿಲ್ಲ ? "

" ಹೇಗೆ ಸಾಧ್ಯ ? ಬೆಳಗ್ಗೆ ಸಾಮಾನುಗಳನ್ನು ಕಟ್ಟಿಕೊಳ್ಳುವುದರಲ್ಲಿಯೆ ಹೋಯಿತು. ಅಲ್ಲದೆ ' ಇವರು ' ಅಲ್ಲಿಗೇ ಬಂದಿದ್ದರು, ನನ್ನನ್ನು ಸ್ಟೇಶನ್ನಿಗೆ ಕರೆದೊಯ್ಯಲಿಕ್ಕೆ."

"ಅಲ್ಲಿಗೆ ಹೋದ ಕೂಡಲೆ ಒಂದು ಕಾಗದ ಬರೆದಿದ್ದರೂ ಆಗಿತ್ತು—"

"ಹಾಗೂ ವಿಚಾರ ಮಾಡಿದೆ. ನಿಮ್ಮ ಆಫೀಸ್ ವಿಳಾಸ ಗೊತ್ತಿದ್ದರೆ ಬರೆಯುತ್ತಿದ್ದೆ. ಆದರೂ ತುಂಬ ಹೆದರಿಕೆಯಾಯಿತು. ಇನ್ನಾರ ಕೈಯಲ್ಲಾದರೂ ಕಾಗದ ಸಿಕ್ಕರೆ, ಎಂದು."

"ಯಾರ ಕೈಯಲ್ಲೂ ಸಿಕ್ಕುತ್ತಿರಲಿಲ್ಲ. ಒಂದು ಕಾಗದ ಬಂದಿದ್ದರೆ ಮುಂದೆ ಎಷ್ಟೋ ನನ್ನ ತೊಂದರೆ ಕಡಮೆಯಾಗುತ್ತಿತ್ತು."

"ತೊಂದರೆ ಏನು ?"

"ಮುಂದೆ ಮೂರು ನಾಲ್ಕು ದಿವಸ ಅಲ್ಲಿ ಇಲ್ಲಿ ಎಲ್ಲ ಕಡೆಗೂ ನಿಮಗಾಗಿ ನೋಡಿದೆ. ಇಡೀ ವಾರ ಬೆಳಗಿನ ರೈಲು, ಸಂಜೆ ರೈಲು ನೋಡಿಯಾಯಿತು. ನಿಮ್ಮ ಕಾಲೇಜಿನಲ್ಲಿ ವಿಚಾರಿಸಬೇಕೆಂದೆ. ಆದರೆ ಯಾವ ಕಾಲೇಜು ಗೊತ್ತಿರಲಿಲ್ಲ. ಅಲ್ಲದೆ ಪರೀಕ್ಷೆ ಇಷ್ಟು ಸಮೀಪ ಬಂದಾಗ ಕಾಲೇಜಿನಲ್ಲಿ ಯಾರಿದ್ದಾರೆ ? ಕೊನೆಗೆ ಒಂದು ವಾರ ಎಲ್ಲಿಯೂ ಪತ್ತೆಯಾಗಲಿಲ್ಲವೆಂದಮೇಲೆ ಊರಲ್ಲಿರಲಿಕ್ಕಿಲ್ಲ ಎಂದು ನಿರುಪಾಯವಾಗಿ ಸುಮ್ಮನಾದೆ...."

"ನೀವು ಪುಣೆಗೆ ಬಂದರೂ ಬರಬಹುದು ಎಂದುಕೊಂಡಿದ್ದೆ."

"ಓ ! ನೀವು ಹೋದದ್ದು ಪುಣೆಗೆ ಎಂದು ಗೊತ್ತಿದ್ದರೆ ಬಂದಿದ್ದರೂ ಬರಬಹುದಾಗಿತ್ತು. ಆದರೆ ಯಾವುದೂ ಗೊತ್ತಿರಲಿಲ್ಲ. ಪುಣೆಗೆ ಹೋಗಿರಬಹುದೇನೋ ಅಂದುಕೊಂಡೆ. ಆದರೆ ವಿಳಾಸವೂ ಇರಲಿಲ್ಲ. ಯಾವುದೂ ನಿಶ್ಚಿತವಾಗಿ ಗೊತ್ತಿರಲಿಲ್ಲ. ನಿಮಗೆ ಕಲ್ಪನೆಯಾಗುವುದೇ ಸಾಧ್ಯವಿಲ್ಲ, ನಾನೆಷ್ಟು ರೀತಿ ತೊಳಲಾಡಿದೆ, ಎಂಬುದು." ವಸಂತನ ಆತ್ಮೀಯತೆಯನ್ನು ನೆನೆದು ಮೋಹಿನಿಗೆ ಕಳಕಳಿಯೆನಿಸಿತು. ಅಭಿಮಾನವೂ ಎನಿಸಿತು. 'ನನ್ನಿಂದ ನಿಮಗೆ ಎಷ್ಟು ತೊಂದರೆಯಾಯಿತಲ್ಲ!' ಎಂದು ಹೇಳಬೇಕೆಂದವಳು ಹಾಗೆ ಹೇಳಿದರೆ ಉಪಚಾರದ ಮಾತೆನಿಸೀತೆಂದು ಹೇಳಲಿಲ್ಲ.

"ಹಾಗಾದರೆ ಹೇಗೆ ಗೊತ್ತಾಯಿತು ?"

"ಹೇಗೇನು ? ಹೀಗೆಯೇ. ನೀವು ತಿಳಿಸಲಿಲ್ಲವಾದರೆ ನನಗೆ ತಿಳಿಯುವುದೇ ಇಲ್ಲವೇ ?"

"ಯಾಕೆ ನನಗೆ ಹೇಳಬಾರದೆಂಬ ಹಟ ?"

ಎಂದು ಮೋಹಿನಿ ಕೇಳಿದಾಗಿನ ಆಕೆಯ ಭಾವಭಂಗಿ ಉನ್ಮಾದಕಾರಿ

ಯಾಗಿತ್ತು. 'ವೈಯಾರಿ' ಎಂದುಕೊಂಡ ವಸಂತ. ಹೇಳಬೇಕಾದುದನ್ನು ತಡೆಯುವುದು ಅಸಾಧ್ಯವೆನಿಸಿ ಹೇಳಿದ :

"ಆನಂದರಾಯರು ಹೇಳಿದರು."

"ಏನು ! ಅವರು ಸಿಕ್ಕಿದ್ದರೆ ?"

"ಅವರು ಸಿಕ್ಕಿದ್ದರೆಂದೇ ನೀವು ಸಿಕ್ಕಿರೆಂದು ಹೇಳಲಿಲ್ಲವೆ ?"

"ಎಂದು ಸಿಕ್ಕಿದ್ದರು ?"

"ನೀವು ಊರಿಂದ ಬಂದ ಮುನ್ನಾದಿನ."

"ಏನೆಂದು ಹೇಳಿದರು ?"

"ಅವರೇನು ಹೇಳುತ್ತಾರೆ ? ನಾನಾದರೂ ಹೇಗೆ ಕೇಳಿಯೇನು ? ಹೀಗೇ ಮಾತು ನಡೆಯಿತು. ನೀವು ಮರುದಿನ ಬರುವವರಿದ್ದೀರೆಂದು ಮನೆಯಲ್ಲಿ ತಿಳಿಸಲಿಕ್ಕೆಂದು ಅವರು ಬೋರಿವಲಿಗೆ ಹೊರಟಿದ್ದರು. ಅದೇ ಲೋಕಲ್ಲಿನಿಂದ ನಾನೂ ಹೊರಟಿದ್ದೆ. ಮಾತಿನಲ್ಲಿ ನಾನು ಬೇಕಾದುದೆಲ್ಲವನ್ನೂ ತಿಳಿದುಕೊಂಡೆ."

"ಅಂತೂ ಜಾಣರಲ್ಲವೆ ನೀವು ?"

"ಜಾಣನೋ ಕೋಣನೋ ! ಇಪ್ಪತ್ತು ದಿವಸದ ಯೋಚನೆ ಆಗ ಪರಿಹಾರವಾಯಿತು."

"ಹಾಗಾದರೆ ಸೋಮವಾರ ನೀವು ಪರೀಕ್ಷಾಗೃಹಕ್ಕೆ ಬಂದದ್ದು ಅವರ ಮಾತಿನ ಮೇಲಿಂದಲೇ ಏನು ?"

"ಹೌದು !"

"ಮತ್ತೆ ಯಾರೋ ಫ್ರೆಂಡ್‌ಗಾಗಿ ಕಾಯುತ್ತಿದ್ದೆನೆಂದು ಹೇಳಿದಿರಲ್ಲ ?"

"ಹೌದು. ಒಬ್ಬ ಫ್ರೆಂಡ್‌ಗಾಗಿ ಕಾಯುತ್ತಿದ್ದೆ."

"ಸಿಕ್ಕರೇ ಅವರು ?"

"ಎಸ್ ! ಸಿಗದೆ ಏನು ?"

"ಯಾರವರು ?"

"ಈಗ ನನ್ನ ಹತ್ತಿರ ಒಬ್ಬರು ಕುಳಿತಿದ್ದಾರಲ್ಲ, ಅವರೇ !" ವಸಂತ ನಕ್ಕ. ಮೋಹಿನಿಗೆ ವಸಂತನ ಮಾತಿನ ರೀತಿ ಮೋಜೆನಿಸಿತು. ನಿಧಾನವಾಗಿ ಊಟ ಮಾಡುತ್ತಿದ್ದಳು. ಊಟ ಸೊಗಸಾಗಿತ್ತು. ಆದರೆ ಮೋಹಿನಿಗೆ, ಊಟಕ್ಕಿಂತ ವಸಂತನ ಮಾತೇ ಸೊಗಸೆನಿಸಿತು. ಅಂತೆಯೆ ತಡೆದು ಕೇಳಿದಳು :

"ನಿಜವಾಗಿಯೂ ?"

"ನಿಜವಾಗಿಯೂ. ನಿಮ್ಮನ್ನು ಭೆಟ್ಟಿಯಾದನಂತರ ನಾನು ಅಲ್ಲಿಂದ ಹೊರಟೇ ಬಿಟ್ಟೆ. ನೋಡಲಿಲ್ಲವೆ ನೀವು ?"

"ಹೌದು. ಆದರೆ ನನ್ನ ಲಕ್ಷ್ಯಕ್ಕೆ ಈ ಮಾತು ಬರಲೇ ಇಲ್ಲ !"

ಮೋಹಿನಿಯ ಮುಖ ಅರಳುಮಲ್ಲಿಗೆಯಾಗಿತ್ತು. ಒಂದು ನಿಮಿಷ ತಡೆದು ಕೇಳಿದಳು :

"ಮತ್ತೇನನ್ನುತ್ತಿದ್ದರು ?"

"ಯಾರು ?" ಎಂದು ವಸಂತ ನಸುನಕ್ಕು ಬೇಕೆಂತಲೇ ಕೇಳಿದ. ಮೋಹಿನಿಗೆ ವಸಂತನ ಚೇಷ್ಟೆ ತಿಳಿಯಿತು. ಒನಪಿನಿಂದ ಹೇಳಿದಳು

"ಯಾರು ? ನಿಮಗೆ ಗೊತ್ತು. ಹೇಳಿರಿ. ಮತ್ತೇನನ್ನುತ್ತಿದ್ದರು ?"

"ಏನು ವಿಶೇಷವೂ ಇಲ್ಲ. ಆದರೂ ಅವರು ತುಂಬ ಯೋಚನೆಯಲ್ಲಿದ್ದ ಹಾಗಿದೆ."

"ಯಾವ ಯೋಚನೆ ?"

"ಮುಂದೇನು ಮಾಡಬೇಕು, ಹೇಗೆ ಮಾಡಬೇಕು—ಎಂದು."

"ಯಾಕಂತೆ ?"

"ಯಾಕೇನು ? ಬೋರಿವಲಿಯಲ್ಲಿದ್ದರೆ ಮತ್ತೆ ಮತ್ತೆ ಅದೇ ತೊಂದರೆ. ಅವರಿಗೂ ಬೇಸರವಾಗಿದೆ."

"ಅಂತೂ ಅಷ್ಟಾದರೂ ತಿಳಿಯಿತು ಹಾಗಾದರೆ !"

"ಆದರೆ ಇನ್ನೂ ಮನಸ್ಸು ಹೊಯ್ದಾಡುತ್ತಿರಬೇಕು."

"ಆ ಹೊಯ್ದಾಟ ಮುಗಿಯುವಂತೆಯೇ ಇಲ್ಲ !"

"ಇಲ್ಲ. ಈ ಸಾರೆ ಪರೀಕ್ಷೆ ಮುಗಿದಮೇಲೆ ಏನಾದರೊಂದು ನಿರ್ಧಾರಕ್ಕೆ ಬರಲೇಬೇಕು ಎನ್ನುತ್ತಿದ್ದರು."

"ಎಷ್ಟೋ ಸಲ ಆಗಿದೆ ಹೀಗೆ. ಆಗಿನ ಮಟ್ಟಿಗೆ ; ಮತ್ತೆ ಹಾಗೆ ಮೊದಲಿನಂತೆಯೇ."

"ಇಲ್ಲ. ನಾನು ಮಾತಾಡಿಸಿ ನೋಡಿದೆ. ಅವರೂ ಮನಬಿಚ್ಚಿ ಮಾತನಾಡಿದರು. ಆದರೂ ವಿಚಿತ್ರ ಸ್ವಭಾವ—"

"ಯಾಕೆ ?"

" ತುಂಬ ಅರ್ಥೊಡಾಕ್ಸ್ ವಿಚಾರ ಅವರದು, ವಿಶೇಷವಾಗಿ ಗಂಡಹೆಂಡಿರ ಸಂಬಂಧದಲ್ಲಿ...."

" ನನಗೆ ಗೊತ್ತಿಲ್ಲವೇ? ಹೆಂಗಸು ಎಂದರೆ ಕಾಲುಕಸವಾಗಿರಬೇಕು. ಹೆಂಡತಿ ಎಂದರೆ ದಾಸಿ!"

" ನಾನೂ ಹೇಳಿದೆ ಅವರಿಗೆ, ಇಂದಿಲ್ಲ ನಾಳೆ ನೀವು ನಿಮ್ಮ ಅಭಿಪ್ರಾಯ ವನ್ನು ಸ್ವಲ್ಪವಾದರೂ ಬದಲಾಯಿಸಬೇಕು, ಬದಲಾಯಿಸುವುದವಶ್ಯ ಎಂದು."

" ಏನೆಂದರು ಅವರು ಅದಕ್ಕೆ?"

" ನನ್ನ ಮಾತು ಅವರಿಗೆ ಅಷ್ಟೇನೂ ಸರಿಬೀಳಲಿಲ್ಲ ಎಂದು ಕಾಣಿಸಿತು."

" ಸರಿಬೀಳುವುದು ಸಾಧ್ಯವೇ ಇಲ್ಲ. ನೂರು ಬಾರಿ ನೋಡಿದ್ದೇನೆ ನಾನು."

" ಆದರೂ ಇದ್ದ ತಪ್ಪು ಒಪ್ಪುಗಳನ್ನೆಲ್ಲ ಸರಿಪಡಿಸಿಕೊಂಡು ಹೋಗ ಲಿಕ್ಕೇ ಬೇಕೆಂದು ಆಗ್ರಹಪೂರ್ವಕವಾಗಿ ಸೂಚಿಸಿದೆ."

" ಅದಕ್ಕೆ ಏನೆಂದರು?"

" ಎಷ್ಟೋ ಬಾರಿ ತಾವು ಆ ರೀತಿ ಪ್ರಯತ್ನ ಮಾಡಿದ್ದಾಗಿದೆ ಎಂದರು."

" ನನಗಂತೂ ಗೊತ್ತಾಗಿಲ್ಲ, ಅವರ ಪ್ರಯತ್ನ! ಅವರು ಏನಾದರೂ ಪ್ರಯತ್ನ ಮಾಡಿದ್ದೇ ಆಗಿದ್ದರೆ ನನ್ನನ್ನು ಸಂಪೂರ್ಣ ಮಣಿಸಿ ನೆಲಕ್ಕಿಳಿಸಬೇಕು, ಎಂದು."

ಮೋಹಿನಿ ಗಂಭೀರಳಾಗಿದ್ದಳು. ಅವಳ ಆತ್ಮಾಭಿಮಾನಕ್ಕೆ ಭೂತಕಾಲ ದಲ್ಲಿಯ ಅನುಭವ ಕೊಟ್ಟ ಏಟಿನ ನೋವು ಆ ಕ್ಷಣ ಅವಳ ಮುಖದಲ್ಲಿ ಸ್ಪಷ್ಟ ವಾಗಿ ಕಾಣುತ್ತಿತ್ತು. ಇಬ್ಬರೂ ಒಂದೆರಡು ನಿಮಿಷ ಸುಮ್ಮನಾದರು. ಕೊನೆಗೆ ವಸಂತನೆಂದ :

" ನಾನು ಹೇಳುವಷ್ಟು ಹೇಳಿದ್ದೇನೆ. ನನ್ನ ಮಾತಿಗೆ ಸಂಪೂರ್ಣವಾಗಿ ಅವರು ಒಪ್ಪದಿದ್ದರೂ ಮೆತ್ತಗಾಗಿ ಅವರು ನಡೆದುಕೊಳ್ಳಬಹುದು ಎಂದು ಕಾಣುತ್ತದೆ. ಮೇಲಾಗಿ, ಈಗ ಮೂರು ವಾರ ನೀವು ಊರಲ್ಲಿಲ್ಲವಾಗಿ ಅವರೂ ಅಷ್ಟು ನಿಷ್ಠುರವಾಗಿ ಮಾತಾಡಲಾರರು. ಅವರು ಇನ್ನು ನಿಮಗೆ ಭೆಟ್ಟಿ ಆದಾಗ ಒಂದಿಷ್ಟು ನಯವಾಗಿ, ಚಾತುರ್ಯದಿಂದ ಅವರ ಮನಸ್ಸನ್ನು ನೀವು ಸೆರೆಹಿಡಿಯಬಹುದು."

ಮೋಹಿನಿಯ ಮುಖ ಉದ್ವಿಗ್ನವಾಗಿತ್ತು. ಆನಂದನ ಪ್ರೀತಿಯನ್ನು

ಸಂಪಾದಿಸಲು ತಾನು ಮಾಡಿದ ನೂರು ಪ್ರಯತ್ನಗಳ ಸೋಲಿನಲ್ಲಿಯ ನಿರಾಶೆ ಅವಳ ಹೃದಯವನ್ನಾವರಿಸಿತ್ತು. ಶಾಂತಳಾಗಿ ಹೇಳಿದಳು :

" ನನ್ನ ವಿಷಯದಲ್ಲಿ ಅವರಿಗೆ ತುಂಬ ಮೋಹ ಇದೆ. ನನಗೆ ಗೊತ್ತು. ಆದರೆ ಅವರಿಗೆ ಕಾಡುತ್ತಿದ್ದುದು ಸಂಶಯಪಿಶಾಚಿ! ನಾನು ಏನು ಮಾಡಿದರೂ ಆ ಪಿಶಾಚಿಯನ್ನು ಹೊಡೆದೋಡಿಸುವುದು ಸಾಧ್ಯವಿಲ್ಲ! "

" ಹೌದು. ಅವರೂ ಹೇಳಿದರು ."

" ಏನೆಂದು ? "

" ಹಾಗೇನೂ ಯಾವ ಮಾತನ್ನೂ ಸ್ಪಷ್ಟವಾಗಿ ಹೇಳಲಿಲ್ಲ. ಇಬ್ಬರೂ ಸರಿಪಡಿಸಿಕೊಂಡಿರಬೇಕಾದರೆ ಇಬ್ಬರ ನಡೆಯೂ ಸಂಶಯಕ್ಕೆ ಆಸ್ಪದ ಕೊಡ ಬಾರದು, ಎಂದು."

" ಅದೇ, ಅದೇ. ನನಗೆ ಗೊತ್ತು. ಯಾವ ಸಣ್ಣಪುಟ್ಟ ಮಾತಿಗೂ ಇವರು ನನ್ನ ಮೇಲೆ ಸಂಶಯ ಇಟ್ಟರೆ ನಾನೇನು ಮಾಡಬಹುದು ? "

ಇಬ್ಬರೂ ಸುಮ್ಮನಾದರು. ವೇಟರ್ ಬಂದು ದುಡ್ಡು ತೆಗೆದುಕೊಂಡು ಹೋದ. ಮೋಹಿನಿ ಗಡಿಯಾರ ನೋಡಿ,

" ಹೊರಡೋಣವೇ ಇನ್ನು ? " ಎಂದಳು.

" ಹುಂ " ಎಂದವನೇ ವಸಂತ ಎದ್ದ. ಇಬ್ಬರೂ ಹೊಟೇಲಿನ ಹೊರಗಡೆ ಬಂದು ಒಂದು ನಿಮಿಷ ತಡೆದರು. ಮೋಹಿನಿ ಕೇಳಿದಳು :

" ನೀವು ಎಲ್ಲಿಗೆ ಹೋಗುವವರು ? "

" ಯಾಕೆ, ನೀವು ಮನೆಗೆ ಹೊರಟೇ ಬಿಟ್ಟಿರಾ ? "

" ಹೋಗಬೇಡವೆ ? ಎಷ್ಟು ಹೊತ್ತಾಯಿತು ! "

" ಏನಂಥ ಅವಸರ ? ಪರೀಕ್ಷೆಯಂತೂ ಮುಗಿಯಿತು ! "

" ಈ ಪರೀಕ್ಷೆ ಮುಗಿದರೂ ಮನೆಯಲ್ಲಿ ಬೇರೆ ಪರೀಕ್ಷೆ, ಪ್ರತಿನಿತ್ಯ ! "

" ನಿತ್ಯದ ನಾವಿಗೆ ಹೆದರುವವರಾರು ? "

" ಆದರೂ ಸಾವಲ್ಲವೆ ಅದು ? "

" ಅನಾಯಾಸ ಇಲ್ಲಿಯ ವರೆಗೆ ಬಂದಿದ್ದೇವೆ. ಸಮುದ್ರದ ಕಡೆಗೆ ಸುತ್ತಾಡಿಕೊಂಡು ಬರೋಣವೆ ? "

" ಮತ್ತೆ ತುಂಬ ಹೊತ್ತಾಗಿಬಿಡುತ್ತದೆ " ಎಂದಳು ಸಂಕೋಚದಿಂದ.

" ಎಷ್ಟು ಹೊತ್ತಾದೀತು—ಇಲ್ಲಿಂದ ಎಷ್ಟು ದೂರವಿಲ್ಲ ! "

ಎಂದು ಮೋಹಿನಿಯ ಮುಖವನ್ನು ನೋಡಿದ. ' ನೀವು ಬಂದರೆ ಎಷ್ಟು ಸೊಗಸು, ಎಷ್ಟು ಸಮಾಧಾನ, ಬರಬಾರದೆ ? ' ಎಂದು ಬೇಡಿಕೊಳ್ಳುವಂತಿದ್ದವು ವಸಂತನ ಕಣ್ಣುಗಳು. ಮೋಹಿನಿಗೆ ಆ ಭಾವ ಅರ್ಥವಾಗಿರಬೇಕು. ಅವನ ಜೊತೆಯಲ್ಲಿಯೇ ಮೋಹಿನಿ ಹೊರಟಳು. ಎದುರಿನ ಫುಟ್‌ಪಾಥ್ ಮೇಲೆ ಹೊತ್ತುಗಳೆಯುತ್ತಿದ್ದ ಶಾಲೆಯ ಹುಡುಗನನ್ನು ನೋಡಿ ವಸಂತನೆಂದ :

" ನೋಡಿದಿರಾ, ಹೊತ್ತುಗಳೆಯುತ್ತಿದ್ದಾನೆ ಆ ಹುಡುಗ. ಆಗಲೇ ನಾವು ಇಲ್ಲಿ ಬರುವಾಗ್ಗೆ ನೋಡಿದ್ದು. ಅಲ್ಲೆಲ್ಲಿಯೋ ಅಲೆದಾಡುತ್ತಿದ್ದ. ಓದಿಲ್ಲ, ಬರೆಯಿಲ್ಲ."

" ನಮ್ಮ ಕಾಲೇಜಿನಲ್ಲಿಯೂ ಅಷ್ಟೇ. ಎಷ್ಟೋ ಗಂಡು ಹುಡುಗರು ಕ್ಲಾಸ್ ತಪ್ಪಿಸಿದ್ದೇ ತಪ್ಪಿಸಿದ್ದು. ಕ್ಲಾಸ್ ತಪ್ಪಿಸಬೇಕಾದರೆ ಕಾಲೇಜಿಗಾದರೂ ಯಾತಕ್ಕೆ ಬರಬೇಕೋ ? " ಎಂದಳು ಮೋಹಿನಿ. ದಾರಿಯುದ್ದಕ್ಕೂ ಭಾಸ್ಕರ ಪುಣೆಗೆ ಬಂದ ಸಮಾಚಾರವನ್ನು, ಗಾಡಿಯಲ್ಲಿ ನಡೆದ ಪ್ರಕರಣವನ್ನು ಮೋಹಿನಿ ವಸಂತನಿಗೆ ತಿಳಿಸಿದಳು.

ಹತ್ತು ನಿಮಿಷಗಳಲ್ಲಿ ವಸಂತ–ಮೋಹಿನಿಯರು ಸಮುದ್ರತೀರದ ಮೇಲೆ ಜನರಿಗಾಗಿ ಇರಿಸಿದ ಸಿಮೆಂಟಿನ ಆಸನಗಳಲ್ಲಿ ಕುಳಿತಿದ್ದರು. ಆಸನಗಳು ತೀರ ಚಿಕ್ಕವಾದ್ದರಿಂದ ಒಬ್ಬರೊಬ್ಬರಿಗೆ ತೀರ ಸಮೀಪವಾಗಿ ಕೂಡಬೇಕಾಗಿತ್ತು. ಮಾತಿನ ಭರದಲ್ಲಿ ಸರಕ್ಕನೆ ತಿರುಗಿದಾಗ ಒಬ್ಬರ ಭುಜ ಇನ್ನೊಬ್ಬರಿಗೆ ತಟ್ಟು ವಂತಿತ್ತು. ಸಂಜೆಯ ಸಮಯದಲ್ಲಿ ಜನರಿಂದ ಕಿಕ್ಕಿರಿದಿರುವ ಕರಾವಳಿ ಈಗ ನಿರ್ಜನವಾಗಿತ್ತು. ಇಳಿಬಿಸಿಲು ಮುಖವನ್ನಡರುತ್ತಿದ್ದರೂ ಸುಳಿಗಾಳಿ ದೂರಿನ ತೆರೆಗಳ ಮೇಲಿಂದ ಸೂಸಿಬರುತ್ತಿದ್ದುದರಿಂದ ಆ ಬಿಸಿಲೂ ಸೊಗಸಾಗಿಯೇ ಭಾಸವಾಗುತ್ತಿತ್ತು. ತಲೆಯ ಮೇಲೆ ಬೀಸಣಿಕೆಗಳಂತೆ ತೂಗಾಡುತ್ತಿದ್ದ ತೆಂಗಿನ ಮರಗಳು ಸುಯ್ಯೆಂದು ಸಪ್ಪಳಮಾಡುತ್ತಿದ್ದುವು. ಮೋಹಿನಿಯ ಭುಜ ತಟ್ಟಿ ವಸಂತನೆಂದ :

" ನಾನು ನಿಮಗೊಂದು ಮಾತು ಕೇಳಲಾ ? "

ಮೋಹಿನಿಯ ಚಿತ್ತ ಕಾತರವಾಗಿತ್ತು. ಆದರೆ ವಸಂತ ಯಾವ ಅಯೋಗ್ಯವಾದ ಮಾತನ್ನೂ ಆಡಲಾರನೆಂಬ ಭರವಸೆಯಿದ್ದುದರಿಂದ ಕೊರಳಿ

ನಿಂದಲೇ ತನ್ನ ಸಮ್ಮತಿಯನ್ನು ಸೂಚಿಸಿದಳು. ವಸಂತನೆಂದ :

" ನಾನು ನಿಮ್ಮ ಕೂಡ ಇನ್ನು ಏಕವಚನದಲ್ಲಿ ಮಾತಾಡಬಹುದೇ ? "

" ಓ ಎಸ್ ! ಅದರಲ್ಲೇನು ? "

" ನೀವು ನೀವು ಎಂದರೆ ಅದೇಕೋ ಮನಬಿಚ್ಚಿ ಮಾತನಾಡಿದಂತೆಯೇ ಅನಿಸುವುದಿಲ್ಲ, ಅಲ್ಲವೆ? "

" ಹೌದು, ನನಗೂ ಹಾಗೆಯೇ ಅನಿಸುತ್ತಿದೆ."

" ಹಾಗಾದರೆ ನೀವು ಕೂಡ ಹಾಗೆಯೇ ಮಾಡಬಹುದು."

" ಛೆ, ನನಗೆ ಸಾಧ್ಯವಿಲ್ಲ. ಅದನ್ನು ನೀವಷ್ಟೇ ಮಾಡಬಹುದು ! "

" ಯಾಕೆ ? "

" ಯಾಕೆ ಹೇಳಲಾರೆ ! "

ಅದೊಂದೇ ಮಾತಿನಿಂದ ಮೋಹಿನಿ ದೂರವಾಗಿದ್ದವಳು ಎಷ್ಟೋ ಸಮೀಪಕ್ಕೆ ಬಂದಂತೆನಿಸಿತು ವಸಂತನಿಗೆ. ಅವಳ ಹೃದಯವನ್ನರಿಯಬೇಕೆಂದು ಕುತೂಹಲಪಡುತ್ತಿದ್ದ ಅವನಿಗೆ ಅದರ ಒಂದು ಪದರನ್ನು ಬಿಚ್ಚಿ ತೋರಿಸಿತ್ತು, ಆ ಮಾತು. ಎದುರಿನಲ್ಲಿ ವಿಸ್ತಾರವಾಗಿ ಹಬ್ಬಿದ ನೀರಿನಾಗರವನ್ನು ಸಿರುಕಿಸು ತ್ತಿದ್ದ ; ಏನನ್ನೋ ಯೋಚಿಸುತ್ತಿದ್ದ ವಸಂತ. ಮೋಹಿನಿ ಎಂದಳು :

" ಎಷ್ಟು ಸೊಗನಾಗಿದೆಯಲ್ಲವೆ ಸಮುದ್ರ ? "

" ಓ ! ಇದೇನೂ ಅಲ್ಲ, ಜುಹುವಿನ ಮುಂದೆ ! "

" ಅಂದು ಜುಹುವಿಗೆ ಹೋಗಬೇಕೆಂದುಕೊಂಡಿದ್ದೆವು ! "

" ಹೌದು, ಆದರೆ ಎಲ್ಲವನ್ನು ತಪ್ಪಿಸಿಬಿಟ್ಟೆ ನೀನು ! "

ಮೋಹಿನಿಯ ಕಣ್ಣೆದುರು ಜುಹುವಿನ ಕನಸು ನಿಂತಿತ್ತು. ಆ ಕನಸಿ ನಲ್ಲಿಯ ಅನುಭವದ ನೆನಹು ಅವಳ ಮೈಮೇಲೆ ರೋಮಾಂಚವನ್ನೆಬ್ಬಿಸಿತ್ತು. ಅಂದು ಕನಸಿನಲ್ಲಿ ಅಷ್ಟು ಸಮೀಪ ಬಂದಿದ್ದ ವಸಂತ ಈಗ ನಿಜವಾಗಿಯೂ ಹತ್ತಿರದಲ್ಲಿ ಇದ್ದಾನೆಂದುಕೊಂಡಾಗ ಮೈಮರೆಯುವಂತಾಗಿತ್ತು. ಮೋಹಿನಿ ಎಂದಳು :

" ನಿಮಗೆ ಜುಹುವಿನ ನಿರಾಶೆಯಾದರೂ ನನಗೆ ಆಗಲಿಲ್ಲ."

" ಹೇಗೆ ? "

" ಜುಹುವಿಗೆ ಹೋಗಿದ್ದೆ ನಾನು ! "

" ಎಂದು ? "

" ಅಂದೇ ! "

" ನಿನಗಾಗಿ ಜುಹು ಪುಣೆಗೆ ಬಂದಿತ್ತೇನು ? "

" ಹೌದು, ಅಂದು ಮಧ್ಯಾಹ್ನ ಜುಹು ಪುಣೆಗೆ ಬಂದಿತ್ತು ! "

" ನಿನಗೇನು ಹುಚ್ಚು ? " ಎಂದು ಅವಳ ಕೈ ಕೊಡವಿದ.

" ಅಂದು ಮಧ್ಯಾಹ್ನ ನನಗೆ ಬರೀ ಜುಹುವಿನ ಕನಸೇ ಕನಸು ! "

" ಏನೆಂದು ಕನಸು ? "

ಮೋಹಿನಿಗೆ ಮೈಮೇಲೆ ಮತ್ತೆ ರೋಮಾಂಚ. ಹೃದಯ ನಡುಗುತ್ತಿರುವಂತಿತ್ತು.

" ಮೊದಲು ಒಬ್ಬಳೇ ಅಡ್ಡಾಡುತ್ತಿದ್ದೆ. ಸಂಜೆ ಸೊಗಸಾಗಿತ್ತು! ಆಮೇಲೆ ಇನ್ನೊಬ್ಬರು ಬಂದರು—"

" ಯಾರು ? "

ಮೋಹಿನಿ ಸೂಚ್ಯವಾಗಿ ವಸಂತನ ಮುಖದ ಕಡೆಗೆ ಕಣ್ಣು ತಿರುವಿ ನಸುನಕ್ಕಳು. ಆಕೆ ತಿರುಗುವಾಗ ವಸಂತನ ಭುಜಕ್ಕೆ ಅವಳ ಭುಜ ತಾಕಿತು.

" ಯಾರೋ ಒಬ್ಬರು ! " ಎಂದಳು ಮೋಹಿನಿ.

" ಅವರ ಗುರುತು ಸಿಕ್ಕಲಿಲ್ಲವೆ ? "

" ಸಿಗದೆ ಏನು ? "

" ಯಾರು ಹಾಗಾದರೆ ? "

" ಈಗ ನನ್ನ ಹತ್ತಿರ ಇದ್ದಾರಲ್ಲ, ಅವರೇ ! " ಎಂದು ಮೋಹಿನಿ ಗಟ್ಟಿಯಾಗಿ ನಕ್ಕಳು.

" ಚತುರೆ ನೀನು " ಎಂದು ವಸಂತ ಮತ್ತೆ ಅವಳ ಕೈ ತಟ್ಟಿ ಹೇಳಿದ: " ನನ್ನ ಮಾತು ನನಗೇ ತಿರುಗಿಸಿದೆಯಾ ? "

ಮಾತು ನಡದೇ ಇತ್ತು, ಸುಳಿಗಾಳಿ ಬೀಸುತ್ತಿದ್ದಂತೆ. ಸುಳಿಗಾಳಿ ಮೈ ಸೋಂಕಿದಂತೆ ಆ ಮಾತುಗಳ ಹಿಂದಿನ ಅನುರಾಗ ಹೃದಯವನ್ನು ಸೋಂಕುತ್ತಿತ್ತು. ಆ ಭಾವವೇ ಆಗಾಗ ಇಬ್ಬರ ಮೊಗದಲ್ಲಿಯೂ ನಗೆಮಲ್ಲಿಗೆಯಾಗಿ ನಿಲ್ಲುತ್ತಿತ್ತು.

ದೂರದಲ್ಲಿ ಯಾರೋ ಒಬ್ಬಿಬ್ಬರು ಬರುತ್ತಿರುವಂತಿತ್ತು. ಇನ್ನೊಂದು

ಕಡೆಯಿಂದ ಮತ್ತೊಬ್ಬರಾರೋ ಬರುತ್ತಿದ್ದರು. ಅದನ್ನು ನೋಡಿ ಮೋಹಿನಿ ಎಂದಳು :

" ಹೊರಡೋಣ ಇನ್ನು, ತುಂಬ ಹೊತ್ತಾಗಿಬಿಟ್ಟಿತು. ಜನರೂ ಬರ ಹತ್ತಿದರು."

" ಹೌದು—" ಎಂದವನೇ ಇಬ್ಬರೂ ಹೊರಟರು, ಅಲ್ಲಿಂದ ನಿಧಾನವಾಗಿ. ಅಲ್ಲಿಂದ ಹೊರಡುವುದು ಇಬ್ಬರಿಗೂ ಬೇಡವಾಗಿತ್ತು. ಆದರೆ ಅಲ್ಲಿಯೇ ಉಳಿಯುವುದೂ ಬೇಡವಾಗಿತ್ತು. ದೊಡ್ಡ ದಾರಿಗೆ ಬಂದಾಗ ವಸಂತ ಕೇಳಿದ :

" ನೀನು ಈಗ ಬೋರಿವಲಿಗೆ ಹೋಗಬೇಕೇ ? "

" ಹುಂ—ನೀವು ? "

" ನಾನಿಲ್ಲಿಯೇ ಗೆಳೆಯರ ಹತ್ತಿರ ಹೋಗುತ್ತೇನೆ."

" ನಾನು ಹೋಗುವಷ್ಟು ಹೊತ್ತಿಗೆ ' ಇವರು ' ಬಂದಿರುತ್ತಾರೋ ಏನೋ ? "

" ಇಂದು ಬರುವವರಿದ್ದಾರೇನು ? "

" ಹೌದು. ಅವರ ಪರೀಕ್ಷೆ ನಿನ್ನೆಯೇ ಮುಗಿಯಿತು. ಇಂದು ಬರುತ್ತೇನೆಂದು ಹೇಳಿದ್ದರು—"

" ಓ ! " ಎಂದು ವಸಂತ ಮೋಹಿನಿಯನ್ನು ನೋಡಿದ. ಮೋಹಿನಿಗೆ ವಸಂತನ ನೋಟದ ಅರ್ಥ ಹೊಳೆಯಿತು. ಆದರೆ ನಾಚಿಕೆ ಯಾವುದೋ ಒಂದು ನಿಶ್ಚಯದೊಡನೆ ಹೃದಯದಲ್ಲಿ ಹೋರಾಡುತ್ತಿತ್ತು. ವಸಂತನಿಗೆ ಎಡಗಡೆಯ ದಾರಿಯ ಕಡೆಗೆ ತಿರುಗಬೇಕಾಗಿತ್ತು. ಮೋಹಿನಿಯ ಕೈ ಕುಲುಕಿಸಿ ಕೇಳಿದ :

" ಮತ್ತೆ ಯಾವಾಗ ? "

" ಈಗ ಹೇಳಲಾರೆ ! "

" ಯಾಕೆ ? "

" ಇಂದು ಸಾಯಂಕಾಲ ' ಇವರು ' ಬಂದು ಏನೇನು ಗೊತ್ತುಮಾಡುತ್ತಾರೋ ನೋಡಬೇಕು. ಏನೇನು ವ್ಯವಸ್ಥೆಯಾಗುತ್ತಿದೆಯೊ ! "

" ಹೌದು, ಅದೂ ನಿಜ ! "

" ಏನಿಲ್ಲದಿದ್ದರೂ ಬೆಳಗಿನ ಒಂಬತ್ತರ ರೈಲಂತೂ ಇದ್ದೇ ಇದೆಯಲ್ಲ ! "

“ರೈಲಿಗೆ ಇನ್ನು ನೀವೇತಕ್ಕೆ ಬರುತ್ತೀರಿ? ನಿಮ್ಮ ಪರೀಕ್ಷೆಯಾಗಿ ಹೋಯಿತು.”

“ನನಗೆ ಕಾಲೇಜು ಇಲ್ಲದಿದ್ದರೂ ನಿಮಗೆ ಆಫೀಸ್ ಇದ್ದೇ ಇದೆಯಲ್ಲ!”

“ಅದು ಸರಿ—”

“ಹಾಗಾದರೆ ಮುಂದಿನ ವಾರ ನೋಡೋಣವೆ ಯಾವಾಗಲಾದರೂ?”

“O. K.” ಎಂದ ವಸಂತ ಒಳ್ಳೇ ಉತ್ಸಾಹದಲ್ಲಿ. “ಹೊರಡುವಿಯಾ ಹಾಗಾದರೆ ಇನ್ನು?”

“ಹೊರಡಲೇ ಬೇಕಲ್ಲ!”

“ಅಚ್ಛಾ!—” ಎಂದು ವಸಂತ ಹೊರಟ.

ಮೋಹಿನಿ ದಾರಿಗುಂಟ ಹೊರಬಿದ್ದಳು. ಕಣ್ಣಿಗೆ ಮರೆಯಾಗುವ ವರೆಗೂ ವಸಂತ ನೋಡಿದ. ‘ಭಾಗ್ಯಶಾಲಿ ಆನಂದರಾಯ!’ ಎಂದು ಕೊಂಚ ಝುಪಝುಪನೆ ಹೆಜ್ಜೆ ಹಾಕಿದ. ಬಲಬದಿಯ ಫುಟ್‌ಪಾಥಿನ ಮೇಲೆ ಒಂದು ಗಂಟೆಯ ಹಿಂದೆ ನೋಡಿದ ವಿದ್ಯಾರ್ಥಿ ಅಲೆಯುತ್ತಲೇ ಇದ್ದ. ‘ಉಡಾಳ ಹುಡುಗ. ಮನೆಯವರನ್ನು ತಪ್ಪಿಸಿ ಅಲೆಯುತ್ತಿದ್ದಾನೆ ಎಂದು ಕಾಣುತ್ತಿದೆ’ ಎಂದುಕೊಂಡ.

* * * *

ವಸಂತ ಮೋಹಿನಿಯಿಂದ ಅಗಲಿದಾಗ ನಾಲ್ಕು ಗಂಟೆಯಾಗಿಹೋಗಿತ್ತು. ಒಬ್ಬಿಬ್ಬ ಗೆಳೆಯರ ಮನೆಗೆ ಹೋಗಿಬಂದ. ಯಾರೂ ಆಫೀಸಿನಿಂದ ಬಂದಿರಲಿಲ್ಲ. ಮೋಹಿನಿಯ ಜೊತೆಯಲ್ಲಿ ಮನಸ್ಸನ್ನಾವರಿಸಿದ ಭಾವಪರವಶತೆಯಲ್ಲಿ ತಾನು ಆಫೀಸು ತಪ್ಪಿಸಿ ಬಂದವನೆಂಬುದನ್ನೂ ಮರೆತು ಗೆಳೆಯರು ಮನೆಯಲ್ಲಿರ ಬಹುದೆಂದೇ ಭಾವಿಸಿದಂತಿದ್ದ. ಆರು ಗಂಟೆಯ ವರೆಗೆ ಅಲ್ಲಲ್ಲಿ ಸುತ್ತಾಡಿ ಯಾಯಿತು. ಮುಂದೆ ಗೆಳೆಯರ ಮನೆಯಲ್ಲಿ ಹರಟೆ, ಚಹ. ಅದೇಕೋ ವಸಂತನಿಗೆ ತುಂಬ ದಣಿವೆನಿಸುತ್ತಿತ್ತು. ಮಧ್ಯಾಹ್ನವೆಲ್ಲವನ್ನು ಪ್ರತಿನಿತ್ಯ ತಂಪಾಗಿ ಆಫೀಸಿನಲ್ಲಿ ಕಳೆಯುತ್ತಿದ್ದವ ಇಂದು ಇಡೀ ಮಧ್ಯಾಹ್ನವೆಲ್ಲ ಬಿಸಿಲಲ್ಲಿ ಸುತ್ತಾಡುವುದರಲ್ಲಿಯೇ ಕಳೆದಿದ್ದ. ಸ್ಟೇಶನ್ನಿನವರೆಗೆ ಕಾಲೆಳೆದು ಮುಂದೆ ಬೋರಿವಲಿಗೆ ಮರಳಿ ಹೋಗುವುದು ಬೇಡವಾಗಿತ್ತು. ಒಂಬತ್ತು ಗಂಟೆಯ

ಸುಮಾರಿಗೆ ಗೆಳೆಯನನ್ನು ಹುರಿದುಂಬಿಸಿ ಇಬ್ಬರೂ ಹೊಟೇಲಿನಲ್ಲಿ ಊಟ ಮಾಡತಕ್ಕದ್ದು, ಆಮೇಲೆ ಸಾಧ್ಯವಾದರೆ ಯಾವುದಾದರೊಂದು ಚಿತ್ರಪಟ ವನ್ನು ನೋಡಹೋಗುವುದು ಎಂದು ಕಾರ್ಯಕ್ರಮವನ್ನು ಗೊತ್ತುಮಾಡಿ ಮಧ್ಯಾಹ್ನದಲ್ಲಿ ಮೋಹಿನಿಯ ಕೂಡ ಹೋಗಿದ್ದ ಹೊಟೇಲನ್ನೇ ಸೇರಿದ. ಮಧ್ಯಾಹ್ನದ ಚಿಕ್ಕ ಕೋಣೆಯೇ ಗೆಳೆಯರಿಗಾಗಿ ಕಾದಿತ್ತು. ಮಧ್ಯಾಹ್ನ ತಮಗೆ ಸೇವೆ ಸಲ್ಲಿಸಿದ ಹೆಡ್ ವೇಟರನೇ ಮತ್ತೆ ಹಾಜರಾಗಿದ್ದ. ವಸಂತನನ್ನು ನೋಡಿ ಆತ ನಸುನಕ್ಕು ಹೇಳಿಕೆಗಾಗಿ ಕಾಯ್ದ.

ಗೆಳೆಯರಿಬ್ಬರೂ ನಿಧಾನವಾಗಿ ಊಟ ನಡೆಸಿದ್ದರು. ವಸಂತನೆಂದ:

" ಇಲ್ಲಿ ಊಟ ಸೊಗಸಾಗಿರುತ್ತದೆ, ಆದರೆ ಚಾರ್ಜ್ ಮಾತ್ರ ತುಂಬ ಹೆಚ್ಚು."

" ಆದರೂ ಅಡ್ಡಿ ಇಲ್ಲ" ಎಂದು ಗೆಳೆಯ ಮುಂದುವರಿದ: " ಇಲ್ಲಿ ನಾನೂ ನೀನೂ ಬಂದು ಪ್ರಯೋಜನ ಇಲ್ಲ, ವಸಂತ. ಇಲ್ಲಿ ಬರಬೇಕಾದರೆ 'ಫೇರ್' ಕಂಪನಿ ಇರಬೇಕು! ಹಾಗಿದ್ದವರು ನಾಲ್ಕು ದುಡ್ಡು ಹೆಚ್ಚು ಕೊಡಲಿಕ್ಕೆ ಹಿಂದುಮುಂದೆಯೂ ನೋಡುವುದಿಲ್ಲ."

ವಸಂತನಿಗೆ ಗೆಳೆಯನ ಮಾತು ನಿಜವೂ ಎನಿಸಿತು. ವಿಚಿತ್ರವೂ ಎನಿಸಿತು. ಮಧ್ಯಾಹ್ನ ತಾನು ಮೋಹಿನಿಯ ಜೊತೆಯಲ್ಲಿದ್ದಾಗ ವೇಟರನಿಗೆ ಎಷ್ಟು ದುಡ್ಡು ಕೊಟ್ಟಿದ್ದನೋ, ಆತ ಎಷ್ಟು ಹಿಂತಿರುಗಿ ತಂದಿರಿಸಿದ್ದನೋ ಯಾವುದರದೂ ಎಚ್ಚರವಿರಲಿಲ್ಲವೆಂಬುದನ್ನು ನೆನೆದು ಗೆಳೆಯನ ಅಭಿಪ್ರಾಯವನ್ನು " ಹೌದು, ನಿನ್ನ ಮಾತು ನಿಜ" ಎಂದು ಸಮ್ಮತಿಸಿದ.

ಹೊರಗಡೆ ಮ್ಯಾನೇಜರನ ಕೂಡ ಯಾರೋ ಮಾತನಾಡುತ್ತಿದ್ದರು. ಮೊದಮೊದಲು ಸಾವಕಾಶವಾಗಿಯೇ ಮಾತನಾಡುತ್ತಿದ್ದ ಇಬ್ಬರೂ ಈಗ ಹೆಚ್ಚುಕಡಮೆ ಎತ್ತರದ ದನಿಯಲ್ಲಿ ವಾಗ್ಯುದ್ಧಕ್ಕೆ ನಿಂತಂತಿತ್ತು. ಹೊಟೇಲಿ ನಲ್ಲಿಯ ಎಲ್ಲರ ಲಕ್ಷ್ಯವೂ ಅತ್ತ ಕಡೆಗೇ ತಿರುಗಿತ್ತು. ಮ್ಯಾನೇಜರನ ಕೂಡ ಮಾತನಾಡುತ್ತಿರುವ ವ್ಯಕ್ತಿಯ ದನಿಯ ಪರಿಚಯ ವಸಂತನಿಗಿದ್ದಂತೆನಿಸಿತು. ಒಳ್ಳೇ ಕುತೂಹಲದಿಂದ ಕೇಳತೊಡಗಿದ.

" ಏನ್ರೀ, ನೀವು ಹೊಟೇಲು ಇಡುವುದು ಇಷ್ಟಕ್ಕಾಗಿಯೆ ಏನು ? "

" ಅದನ್ನೆಲ್ಲ ತೆಗೆದುಕೊಂಡು ನಿಮಗೇನು ಮಾಡಬೇಕಾಗಿದೆ ? "

" ನನಗೆ ನಿಮ್ಮ ಕಡೆಯಿಂದ ಖಂಡಿತವಾದ ಸಮಾಚಾರ ಬೇಕಾಗಿದೆ. ಇವತ್ತು ಮಧ್ಯಾಹ್ನ ಆ ಹೆಣ್ಣುಮಗಳು ಒಬ್ಬರ ಜೊತೆಯಲ್ಲಿ ನಿಮ್ಮ ಹೋಟೇಲಿಗೆ ಬಂದಿದ್ದಳೋ ಹೇಗೆ ಎಂದು."

" ನೀವು ಕೇಳಿದ್ದನ್ನೆಲ್ಲ ನಾನು ಹೇಳಲೇಬೇಕೆಂಬ ಯಾವ ಒತ್ತಾಯವೂ ಇಲ್ಲವಷ್ಟೆ ! "

" ಯಾವ ಒತ್ತಾಯವಿರದಿದ್ದರೂ ಸಭ್ಯ ಗೃಹಸ್ಥರಿಗೆ ಯೋಗ್ಯವಾದ ಉತ್ತರವನ್ನು ಹೇಳಬಹುದು ! "

" ನೀವು ಮಾತ್ರ ಅದೇ ಮಾತನ್ನು ಮರೆಯುತ್ತಿದ್ದೀರಿ. ನಿಮಗೆ ಏನಾದರೂ ಸರಳವಾಗಿ ಮಾತನಾಡುವುದಿದ್ದರೆ ಮಾತನಾಡಿ. ಇಲ್ಲವಾದರೆ— ಇಲ್ಲಿಂದ ಹೊರಡಬಹುದು."

"ನಾನು ಹೊರಡುತ್ತೇನೆ. ಇಂಥ ಸ್ಥಳದಲ್ಲಿ ಕಾಲಿಡುವುದು ಕೂಡ ತಪ್ಪು."

" ಇರಬಹುದು. ಈಗ ನಿಮಗೆ ಯಾರು ಔತಣ ಕೊಟ್ಟು ಇಲ್ಲಿಗೆ ಬರಹೇಳಿದ್ದರು ? "

" ನನ್ನ ಕೆಲಸಕ್ಕಾಗಿಯೇ ಬಂದೆ. ಆದರೆ ತಾವು ಇಷ್ಟು ಹೊಣೆಗಾರಿಕೆಯಿಲ್ಲದೆ ಮಾತನಾಡಬಹುದು ಎಂದು ಎಣಿಸಿರಲಿಲ್ಲ."

" ಮಿಸ್ಟರ್, ತುಸು ಎಚ್ಚರದಿಂದ ಮಾತನಾಡಿರಿ. ನಿಮ್ಮ ಕೂಡ ನಾನು ಸಭ್ಯ ಗೃಹಸ್ಥರಂತೆ ನಡೆದುಕೊಳ್ಳುತ್ತಿದ್ದೇನೆ. ನಿಮ್ಮಿಂದ ಅದನ್ನೇ ನಾನು ಅಪೇಕ್ಷಿಸುತ್ತೇನೆ. ಇಲ್ಲಿ ಬೈದಾಟಕ್ಕೆ ಅವಕಾಶವಿಲ್ಲ, ತಿಳಿಯಿತೆ ? "

" ನನಗೇನು ಬೈದಾಡಿ ನಿಮ್ಮ ಕೂಡ ಜಗಳವಾಡುವ ಉತ್ಸಾಹವಿಲ್ಲ. ದಯಮಾಡಿ ನನ್ನ ಪ್ರಶ್ನೆಗೆ ಉತ್ತರ ಹೇಳಿದರೆ ಮಾತೇ ಮುಗಿದು ಹೋಗುವುದು."

" ಏನದು ನಿಮ್ಮ ಮಾತು ? "

" ಇಂದು ಮಧ್ಯಾಹ್ನ ಎರಡು ಗಂಟೆಯ ಸುಮಾರಿಗೆ ಒಬ್ಬ ಹೆಣ್ಣು ಮಗಳು ಇನ್ನಾರ ಜೊತೆಯಲ್ಲಿಯೋ ನಿಮ್ಮಲ್ಲಿ ಬಂದಿದ್ದಳೋ ಹೇಗೆ ? "

" ಬಂದಿರಬಹುದು, ಇಲ್ಲಿ ಬಂದವರ ಲೆಕ್ಕ ಇಡುವುದಿಲ್ಲ ನಾನು ! "

" ಲೆಕ್ಕವಿಡದಿದ್ದರೂ ಯಾರು ಯಾರು ಬಂದಿದ್ದರು ಇದನ್ನು ನೋಡುವುದಿಲ್ಲವೆ ? "

" ಯಾರು ಬಂದರೆ ನನಗೇನು ? ಬಂದವರು ಯಾರು ಎಂಬುದನ್ನು ನಾನು ನೋಡಬೇಕಿಲ್ಲ."

" ಹಾಗಾದರೆ ಬೇಕಾದ ಹೆಣ್ಣು ಗಂಡು ನಿಮ್ಮಲ್ಲಿ ಬಂದು, ಊಟ ಉಪಾಹಾರ ಮಾಡಬಹುದು, ಒಬ್ಬರೊಬ್ಬರೊಡನೆ ಸಲಿಗೆಯಲ್ಲಿ ಸರಸವಾಡಬಹುದು !"

" ಇದು ನೋಡಿರಿ, ಮಿಸ್ಟರ್, ಇಲ್ಲಿ ಯಾರು ಬಂದರೂ ನನ್ನ ದೃಷ್ಟಿಯಿಂದ ಅವರು ಇಲ್ಲಿಗೆ ಬರುವುದು ಉಪಾಹಾರಕ್ಕಾಗಿ, ಊಟಕ್ಕಾಗಿ; ಬಂದಾಗ ಅವರು ಒಬ್ಬರೊಬ್ಬರೊಡನೆ ಸಲಿಗೆಯಿಂದ ನಡೆದುಕೊಂಡರೆ, ನಾನು ಅವರಿಗೆ ಪ್ರತಿಬಂಧ ಮಾಡಬಲ್ಲೆನೆ ? "

" ಹಾಗಾದರೆ ಅಂಥ ಸಲಿಗೆಗೆ ನೀವು ಅವಕಾಶ ಕೊಡುವುದು ಸರಿಯೆ?"

" ಮತ್ತೆ ಹೇಳುತ್ತೇನೆ—ಇಲ್ಲಿ ನಾನು ಅವರಿಗೆ ಅವಕಾಶ ಕೊಡುವುದು ಊಟಕ್ಕೆ, ಉಪಾಹಾರಕ್ಕೆ—ಸಲಿಗೆಯ ಪ್ರಶ್ನೆ ನನಗೆ ಸಂಬಂಧವಿಲ್ಲ."

" ಅಂದಮೇಲೆ ಬೇಕಾದವರು ಬೇಕಾದ್ದನ್ನು ಮಾಡಬಹುದು ಎಂದಾಯಿತಲ್ಲವೆ ? "

" ಇದು ನೋಡಿರಿ, ಮಿಸ್ಟರ್, ಸ್ವಲ್ಪ ಶಾಂತವಾಗಿರಿ. ಸುಮ್ಮನೆ ಹರಿಹಾಯಬೇಡಿರಿ. ಇಬ್ಬರು ತರುಣತರುಣಿಯರು ಒಬ್ಬರೊಬ್ಬರನ್ನು ಪ್ರೀತಿಸುತ್ತಿದ್ದು, ಅವರು ಕೆಲಕಾಲ ಇಲ್ಲಿಗೆ ಬಂದು ಸುಖವಾಗಿ ಮಾತನಾಡಿಕೊಂಡರೆ ಯಾಕೆ ನೀವು ಇಷ್ಟು ಕೋಪಿಸಿಕೊಳ್ಳಬೇಕು ? ಅಷ್ಟು ಸುಖವಾಗಿದ್ದವರನ್ನು ನೋಡಿದರೆ ನನಗಂತೂ ತುಂಬ ಸಂತೋಷ ! "

" ಇದೇ ಅನೀತಿಗೆ ಉತ್ತೇಜನ ! "

" ಇರಬಹುದು, ನಿಮ್ಮ ದೃಷ್ಟಿಯಿಂದ. ಇಂಥ ಮಾತಿನ ಅನುಭವ ನನಗೆ ಬೇಕಾದಷ್ಟಿದೆ. ಅದು ಏನೆಂಬುದನ್ನು ನಾನು ತಿಳಿದಿದ್ದೇನೆ."

" ಆಕೆ ಇನ್ನಾರಾದರೂ ಆಗಿದ್ದರೆ, ಆಕೆಗೆ ಮದುವೆಯಾಗಿರದಿದ್ದರೆ, ನಾನು ಕೇಳಲಿಕ್ಕೆ ಬರುತ್ತಿರಲಿಲ್ಲ."

" ನಿಮಗೆ ಯಾರಾಗಬೇಕು ಅವರು ? "

" ಆಕೆ ನನ್ನ ತಮ್ಮನ ಹೆಂಡತಿ ! "

" ಹಾಗಾದರೆ ನೀವೇಕೆ ಇಷ್ಟು ಸುಮ್ಮನೆ ಸಂತಾಪ ಪಡುತ್ತಿದ್ದೀರಿ. ಇದರಲ್ಲಿ ಯಾರಿಗಾದರೂ ತಕರಾರು ಮಾಡುವ ಅಧಿಕಾರವಿದ್ದರೆ ಆ ಹೆಣ್ಣು ಮಗಳ ಗಂಡ ತಕರಾರು ಮಾಡಬೇಕು ! "

“ ಮಾತು ಎರಡನೆಯದವರದಾಗಿರುವ ತನಕ ಹೀಗೆ ಹೇಳಬಹುದು. ಪ್ರಸಂಗ ಬಂದಾಗ ತಿಳಿಯುತ್ತದೆ! ”

“ ಆಕೆ ಇರುವುದು ಎಲ್ಲಿ ? ”

“ ಬೋರಿವಲಿ.”

ವಸಂತನಿಗೆ ಮನದಟ್ಟಾಗಿಹೋಯಿತು : ಮಾತು ನಡೆದದ್ದು ಮೋಹಿನಿಯನ್ನು ಕುರಿತೇ ಎಂದು. ಮಾತನಾಡುತ್ತಿದ್ದವ ಭಾಸ್ಕರರಾಯನೆಂಬುದನ್ನೂ ಗುರುತಿಸಿದ್ದ. ಆತನ ಮನಃಸ್ಥಿತಿ ವಿಚಿತ್ರವಾಗಿತ್ತು. ಒಂದೆಡೆ ಭೀತಿ; ಇನ್ನೊಂದೆಡೆ ಪ್ರಸಂಗವು ಅಲ್ಲಿಯೇ ವಿಕೋಪಕ್ಕೆ ಹೋದರೆ ಭಾಸ್ಕರರಾಯನ ಕೂಡ ಬಾಯಿಗೆ ಬಾಯಿ ಹತ್ತಬೇಕಾಗುತ್ತದಲ್ಲ, ನಾಲ್ಕು ಜನರೆದುರು ಎಂಥ ಅವಮಾನ—ಎಂದು ಕಾತರ. ವಸಂತನ ಮುಖ ತೀರ ಗಂಭೀರವಾಗಿತ್ತು. ಗೆಳೆಯನಿಗೆ ಮಾತ್ರ ಯಾವುದರ ಅರ್ಥವೂ ಸಂಪೂರ್ಣವಾಗಿ ಆಗುತ್ತಿರಲಿಲ್ಲ. ಮೋಹಿನಿಯ ಕೂಡ ತಾನು ಅಲ್ಲಿಗೆ ಬರಬಾರದಾಗಿತ್ತು ಎನಿಸಿತು. ಆದರೆ ಇದೆಲ್ಲ ವಿಷಯವನ್ನು ಭಾಸ್ಕರ ಇಷ್ಟರಲ್ಲಿಯೇ ಹೇಗೆ ಪತ್ತೆ ಮಾಡಿದನೆಂಬುದು ಅವನಿಗೆ ಬಗೆಹರಿಯದಾಯಿತು. ಮ್ಯಾನೇಜರ್ ಕೇಳುತ್ತಿದ್ದ :

“ ಅವರಿಬ್ಬರೂ ಬೋರಿವಲಿಯಿಂದ ಬಂದಿದ್ದರೆ ? ”

“ ಆಕೆ ಪರೀಕ್ಷೆಗೆ ಕುಳಿತಿದ್ದಾಳೆ. ಇಂದು ಮಧ್ಯಾಹ್ನ ಪರೀಕ್ಷೆ ಮುಗಿಯಿತು. ಪರೀಕ್ಷೆ ಮುಗಿದ ಕೂಡಲೆ ಅವರಿಬ್ಬರೂ ಇಲ್ಲಿಗೆ ಬಂದಿರಬೇಕು.”

“ ಆ ಇನ್ನೊಬ್ಬರು ಯಾರು ? ”

“ ಅದೇ ನನಗೆ ತಿಳಿಯಬೇಕಾಗಿದೆ. ಅದು ನನಗೆ ಖಂಡಿತವಾಗಿ ಗೊತ್ತಿದ್ದರೆ ಇಷ್ಟು ಹೊತ್ತಿಗೆ ಆತನ ತಲೆಯನ್ನು ಒಡೆದುಹಾಕುತ್ತಿದ್ದೆ ! ”

“ ಅವರು ಇಲ್ಲಿ ಬಂದಿದ್ದರೆಂಬುದು ನಿಮಗೆ ಹೇಗೆ ಗೊತ್ತು ? ”

“ ನನಗೆ ಖಂಡಿತವಾಗಿ ಗೊತ್ತಿದೆ. ಅವರು ಇಲ್ಲಿ ಮೂರು ಗಂಟೆಯ ಸುಮಾರಿಗೆ ಬಂದಿದ್ದರು, ನಾಲ್ಕರವರೆಗೂ ಇದ್ದರು ! ”

“ ಅದನ್ನು ಹೇಗೆ ಹೇಳುತ್ತೀರಿ ? ”

ಭಾಸ್ಕರ ಸೌಮ್ಯವಾಗಿ ಮಾತನಾಡತೊಡಗಿದ. ಮ್ಯಾನೇಜರ್ ತುಸು ಕುತೂಹಲ ತೋರಿಸಿದ್ದರಿಂದ ಅವನ ಸಿಟ್ಟು ಕೆಳಗಿಳಿಯತೊಡಗಿತು.

“ ಇದು ನೋಡಿರಿ, ಮ್ಯಾನೇಜರ್ ಸಾಹೇಬ್—ಇದು ಸೀರಿಯಸ್

ವಿಷಯ. ಇದನ್ನು ತಡೆಯಲೇಬೇಕಾಗಿದೆ. ಇದರಲ್ಲಿ ನಿಮ್ಮ ಸಹಕಾರ ಬೇಕು."

ವಸಂತ ಒಳಗಿನಿಂದ ಕೇಳುತ್ತಲೇ ಇದ್ದ. ಗೆಳೆಯ ವಸಂತನ ಮುಖವನ್ನೇ ನೋಡುತ್ತಿದ್ದ. ಊಟ ಯಾವಾಗಲೋ ಮುಗಿದುಹೋಗಿತ್ತು. ಹೆಡ್ ವೇಟರ್ ಬಂದು ಬಿಲ್ ತಂದುಕೊಟ್ಟು ವಸಂತನನ್ನು ಸೂಕ್ಷ್ಮವಾಗಿ ನೋಡಿದ. ವಸಂತನೂ ಆತನನ್ನು ಅರ್ಥಪೂರ್ಣವಾಗಿ ನೋಡಿ, ಸುಮ್ಮನಿರುವಂತೆ ಸನ್ನೆ ಮಾಡಿದ. ' ನನ್ನ ಮಾನ ನಿನ್ನ ಕೈಯಲ್ಲಿದೆ ' ಎಂದು ಹೇಳುವಂತಿತ್ತು ವಸಂತನ ದೃಷ್ಟಿ. ಮ್ಯಾನೇಜರನೆನ್ನುತ್ತಿದ್ದ :

" ನಿಮ್ಮ ಪ್ರಶ್ನೆ ನನಗೆ ಅರ್ಥವಾಗಿದೆ. ಆದರೆ ನಾನೇನೂ ಮಾಡಲಾರೆ!"

" ಯಾಕೆ ? "

" ಮೊದಲನೆಯದಾಗಿ ಬಂದವರು ಯಾರು, ಎಂತು, ನನಗೆ ಗೊತ್ತಿಲ್ಲ ! "

" ನಿಮ್ಮ ವೇಟರ್ ಹೇಳಬಹುದು ! "

" ವೇಟರ್ ಏನು ಹೇಳುತ್ತಾನೆ ? ಇಲ್ಲಿ ಬಂದವರ ಹೆಸರು ವಿಳಾಸ ಬರೆದುಕೊಳ್ಳುವುದಿಲ್ಲ ಆತ ! "

" ಅದು ಸರಿ. ಆದರೆ—"

ಮ್ಯಾನೇಜರ್ " ಹೆಡ್ ವೇಟರ್ " ಎಂದು ಕರೆದ. ವಸಂತನಿಗೆ ದೇಹದೊಳಗಿನಿಂದ ಜೀವ ಹೋದಂತಾಯಿತು. ಇನ್ನು ಮುಂದೆ ಪ್ರಸಂಗವನ್ನು ತಪ್ಪಿಸುವುದು ಸಾಧ್ಯವಿಲ್ಲ ಎನಿಸಿತು.

" ಜೀ ಸಾಬ್—"

" ಇವರು ಹೇಳುವಂತೆ ಇಂದು ಮಧ್ಯಾಹ್ನ ಯಾರಾದರೂ ಬಂದಿದ್ದರೆ ? "

" ಹೌದು—"

" ಅವರು ಯಾರು ನಿನಗೆ ಗೊತ್ತೆ ? "

" ನನಗೆ ಗೊತ್ತಿಲ್ಲ. ಇದೇ ಮೊದಲು ಸಲ ಅವರು ಇಲ್ಲಿ ಬಂದದ್ದು ! "

" ಏನು ತೆಗೆದುಕೊಂಡರು ಅವರು ? "

" ಒಂದು ಕರಿ-ರೈಸ್, ಒಂದು ಆರೆಂಜ್ ಜ್ಯೂಸ್—"

" ಅವರನ್ನು ನೀನು ಗುರುತಿಸಬಲ್ಲೆಯೇನು ? "

" ಇಲ್ಲ. ಅವರ ಮುಖವನ್ನು ನಾನೇತಕ್ಕೆ ನೋಡಲಿ ? "

" ಅಚ್ಛಾ—"

ವಸಂತ ನಿಧಾನವಾಗಿ ನಿಟ್ಟುಸಿರೆಳೆದ. ಗೆಳೆಯನಿಗೆ ಯಾವುದೂ ಅರ್ಥ ವಾಗುತ್ತಿರಲಿಲ್ಲ. ವಸಂತ ಅವರ ಸಂವಾದದಲ್ಲಿ ಇಷ್ಟರಮಟ್ಟಿಗೆ ಯಾಕೆ ತಲ್ಲೀನ ನಾಗಿರಬಹುದೆಂದು ಆತನಿಗೆ ಬಗೆಹರಿಯದಾಗಿತ್ತು. ಅವನಂದ:

" ಹೊರಡಪ್ಪಾ ಇನ್ನು. ನಾಕು ಈ ತಲೆಹರಟೆ. ಏನು ಕತೆಯೊ ? "

" ಗೊತ್ತಾಗಲಿಲ್ಲವೆ ನಿನಗೆ ? "

" ಏನೋ ಅರ್ಥಮರ್ಥ ಗೊತ್ತಾಯಿತು. ಹಾಳಾಗಲೊಲ್ಲರೇಕೆ ! ನಡೆ, ಹೋಗೋಣ."

" ಹೊರಡೋಣವಂತೆ ತಡೆಯೊ—"

ಆ ಕ್ಷಣಕ್ಕೆ ವಸಂತ ಹೊರಬೀಳುವುದೇ ಸಾಧ್ಯವಿರಲಿಲ್ಲವೆಂಬುದು ಗೆಳೆಯನಿಗೇನು ಗೊತ್ತು ? ಇಬ್ಬರೂ ಮತ್ತೆ ಒಂದೊಂದು ಸಿಗರೇಟು ಹಚ್ಚಿ ದರು. ಮ್ಯಾನೇಜರ್ ಹೇಳುತ್ತಿದ್ದ :

" ನೋಡಿದಿರಲ್ಲವೆ ? ನಾವು ಯಾತಕ್ಕೆ ಯಾರ ಉಸಾಬರಿ ಮಾಡಬೇಕು. ಬೆಳಗಿನಿಂದ ಸಂಜೆಯವರೆಗೆ ಎಷ್ಟೋ ಜನ ಬರುತ್ತಾರೆ, ಹೋಗುತ್ತಾರೆ."

" ಆದರೂ ನೀವು ಇಂಥ ವಿಷಯದಲ್ಲಿ ಒಂದಿಷ್ಟು ಲಕ್ಷ್ಯವಿಡುವುದು ಒಳ್ಳೆಯದು—"

" ಅದು ಸಾಧ್ಯವಿಲ್ಲ. ಏನೋ ಸುಮ್ಮನೆ ನಿಮ್ಮ ಸಮಾಧಾನಕ್ಕಾಗಿ ಎಂದು ವೇಟರನನ್ನು ಕರೆದು ಕೇಳಿದೆ. ಇಂಥ ವಿಷಯದಲ್ಲಿ ಒಂದು ವೇಳೆ ವ್ಯಕ್ತಿಯ ಪರಿಚಯವಿದ್ದರೂ ಕೂಡ ಅವರನ್ನು ಹೀಗೆ ಅವರ ಬೆನ್ನ ಹಿಂದೆ ವಿಶ್ವಾಸಘಾತ ಮಾಡುವುದು ನನಗೆ ಎಷ್ಟೂ ಸರಿಯಾಗಿ ಕಾಣುವುದಿಲ್ಲ."

" ಹಾಗಾದರೆ ಅವರು ಇನ್ನೊಬ್ಬರ ವಿಶ್ವಾಸಘಾತ ಮಾಡಬಹುದೇನೊ !"

" ಆ ವಿಷಯ ಅವರಿಗೆ ಸೇರಿದ್ದು. ನನಗೆ ಸಂಬಂಧವಿಲ್ಲ. ಹೀಗೆ ಬಂದವರ ಹೋದವರ ವಿಳಾಸ ಕೇಳಿದವರಿಗೆ ನಾನು ಹೇಳುತ್ತ ಹೋದರೆ ಮೂರು ದಿನಗಳಲ್ಲಿ ನನ್ನ ಬಿಜಿನೆಸ್ ಕ್ಲೋಸ್ ಮಾಡಬೇಕಾದೀತು ! "

" ಆದರೆ ಇಂಥ ವಿಷಯದ ಸಹಾಯದಿಂದ ಬಿಜಿನೆಸ್ ಬೆಳೆಯಿಸಲೂ ಬಹುದು ! "

" ನಿಮ್ಮ ಮಾತು ತಿರುಗಿ ತೆಗೆದುಕೊಳ್ಳಿರಿ, ಮಿಸ್ಟರ್—ಹಾದಿಗೆಟ್ಟು ಮಾತನಾಡಬೇಡಿರಿ, ದಯಮಾಡಿ."

" ನೀವು ಅಪರೋಕ್ಷವಾಗಿ ಉತ್ತೇಜನ ಕೊಟ್ಟಂತೆಯಾಗಲಿಲ್ಲವೆ ? "

" ಅಪರೋಕ್ಷವಾಗಿ ಇನ್ನು ಹತ್ತು ಸಾವಿರ ವಿಷಯ ನಡೆಯಬಹುದು. ನಮ್ಮದೇನು ಸಂಬಂಧ? ಪರೋಕ್ಷವಾಗಿ ನಾವು ಯಾವ ವಿಷಯದಲ್ಲಿಯೂ ತಲೆಹಾಕುವುದಿಲ್ಲ. ಇಲ್ಲಿ ಅವರು ನಮ್ಮ ಗಿರಾಕಿಗಳು. ನಾವು ಅವರ ಕೂಡ ನಡೆದುಕೊಳ್ಳುವುದು ಆ ಒಂದು ಸಂಬಂಧದಲ್ಲಿ ಮಾತ್ರ ! "

" ಅದು ಸರಿ. ಆದರೆ ಇದು ನಮ್ಮ ಸಮಾಜದ ಪ್ರಶ್ನೆ ಎಂಬ ದೃಷ್ಟಿಯಿಂದ ನಿಮ್ಮ ಮುಂದೆ ಒಂದು ಬೇಡಿಕೆಯನ್ನಿಡುತ್ತೇನೆ. ನೀವು ಸಹಾಯ ಮಾಡಬೇಕು."

" ನಾನೇನು ಸಹಾಯ ಮಾಡಬಲ್ಲೆ ? "

" ಅವರು ಇಲ್ಲಿ ಇನ್ನೊಮ್ಮೆ ಬಂದರೆ, ದಯಮಾಡಿ ನನಗೆ ಕೂಡಲೆ ತಿಳಿಸಬೇಕು."

" ನಾನು ವಚನ ಕೊಡಲಾರೆ ! "

" ಅದರ ಬಗ್ಗೆ ನೀವೇನು ಬೇಕಾದ ಫೀ ಚಾರ್ಜ್ ಮಾಡಬಹುದು ! "

" ಮತ್ತೆ ಹಾದಿಗೆಟ್ಟು ಮಾತಾಡುತ್ತಿದ್ದೀರಿ, ಮಿಸ್ಟರ್, ನೀವು. ದುಡ್ಡಿಗಾಗಿ ಬೇಕಾದ್ದನ್ನು ನಾನು ಮಾಡಬಹುದು ಎಂದು ತಿಳಿದಿದ್ದೀರಾ ? "

" ಹಾಗಲ್ಲ, ಹಾಗಲ್ಲ....."

" ಅಂದರೆ ಹೇಗೆ ? "

" ನೀವು ಸಹಾಯ ಮಾಡಲೇಬೇಕು ಎಂದೆ ! "

" ಆ ಮಾತು ಬೇರೆ. ಇನ್ನೊಮ್ಮೆ ಬಂದರೆ ವಿಚಾರ ಮಾಡೋಣ ! "

" ನಾನು ನನ್ನ ವಿಳಾಸ ಬರೆದಿಟ್ಟು ಹೋಗಬಹುದೆ ? "

" ಆಗಬಹುದು."

ವಸಂತ ಬಾಗಿಲ ಸಂದಿನೊಳಗಿನಿಂದ ನೋಡುತ್ತಿದ್ದ. ಭಾಸ್ಕರ ಕಾಗದ ತುಣುಕಿನ ಮೇಲೆ ತನ್ನ ವಿಳಾಸವನ್ನು ಬರೆದುಕೊಟ್ಟುದನ್ನು ಮ್ಯಾನೇಜರ್ ತನ್ನ ಡ್ರಾಯರಿನಲ್ಲಿಟ್ಟ. ಭಾಸ್ಕರ ಹೊರಡಲನುವಾದದ್ದನ್ನು ನೋಡಿ ಮ್ಯಾನೇಜರ್ ಕೇಳಿದ :

" ಅವರಿಬ್ಬರು ಇಲ್ಲಿಯೆ ಬಂದಿದ್ದರೆಂಬುದು ನಿಮಗೆ ಹೇಗೆ ತಿಳಿಯಿತು ? "

" ನನಗೆ ಮೊದಲಿನಿಂದ ಏನೋ ಸಂಶಯ ಇತ್ತು. ಇಂದು ಮಧ್ಯಾಹ್ನ

ಒಬ್ಬ ವಿದ್ಯಾರ್ಥಿಯನ್ನು ಆಕೆಯ ಬೆನ್ನ ಹಿಂದೆಯೇ ಬಿಟ್ಟಿದ್ದೆ. ಆತ ಯಾರಿರ ಬಹುದು ಎಂಬುದರ ಬಗ್ಗೆ ನನಗೇನೋ ತುಸು ಗೊತ್ತಾಗಿದೆ. ಆದರೆ ಖಂಡಿತ ವಾಗಿ ತಿಳಿಯಬಹುದೇನೋ ಎಂದುಕೊಂಡು ಬಂದೆ."

ವಸಂತನಿಗೆ ತಲೆಯಲ್ಲಿ ಮಿಂಚು ಹೊಳೆದಂತಾಯಿತು. ಮಧ್ಯಾಹ್ನದಲ್ಲಿ ಮೂರು ಬಾರಿ ಎದುರಾಗಿದ್ದ ವಿದ್ಯಾರ್ಥಿ ಸುಮ್ಮನೆ ಅಲೆದಾಡುತ್ತಿದ್ದಿಲ್ಲ, ಭಾಸ್ಕರನ ಪ್ರತಿನಿಧಿಯಾಗಿ ತನ್ನ ಮತ್ತು ಮೋಹಿನಿಯ ಹಿಂದಿನಿಂದಲೇ ಆತ ಇದ್ದನೆಂದು.

ಭಾಸ್ಕರ ಹೊರಟುಹೋಗಿ ಐದು ನಿಮಿಷಗಳನಂತರ ಹೆಡ್ ವೇಟರ್ ಬಂದು ನಸುನಕ್ಕ. 'ಆತ ಹೊರಟುಹೋದ'ನೆಂಬ ಅಭಿಪ್ರಾಯದಿಂದ ಗೆಳೆಯನಿಗೆ ವಸಂತನೆಂದ:

"ಕತೆ ಮುಗಿಯಿತು, ನಡೆ ಇನ್ನು."

"ಏನು ಕತೆಯೋ ಏನು ಮಣ್ಣೋ!" ಎಂದು ಗೆಳೆಯ ಹೊರಬಿದ್ದ. ಆತನ ಹಿಂದಿನಿಂದಲೆ ಹೊರಬಿದ್ದ ವಸಂತ ಕೋಣೆಯಿಂದ ಹೊರಬೀಳುವಾಗ ವೇಟರನ ಕೈಯಲ್ಲಿ ರೂಪಾಯಿಯ ನೋಟೊಂದನ್ನು ನೇರಿಸಿದ. "ಥ್ಯಾಂಕ್ ಯು, ನಾಬ್" ಎಂದ ವೇಟರ್. ವಸಂತನೆಂದುಕೊಂಡ: 'ಆ ಮಾತನ್ನು ನಾನೇ ನಿನಗೆ ಹೇಳಬೇಕು' ಎಂದು.

ಬೀದಿಗೆ ಬಂದಾಗ ವಸಂತನ ತಲೆ ವಿಚಾರಗಳಿಂದ ತುಂಬಿ ತುಳುಕು ತ್ತಿತ್ತು. ವಿಚಾರಗಳು ಬುದ್ಧಿಯ ಹಿಡಿತದಿಂದ ತಪ್ಪಿಸಿಕೊಂಡು ಬಂಡು ಹೂಡಿದಂತೆಯೇ ಇತ್ತು. ಗೆಳೆಯನೆಂದ: "ಏನೇನು ನಡೆದಿರುತ್ತದೆಯೋ ಈ ದೊಡ್ಡ ಊರಿನಲ್ಲಿ?" ವಸಂತನ ಲಕ್ಷ್ಯ ಆತನ ಮಾತಿನ ಕಡೆಗಿರಲಿಲ್ಲ.

ಆ ರಾತ್ರಿ ಬೋರಿವಲಿಗೆ ತಿರುಗಿ ಹೋಗುವ ವಿಚಾರ ವಸಂತನದಿದ್ದರೂ ಅಲ್ಲಿಯೇ ಉಳಿದರೆ ಯೋಚನೆಗೂ ಅವಕಾಶ ಉಳಿಯಲಿಕ್ಕಿಲ್ಲವೆಂದೂ, ತನ್ನ ವ್ಯಗ್ರ ಚಿತ್ತವನ್ನು ಗೆಳೆಯ ಗುರುತಿಸಬಹುದೆಂದೂ, ಕೂಡಲೆ ಮನೆಗೆ ಹೊರಡು ವುದೆಂದು ಹೊರಟೇಬಿಟ್ಟ. ಹೊತ್ತು ಹತ್ತಕ್ಕೆ ಸಮಿಾಪಿಸಿತ್ತು. ಬೀದಿಗಳೆಲ್ಲವೂ ಬರಿದಾಗತೊಡಗಿದ್ದವು. ಮಧ್ಯಾಹ್ನದಲ್ಲಿ ಮೋಹಿನಿಯೊಡನೆ ಹೊಟೇಲಿಗೆ ಬಂದ ದಾರಿಯಲ್ಲಿಯೇ ಹಿಂದಿರುಗುತ್ತಿದ್ದ. ಆದರೆ ಆಗಿನ ಉನ್ಮಾದದ ಬದಲು ಈಗ ಅಲ್ಲಿ ಭೀಷಣವಾದ ವಿಚಾರದ ಕೋಲಾಹಲವಿತ್ತು. ಮೋಹಿನಿಯ

ಸಾನ್ನಿಧ್ಯದಲ್ಲಿಯ ಸುಖದ ಅರಿವು ಮಾಯವಾಗಿ ಆ ಸುಖದ ಹಿಂದೆ ಅಡಗಿ ಕೊಂಡ ಭಯಾನಕತೆಯ ದಿಗ್ದರ್ಶನವಾದಂತಿತ್ತು. ಕೇತಕಿಗೆ ಮನಸೋತು ಅದರ ಹತ್ತಿರ ಹೋದಾಗ ಅದರ ಮಡಿಲಲ್ಲಿಯೇ ಅಡಗಿದ್ದ ಭಯಾನಕವಾದ ನಾಗರಹಾವನ್ನು ನೋಡಿದವನ ಸ್ಥಿತಿಯಾಗಿತ್ತು ವಸಂತನದು.

ಗಾಡಿಯಲ್ಲಿ ಬಂದು ಕುಳಿತಾಗ ವಸಂತ ತಾನು ಸಿಲುಕಿಕೊಂಡಿದ್ದ ಪರಿಸ್ಥಿತಿಯ ಆಗುಹೋಗುಗಳ ಲೆಕ್ಕವನ್ನು ಹಾಕುತ್ತಿದ್ದ. ಇದರ ಕೊನೆ ಎಲ್ಲಿ ? ಪರಿಣಾಮವೇನಾಗಬಹುದು ? ಎಂದು ಯೋಚಿಸುತ್ತಿದ್ದ. ಮಧ್ಯಾಹ್ನ ದಲ್ಲಿ ತಾನು ಮತ್ತು ಮೋಹಿನಿ, ಅಂಗಡಿಯಲ್ಲಿ ಕುಳಿತು ಒಂದು ಗಂಟೆಕಾಲ ಕಳೆದದ್ದು, ಅದರನಂತರ ಸಮುದ್ರತೀರದಲ್ಲಿ ತೀರ ಹತ್ತಿರ ಹತ್ತಿರ ಕುಳಿತು ಮಾತನಾಡಿದ್ದು, ಅನಂತರ ಕವಲುದಾರಿಯಲ್ಲಿ ಕೈಕುಲುಕಿ ಬೀಳ್ಕೊಟ್ಟದ್ದು— ಈ ಎಲ್ಲದರ ಸಂಪೂರ್ಣ ವಿವರ ಭಾಸ್ಕರನ ಹತ್ತಿರವಿತ್ತು. ಮೋಹಿನಿಯಿಂದ ಹತ್ತಾರು ರೀತಿಯಲ್ಲಿ ಅಪಮಾನಿತನಾಗಿ ತನ್ನ ಕೃಷ್ಣಕಾರಸ್ಥಾನವನ್ನು ಸಾಧಿಸ ಲಾಗದ್ದಕ್ಕೆ ಅವಳ ಮೇಲೆ ಆತ ಸೇಡು ತೀರಿಸಿಕೊಳ್ಳುವವನಿದ್ದನೆಂಬುದರಲ್ಲಿ ಸಂದೇಹವೇ ಇರಲಿಲ್ಲ. ಭಾಸ್ಕರನ ಸಂಶಯ ತನ್ನ ಮೇಲೆಯೇ ಇದೆ ಎಂಬುದರ ಬಗ್ಗೆಯೂ ವಸಂತನಿಗೆ ಅನುಮಾನವಿರಲಿಲ್ಲ. ಆ ಸಾರೆ ಒಂದೆರಡು ನಿಮಿಷ ತಾವು ನಿಲ್ದಾಣದ ಹತ್ತಿರ ನಿಂತಿದ್ದನ್ನು ನೋಡಿದ್ದರ ಮೇಲಿಂದಲೇ ಕತೆಯನ್ನು ಕಟ್ಟಿ, ಆನಂದನ ಮನಸ್ಸಿನಲ್ಲಿ ವಿಷಬೀಜವನ್ನು ಬಿತ್ತಲೆಸಗಿದವ ಇಷ್ಟೆಲ್ಲ ಸಮಾಚಾರ ಹಸ್ತಗತವಾದಾಗ ಸುಮ್ಮನೆ ಕೂಡಬಹುದೆಂದು ತಿಳಿಯುವುದು ಅಸಾಧ್ಯವಾಗಿತ್ತು. ಭಾಸ್ಕರ ಆನಂದನಿಗೆ ಇದನ್ನೆಲ್ಲ ತಿಳಿಸಿದರೆ ? ಪರಿಣಾಮ ವೇನು ?........

ಯಾವ ದಾರಿಯಿಂದ ಹೋದರೂ ವಿಚಾರ ಕೊನೆ ಮುಟ್ಟಲಿಲ್ಲ. ರೈಲು ಕತ್ತಲೆಯಲ್ಲಿ ಘುಮುಕುತ್ತಿತ್ತು, ವಸಂತನ ವಿಚಾರಗಳಂತೆಯೇ. ವಸಂತ ಎಂದುಕೊಂಡ : 'ನಾನು ಮಾಡಿದ್ದಾದರೂ ಏನು ? ಹೊಟೇಲಿನಲ್ಲಿ ಹಾಗೆ ಮುದುಡಿಕೊಂಡು ಕೂಡದೆ, ಹೊರಗೆ ಬಂದು ಇದ್ದುದನ್ನೆಲ್ಲ ಬಹಿರಂಗವಾಗಿ ಸ್ಪಷ್ಟಪಡಿಸಿದ್ದರೆ ಎಲ್ಲವೂ ಸರಿಯಾಗಿ, ಯಾವ ತೊಂದರೆಯೂ ಇರುತ್ತಿರಲಿಲ್ಲ' ಎಂದು. ಆದರೆ ತಟ್ಟನೆ ವಿಚಾರ ಹೊಳೆಯಿತು : 'ಆಗ ಹೊರಗೆ ಬಂದಿದ್ದರೆ ನನ್ನನ್ನು ಯಾರೂ ನಂಬುವಂತಿರಲಿಲ್ಲ. ನಾಲ್ಕು ಜನರಲ್ಲಿ ಮುಖಭಂಗ ಮಾತ್ರ

ಆಗುತ್ತಿತ್ತು ' ಎಂದು. ಆದ್ದರಿಂದ ತಾನು ಅಲ್ಲಿ ತಡೆದು ನಡೆದದ್ದನ್ನೆಲ್ಲವನ್ನು ಕೇಳಿಕೊಂಡದ್ದೇ ಸರಿಯಾಯಿತೆಂದು ಸಮಾಧಾನ ತಂದುಕೊಂಡ.

ಆದರೆ ಒಟ್ಟಿನಲ್ಲಿ, ಪರಿಸ್ಥಿತಿ ವಿಷಮವಾಗಿ ದಾರಿ ಹಿಡಿಯುವಂತಿತ್ತೆಂಬುದ ರಲ್ಲಿ ವಸಂತನಿಗೆ ಸಂದೇಹ ಉಳಿಯಲಿಲ್ಲ. ರೈಲಿನಿಂದಿಳಿದಾಗಿನಿಂದ ಇನ್ನೊಂದು ವಿಚಾರ ಅವನನ್ನು ಗಾಸಿಮಾಡುತ್ತಿತ್ತು. ಇದರಲ್ಲಿ ತನಗೇನೂ ಯಾರೂ ಮಾಡುವಂತಿರಲಿಲ್ಲ. ಹೆಚ್ಚಾದರೆ ಆನಂದರಾಯನೊಡನೆ ಮನಸ್ತಾಪವಾಗ ಬಹುದು, ಮಾತು ಬೆಳೆಯಬಹುದು. ಆದರೆ ಮೋಹಿನಿ? ಅವಳ ಪಾಲಿಗೆ ದುಃಖ ಕಾದಂತಿತ್ತು. ಭಾಸ್ಕರನ ಮಾತಿನ ಮೇಲಿಂದ ಆನಂದ ಮೋಹಿನಿ ಯನ್ನು ತೊಂದರೆಗೀಡುಮಾಡಿಯೇ ಮಾಡುವನು! ಒಂದು ವೇಳೆ ಅವರಿಬ್ಬರ ನಡುವೆ ಬೆಳೆದು ನಿಂತ ಬಿರುಕು ಇನ್ನೂ ದೊಡ್ಡದಾಗಿ ಎಂದೆಂದಿಗೂ ಅವರು ಕೂಡದಂತಾದರೆ? ಎಂದು ವಸಂತನ ಹೃದಯ ಬಿರಿಯುವಂತೆ ಮಾಡಿತು. ಅವರಿಬ್ಬರೂ ಕೂಡಿ ಸುಖವಾಗಿರಲೆಂದು ಮಾಡಿದ ಪ್ರಯತ್ನ ಅವರಿಬ್ಬರನ್ನು ಕೊನೆಯವರೆಗೂ ಬೇರೆಯಾಗಿಸುವಂತಾದರೆ ಎಂಥ ವಿಪರ್ಯಾಸ? ಎಂದು ವಸಂತನ ಎದೆ ನಡುಗಿತು. ಕೊನೆಯಲ್ಲಿ ಅಂದುಕೊಂಡ: ' ಮೋಹಿನಿಯ ಕೂಡ ನಾನು ಯಾವ ಮಾತನ್ನೂ ಮೊದಲಿನಿಂದ ಆಡಿರದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಅವಳ ಪಾಲಿಗೆ ಸುಖವಿರದಿದ್ದರೆ ಸಲ್ಲದ ಈ ದುಃಖ ವಾದರೂ ಇರುತ್ತಿದ್ದಿಲ್ಲ! ' ಎಂದು.

ತನಗೆ ತಿಳಿಯದಲೇ ವಸಂತ ಆನಂದನ ಮನೆಯೆದುರಿನಿಂದ ಹಾಯ್ದು ಕೋಣೆಯನ್ನು ತಲಪಿದ. ಬೀದಿಯ ಬದಿಯಲ್ಲಿಯ ಕಿಟಕಿಯೊಳಗಿಂದ ಆನಂದನ ಮನೆಯ ನಡುಮನೆಯಲ್ಲಿ ದೀಪ ಉರಿಯುತ್ತಿದ್ದುದು ಕಾಣುತ್ತಿತ್ತು.

ಅದೇ ದೀಪದ ಬುಡದಲ್ಲಿ ಆನಂದ ಮೋಹಿನಿಯರು ಹತ್ತಿರ ಹತ್ತಿರ ಕುಳಿತು ಮಾತನಾಡುತ್ತಿದ್ದರು. ಮೋಹಿನಿಯ ಮನಸ್ಸು ವಸಂತನಿಂದ ಸೂರೆ ಗೊಂಡಿತ್ತು. ಕ್ಷಣಕ್ಷಣಕ್ಕೂ ಅವನನ್ನೇ ನೆನೆಯುತ್ತಿತ್ತು. ಇನ್ನೂ ನಾಲ್ಕು ಘಳಿಗೆಯಾದರೂ ಆತನ ಹತ್ತಿರವೇ ಇರಬಾರದಾಗಿತ್ತೇ? ಎಂದುಕೊಳ್ಳುತ್ತಿತ್ತು. ತನ್ನ ಹತ್ತಿರ ಕುಳಿತವ ಆನಂದನಾದರೂ ಅವನ ಮುಖದಲ್ಲಿ ಮೋಹಿನಿ ಕಾಣು ತ್ತಿದ್ದುದು ವಸಂತನ ಮುಖವನ್ನು!

ಅಂದು ಮಧ್ಯಾಹ್ನ ಮೋಹಿನಿ ಮನೆಗೆ ಬರಬೇಕಾದ ವೇಳೆಗೆ ಬಂದಿರ

ದಿದ್ದರೂ ನಾದಿನಿಯಿಂದ ಯಾವ ಉದ್ವೇಗಕರವಾದ ಮಾತೂ ಬಂದಿರಲಿಲ್ಲ. ಮೋಹಿನಿ ಉಲ್ಲಾಸದಲ್ಲಿದ್ದುದು ಆಕೆಯ ಪರೀಕ್ಷೆ ಮುಗಿದುಹೋದದ್ದರಿಂದ ಎಂದು ನಾದಿನಿ ತಿಳಿದುಕೊಂಡರು. ಆದರೆ ಅವಳ ಅಂತರಂಗ ಅವರಿಗೇನು ಗೊತ್ತು ? ಬಂದಾಗಿನಿಂದ ನಾಲ್ಕಾರು ರೀತಿಯಲ್ಲಿ ಒಳ್ಳೆ ವಿಶ್ವಾಸದಿಂದ ಮಾತ ನಾಡಿಸಿ ಮೋಹಿನಿಯನ್ನು ಆಶ್ಚರ್ಯಗೊಳಿಸಿದ್ದರು. ಮೋಹಿನಿ ಇದರ ಅರ್ಥ ವನ್ನು ಯಾವಾಗಲೊ ಕಂಡುಹಿಡಿದಿದ್ದಳು. ಅಂದು ಮಧ್ಯಾಹ್ನದಿಂದ ನಾದಿನಿ 'ರಜೆ' ಪಡೆದದ್ದರಿಂದ ಮೂರು ದಿವಸಗಳ ಮಟ್ಟಿಗಾದರೂ ಅಡಿಗೆಮನೆಯ ವ್ಯವಸ್ಥೆ ಮೋಹಿನಿಯ ಆಡಳಿತದಲ್ಲಿ ನಡೆಯಬೇಕಾದುದರಿಂದಲೇ ಈ ಎಲ್ಲ ಪ್ರೇಮದ ಆವಿಷ್ಕಾರ, ಎಂದುಕೊಂಡಿದ್ದಳು. ಅಂದು ಗುರುವಾರವಾಗಿದ್ದುದರಿಂದ ನಾರಾಯಣರಾಯರು, ನಾದಿನಿ ಇಬ್ಬರೂ ಊಟ ಮಾಡಿರಲಿಲ್ಲ. ತಡವಾಗಿ ಬಂದ ಆನಂದನಿಗೆ ಮೋಹಿನಿ ಊಟಕ್ಕೆ ಬಡಿಸಿ ತಾನು ಊಟ ಮಾಡಿದ್ದಳು. ಪರೀಕ್ಷೆಯ ಒತ್ತಡ ಗಂಡಹೆಂಡಿರ ಮನಸ್ಸಿನ ಮೇಲಿಂದ ದೂರವಾಗಿದ್ದುದ ರಿಂದಲೊ, ಮನೆಯಲ್ಲಿ ವಾಡಿಕೆಯಾದ ಯಾವ ಮನಸ್ತಾಪವೂ ತಲೆದೋರದ್ದ ರಿಂದಲೊ, ಆನಂದ ಉತ್ಸಾಹಿತನಾಗಿದ್ದ ; ಮೋಹಿನಿಯೂ ತುಂಬ ಉತ್ಸಾಹ ದಲ್ಲಿದ್ದಳು. ಆದರೆ ಆಕೆಯ ಉತ್ಸಾಹಕ್ಕೆ ಸ್ಫೂರ್ತಿ ಆನಂದನಾಗಿರಲಿಲ್ಲ— ವಸಂತ! ಜುಹುವಿನ ಕನಸು! ಹೆಚ್ಚುಕಡಮೆ ಮಧ್ಯಾಹ್ನದಲ್ಲಿ ದಾದರಿನ ಸಮುದ್ರತೀರದಲ್ಲಿ ಅದೇ ಕನಸು ನನಸಾದ ನೆನಹು—ಇವೆಲ್ಲ ಸೇರಿ ಮೋಹಿನಿಯ ಮನಸ್ಸನ್ನು ಎಲ್ಲಿಯೋ ತೇಲಿಸಿಕೊಂಡು ಹೋಗಿದ್ದವು. ಆನಂದ ಕೇಳಿದ :

"ಪರೀಕ್ಷೆ ಹೇಗಾಯಿತು, ಮೋಹಿನಿ ?"

"ನಿಮ್ಮದು ?"

"ಚೆನ್ನಾಗಿಯೇ ಬರೆದೆ. ಒಂದು ಪೇಪರು ಮಾತ್ರ ಅಷ್ಟೇನೂ ತೃಪ್ತಿಕರ ವಾಗಲಿಲ್ಲ."

"ಒಟ್ಟಿನಲ್ಲಿ ?"

"ನೋಡಬೇಕು. ನಮ್ಮ ಪರೀಕ್ಷೆಗೇನೂ ಪಾಸೂ ಫೇಲೂ ಎಂದು ಹೇಳುವಹಾಗಿಲ್ಲ. ಮೊದಲ ನಾಲ್ಕೆಂಟು ನಂಬರುಗಳಲ್ಲಿ ಬಂದರೆ ಚಾನ್ಸ್. ಇಲ್ಲ ವಾದರೆ ಪಾಸಾದರೂ ಅಷ್ಟೇ, ಎಷ್ಟು ಮಾರ್ಕ್ಸ್ ತೆಗೆದುಕೊಂಡರೂ ಅಷ್ಟೆ."

"ಓದುವುದಂತೂ ಬೇಕಾದಷ್ಟು ಮಾಡಿದ್ದಿರಿ."

" ಓದುವುದೇನೋ ಓದಿದೆ. ಆದರೆ ?...."

" ಆದರೆ ಏನು ? "

" ಒಮ್ಮೊಮ್ಮೆ ಮನಸ್ಸು ಹಿಡಿಯುತ್ತಿರಲಿಲ್ಲ."

" ಯಾಕೆ ? "

" ಮದುವೆಯಾದಮೇಲೆ ಓದುವ ಅಗತ್ಯ ಬರಬಾರದು ! "

" ಹಾಗಾದರೆ ಮದುವೆ ಎಂದರೆ ಪುಸ್ತಕಕ್ಕೆ ನಮಸ್ಕಾರ ಏನು ? "

" ಹಾಗೇನಲ್ಲ. ಆದರೆ ಎಷ್ಟೋ ಸಲ ಓದುವುದಕ್ಕೆ ಇನ್ನೊಬ್ಬರ ನೆನೆಹು ಅಡ್ಡಿ ! "

" ಓ....ನನಗೇನೂ ಹಾಗಾಗುತ್ತಿರಲಿಲ್ಲ ! ಪುಣೆಗೆ ಹೋದನಂತರವಂತೂ ಇಲ್ಲಿ ಆರು ತಿಂಗಳಲ್ಲಿ ಸಾಗದ ಓದನ್ನು ನಾನು ಅಲ್ಲಿ ಮೂರು ವಾರಗಳಲ್ಲಿ ಮುಗಿಸಿದೆ."

" ಹುಂ. ಕೇಳಲಿಕ್ಕೆ ಮರೆತೇ ಇದ್ದೆ. ಪುಣೆಯಲ್ಲಿ ಹೊತ್ತು ಹೇಗೆ ಕಳೆಯುತ್ತಿದ್ದಿ ? "

" ಹೇಳಿದೆನಲ್ಲಾ, ಎಲ್ಲಿಯೂ ಹೋಗುತ್ತಿರಲಿಲ್ಲ. ಬಹಳವಾದರೆ ಸಾಯಂಕಾಲ ಪೇಟೆಯ ಕಡೆ ಹೋಗುತ್ತಿದ್ದೆ. ಉಳಿದ ಹೊತ್ತು ತಾಯಿಯ ಕೂಡ ಹರಟೆ, ಇಲ್ಲವೆ ಓದು."

" ತಾಯಿ ಏನನ್ನುತ್ತಿದ್ದರು ? "

" ಏನಂದಾಳು ಪಾಪ ! ನೀವು ನಾಲ್ಕು ದಿವಸ ಬಂದಿದ್ದರೆ ಚೆನ್ನಾಗಿತ್ತು, ಅಂದಳು."

" ಏನು ? ನಾನು ಬರಬೇಕಾಗಿತ್ತೇ ? "

" ಹೌದು. ಯಾಕೆ ? ಬರಬಾರದೆ ? "

" ನೀನೇ ಹೇಳಿದ್ದೆಯಲ್ಲ, ನಾನಲ್ಲಿ ಬಂದರೆ ಮೌನವ್ರತ, ಬರಬೇಡಿರಿ, ಎಂದು."

" ಏನೋ ಸುಮ್ಮನೆ ಹೇಳಿದೆ, ಹಾಗೆ ಬಂದಿದ್ದರೆ ತಾಯಿಗೆ ತುಂಬ ಸಂತೋಷವಾಗುತ್ತಿತ್ತು. ಅಪರೂಪ ಎನಿಸಿಕೊಳ್ಳುತ್ತಿದ್ದಳು. ಇನ್ನೊಮ್ಮೆ ಯಾದರೂ ..."

" ಯಾಕೆ, ಮತ್ತೆ ಪುಣೆಗೆ ಹೋಗುವ ಆಸೆಯಿದ್ದಹಾಗಿದೆಯಲ್ಲ ? "

" ಇದೆ—ಆದರೆ ಒಬ್ಬಳೇ ಹೋಗುವುದಿಲ್ಲ! "

" ಎಂದರೆ ? "

" ನೀವೂ ಬರಬೇಕು ..."

ಆ ಕ್ಷಣ ಮೋಹಿನಿಯ ಮನಸ್ಸಿನೆದುರು ವಿಚಿತ್ರ ವಿಚಾರವೊಂದು ಸುಳಿದುಹೋಯಿತು. ವಸಂತನ ನೆನಹು ಕಾಡುತ್ತಿತ್ತು. ಆನಂದ ವಸಂತನೆಂದು ಭಾವಿಸಿಯೇ ಮೋಹಿನಿ ಮಾತಾಡುತ್ತಿರುವಂತಿತ್ತು. ಆದರೆ ತತ್‌ಕ್ಷಣ ವಸಂತ ಮಾಯವಾಗಿದ್ದ ! ಕಣ್ಣೆದುರು ಕುಳಿತವ ಆನಂದ—ವಸಂತನಿಗೆ ಎಲ್ಲ ವಿಧದಲ್ಲಿಯೂ ವಿರುದ್ಧವಾದಂತಿದ್ದ ಆನಂದ—ತನ್ನನ್ನು ಪ್ರೀತಿಸದ ಪತಿ—ಎಂಬ ಅರಿವು ಉದ್ವೇಗತರವಾಗಿ ಮೂಡಿ ಮನಸ್ಸನ್ನು ಬಳಲಿಸಿತು. ಆನಂದ ಕೇಳಿದ:

" ನನ್ನನ್ನು ಕಂಡರೆ ಅವರಿಗೆ ಕೋಪವಿಲ್ಲವೆ ? "

" ಕೋಪವೇಕೆ ಇರಬೇಕು ? ಒಂದು ವೇಳೆ ಕೋಪ ಬಂದರೂ ಅದು ಕಡಮೆಯಾಗುವಂತೆ ನೀವೂ ನಡೆದುಕೊಳ್ಳಬೇಕು "

" ಓಹೋ " ಎಂದು ಆನಂದ ನೀರಸವಾಗಿ ನಕ್ಕ. ಆ ನಗೆಯ ಅರ್ಥ ಮೋಹಿನಿಗೆ ಸ್ಪಷ್ಟವಾಗಿ ಗೊತ್ತಾಯಿತು. ' ಹೌದು. ನೀನು ಕೋಪಿಸಿಕೊಳ್ಳದಂತೆ ನಾನು ನಡೆದುಕೊಳ್ಳಬೇಕು, ನಿನ್ನ ತಾಯಿ ಕೋಪಿಸಿಕೊಳ್ಳದಂತೆ ನಾನು ನಡೆದುಕೊಳ್ಳಬೇಕು. ಅಂದರೆ ನಿಮಗೆಲ್ಲ ಸಂತೋಷ, ಅಲ್ಲವೆ ' ಎಂದು ಕೇಳುತ್ತಿರುವಂತಿತ್ತು ಆ ನಗು! ಮೋಹಿನಿ ಸುಮ್ಮನಾದಳು. ಆನಂದನೆಂದ:

" ಯಾಕೆ ಮೋಹಿನಿ, ಸುಮ್ಮನಾದೆ ? ನನ್ನ ಮಾತು ನಿನಗೆ ಸರಿ ಬೀಳಲಿಲ್ಲವೆ ? "

" ನಿಮ್ಮ ಇಷ್ಟ. ಅದಕ್ಕೆ ನಾನು ಏನು ಹೇಳಿದರೇನು ? "

" ಹೀಗೇಕೆ ನಿರುತ್ಸಾಹದಿಂದ ಮಾತನಾಡುತ್ತೀ, ಮೋಹಿನಿ ? "

ಎಂದು ಆನಂದ ಅವಳಿಗೆ ತೀರ ಹತ್ತಿರ ಸರಿದು ಆಕೆಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕೇಳಿದ. ಕ್ಷಣಕ್ಷಣಕ್ಕೆ ಆನಂದನ ಮನಸ್ಸು ಉನ್ಮಾದದ ಕುದುರೆಯನ್ನೇರಿ ಮುನ್ನುಗ್ಗುತ್ತಿತ್ತು. ಮೋಹಿನಿಯ ನಿರುತ್ಸಾಹ ಅದಕ್ಕೆ ತಡೆ ಮಾಡುತ್ತಿದ್ದರೂ ಮುಂದೆ ಧುಮುಕಲು ಯತ್ನಿಸುತ್ತಿತ್ತು. ಮೋಹಿನಿ ಮಾತ್ರ ಮುದುಡಿಕೊಳ್ಳತೊಡಗಿದಳು. ಮುದುಡಿಕೊಂಡ ದೇಹದಲ್ಲಿ ವಸಂತನಿಗಾಗಿ ಹೃದಯ ಅರಳುತ್ತಿತ್ತು. ತನ್ನ ಹತ್ತಿರವಿದ್ದ ಪುರುಷ

ಆನಂದನೆಂದಾಗ ಆ ಹೃದಯಕಮಲ ಬಾಡಿ ಕಮರಿಹೋಗುತ್ತಿತ್ತು. ಆನಂದ ಅವಳನ್ನು ಹತ್ತಿರ ಸೆಳೆದು ಕೇಳಿದ :

" ಹೀಗೇಕೆ ಮಾಡುತ್ತೀ, ಮೋಹಿನಿ ? "

" ಏನು ಮಾಡುತ್ತೇನೆ ? "

" ನನ್ನನ್ನು ಕಂಡರೆ ನಿನಗೆ ಅಸಡ್ಡೆಯೆ ? "

" ಅದನ್ನು ನಾನೇ ಕೇಳಬೇಕು ! "

" ಇಲ್ಲವೆಂದು ಹೇಗೆ ಹೇಳಿದರೆ ನಿನಗೆ ಮನವರಿಕೆಯಾದೀತು ? "

" ಹೃದಯದಿಂದ ಹೇಳಬೇಕು ! "

" ಬಾಯಿಂದ ಹೇಳಿದರೆ ಆಗದು, ಹೃದಯದಿಂದ ಹೇಳಬೇಕು ! "

ಆನಂದ ಸುಮ್ಮನಾದ. ಒಂದೆರಡು ನಿಮಿಷ ತಡೆದು ಹೇಳಿದ :

" ಇನ್ನಾದರೂ ನಾವು ಸುಖವಾಗಿರೋಣ, ಮೋಹಿನಿ ! "

" ನಾನು ಬೇಡವೆನ್ನುತ್ತೇನೆಯೇ ? "

" ನೀನು ಬೇಡವೆಂದಿಲ್ಲ. ಆದರೆ ಸಾಧ್ಯವಾಗಿಸಿಲ್ಲ ! "

" ಈ ಮಾತನ್ನು ನಾನೂ ಹೇಳಬಲ್ಲೆ ! "

ಮೋಹಿನಿಗೆನಿಸುತ್ತಿತ್ತು : ' ವಸಂತನ ಜೊತೆಯಲ್ಲಿ ಮಾತನಾಡುತ್ತಿದ್ದಾಗ ಮನಸ್ಸು ಹೇಗೆ ಹಕ್ಕಿಯಂತೆ ಚೆಲ್ಲಾಟದಲ್ಲಿರುತ್ತದೆ. ಇವನೊಡನೆ ಮಾತನಾಡುವಾಗ ಈ ಸಂಕೋಚ ಎಲ್ಲಿಂದ, ಯಾಕೆ ಬರುತ್ತದೆಯೋ ? ' ಎಂದು. ಮೋಹಿನಿ ಯೋಚನೆಯಲ್ಲಿದ್ದುದನ್ನು ನೋಡಿ ಆನಂದ ಕೇಳಿದ :

" ಏನು ಯೋಚನೆ ಮಾಡುತ್ತಿದ್ದೀ, ಮೋಹಿನಿ ? "

" ಏನೂ ಇಲ್ಲ ! "

" ಇಲ್ಲ, ಏನೋ ಯೋಚನೆ ಮಾಡುತ್ತಿದ್ದೀ ನೀನು."

" ಹೌದು, ಇನ್ನುಮುಂದೆ ಏನು ಎಂದು— "

" ಅಂದರೆ ಏನು ? "

" ಸುಖದ ಮಾತು ಹೇಳಿದಿರಲ್ಲ ಈಗ ? "

" ಹೌದು ! "

" ಅದನ್ನೇ ನಾನೀಗ ಯೋಚನೆ ಮಾಡುತ್ತಿದ್ದೆ ! "

" ಏನೆಂದು ? "

"ನೀವೇ ಹೇಳಿದ್ದಿರಿ, ಪರೀಕ್ಷೆ ಮುಗಿದನಂತರ ನೋಡೋಣವೆಂದು."

"ಹೌದು. ಹೇಳಿದ್ದೆ. ಇಂದು ನಾರಾಯಣರಾಯರ ಕೂಡ ಮಾತನಾಡಿಯೂ ಆಯಿತು."

"ಏನೆಂದರು ಅವರು ?"

"ಏನೂ ಇಲ್ಲ. ಸುಮ್ಮನೆ ಯಾಕೆ ನಾಲ್ಕು ಜನರಲ್ಲಿ ಅಪಹಾಸ್ಯ, ಎಲ್ಲವನ್ನೂ ಸರಿಪಡಿಸಿಕೊಂಡು ಇಲ್ಲಿಯೇ ಇದ್ದುಬಿಡಬಹುದು, ಎಂದರು!"

"ಅದು ಸಾಧ್ಯವಿಲ್ಲ!"

"ಯಾಕೆ ಸಾಧ್ಯವಿಲ್ಲ ?"

"ಇಲ್ಲವೆಂದರೆ ಇಲ್ಲ! ನೂರು ಬಾರಿ ಆಗಿದೆ, ಮತ್ತೆ ಮತ್ತೆ ಅದೇ ಮಾತು!"

"ಇನ್ನಾದರೂ ನಿನ್ನ ಹಟ ಬಿಡು, ಮೋಹಿನಿ."

"ಇನ್ನಾದರೂ ಎನ್ನಲಿಕ್ಕೆ ಏನಾಗಿದೆ ಈಗ ನಿಮಗೆ ?"

"ಇನ್ನೇನಾಗಬೇಕು ?"

"ಸುಖವಾಗಿಯೇ ಇದ್ದೀರಲ್ಲ!" ಎಂದು ಮೋಹಿನಿ ಹಿಂದಕ್ಕೆ ಸರಿದಳು.

"ಹೌದು, ಸುಖವಾಗಿಯೇ ಇದ್ದೇನೆ!" ಎಂದ ಆನಂದ ಕಟುವಾಗಿ.

ಮೋಹಿನಿಯ ಹೃದಯವನ್ನು ನಿರಾಶೆ ಆವರಿಸುತ್ತಿತ್ತು. ಪರೀಕ್ಷೆಯಾದನಂತರ ಏನಾದರೊಂದು ಹೊಸ ಏರ್ಪಾಡನ್ನು ಆನಂದ ಒಂದು ವೇಳೆ ಮಾಡಬಹುದೆಂಬ ಎಣಿಕೆಯಲ್ಲಿ ಆಕೆ ಬೆಳೆಸಿದ ಆಶಾಂಕುರ, ಅವನ ಒಂದು ಮಾತಿನಿಂದ ಬಾಡಿಹೋಗಿತ್ತು. ವಸಂತನ ನಯವಾದ ಮಾತು ಅವಳ ಕಿವಿಯಲ್ಲಿ ನಿನದಿಸುತ್ತಿತ್ತು. ಅವನ ಒಂದೊಂದು ಮಾತಿನಿಂದಲೂ ಆ ಅದೇ ಅಂಕುರ ಮೊಳೆತು, ಚಿಗಿತು, ಹೂತು, ಹಣ್ಣು ಬಿಡಬಹುದಲ್ಲವೆ ?—ಎಂದು ಕೇಳುತ್ತಿತ್ತು ಮೋಹಿನಿಯ ಹೃದಯ.

ಮೋಹಿನಿಯ ಸಾನ್ನಿಧ್ಯಕ್ಕಾಗಿ ದಿನದಿನವೂ ಹಾತೊರೆದು, ಹಾದಿನೋಡಿ ಹಕ್ಕಿಯಂತೆ ಹಾರಿಬಂದ ಆನಂದನ ಹೃದಯದಲ್ಲಿ ಆತುರ ಉಕ್ಕೇರಿ ಬರುತ್ತಿತ್ತು. ಮೆತ್ತಗಾಗಿ ಆನಂದ ಕೇಳಿದ :

"ಮೋಹಿನಿ, ನನ್ನ ಹತ್ತಿರ ಬರುವುದಿಲ್ಲವೆ ?"

"ಹತ್ತಿರವೇ ಇದ್ದೀನಲ್ಲ!"

" ಹತ್ತಿರವಿದ್ದರೂ ದೂರವಾಗಿದ್ದ ಹಾಗೆಯೇ ಇದ್ದೀ! "

" ಅದೇನು, ನೀವು ತಿಳಿದುಕೊಂಡ ಹಾಗಿದೆ! "

ಆನಂದ ಮೋಹಿನಿಯನ್ನು ಹತ್ತಿರ ಸರಿಸಿಕೊಂಡು ಮೃದುವಾಗಿ ಕೇಳಿದ :

" ಆ ದಿನ ಹಾಗೇಕೆ ಅಡಿಗೆಯ ಮನೆ ಸೇರಿ ಬಾಗಿಲು ಹಾಕಿಕೊಂಡೆ? "

" ಸುಮ್ಮನೆ ! "

" ಏನು ಹುಚ್ಚು—ಹಾಗೆ ಮಾಡಿದರೆ ? "

" ನಿಮ್ಮ ದೃಷ್ಟಿಯಿಂದ ಇರಬಹುದು. ನನಗೆ ಹಾಗೆ ಅನಿಸಲಿಲ್ಲ; ಅನಿಸುವುದಿಲ್ಲ ! "

ಆನಂದನಿಗೆ ಆಕೆ ಹೇಳಿದ ಉತ್ತರದ ಕಡೆಗೆ ಲಕ್ಷ್ಯವಿತ್ತೊ ಇಲ್ಲವೊ. ಮೋಹಿನಿಯ ದೇಹ ಆತನ ಚಿತ್ತವನ್ನೆಲ್ಲ ಸೂರೆಗೊಂಡಿತ್ತು. ಆ ಬಳುಕುವ ದೇಹವನ್ನು ಉತ್ಕಾನವಾಗಿ ಬಯಸುತ್ತಿತ್ತು. ಆ ಬಯಕೆ ಆನಂದನ ಕಣ್ಣು ಗಳಲ್ಲಿ ಕುಣಿಯುತ್ತಿತ್ತು. ದೇಹಾದ್ಯಂತವೂ ಬಯಕೆಯಾಗಿ ಇತರ ವ್ಯಾಪಾರ ಗಳನ್ನು ಮರೆತಂತಿತ್ತು....ಪ್ರತಿನಿಮಿಷವೂ ಮೋಹಿನಿಗೆ ಅಸಹ್ಯವಾಗತೊಡ ಗಿತು. ಮೋಹಿನಿಯ ಮುಖದಲ್ಲಿ, ಒಂದೆಡೆ ಭೀತಿ, ಒಂದೆಡೆ ಕಠೋರವಾದ ನಿರ್ದಯವಾದ ನಿಶ್ಚಯ, ಹೆಣಗಾಡುತ್ತಿದ್ದವು. ಆನಂದನಿಂದ ಕೈ ಬಿಡಿಸಿ ಕೊಂಡು ಎದ್ದು ನಿಂತಳು. ಆನಂದ ಕಠೋರವಾಗಿ " ಮೋಹಿನಿ !—" ಎಂದ.

" ಏನು ? "

" ಇಲ್ಲಿ ಕುಳಿತುಕೊ ನೋಡೋಣ ! "

" ಇಲ್ಲಿಯೇ ಹೇಳಿರಿ...."

" ಎಲ್ಲಿಗೆ ಹೊರಟೆ ? "

" ಒಳಗಡೆ ! "

" ಯಾಕೆ ? "

" ಸುಮ್ಮನೆ ! "

ಆನಂದನಿಗೆ ತಡೆಯದಾಗಿ ಎದ್ದು ಆಕೆಯ ಹತ್ತಿರ ಬಂದು ಅಂದ:

" ಅದು ಸಾಧ್ಯವಿಲ್ಲ ! ನೀನು ಒಳಗಡೆ ಹೋಗಕೂಡದು ! "

" ನನಗೆ ಹೋಗಲೇಬೇಕು."

" ಹೋಗಕೂಡದು ಎಂದು ನಾನು ಹೇಳುತ್ತಿದ್ದೇನೆ."

"ನಾನೆಂದರೆ ಏನು ತಿಳಿದಿದ್ದೀರಿ ?"

"ಆ ಮಾತು ನನಗೆ ಬೇಕಾಗಿಲ್ಲ!"

"ನಾನು ಇಲ್ಲಿ ನಿಲ್ಲುವುದು ಸಾಧ್ಯವಿಲ್ಲ. ನಾನು ಒಳಗೆ ಹೋಗಬೇಕು."

"ಅದು ಇಂದಿಗೆ ಅಸಾಧ್ಯ!" ಎಂದು ಗಟ್ಟಿಯಾಗಿ ಮೋಹಿನಿಯ ಕೈ ಹಿಡಿದ. ಮೋಹಿನಿ ಬಿಡಿಸಿಕೊಳ್ಳಲೆತ್ನಿಸಿದಳು.

"ನನ್ನ ಕೈ ಬಿಡಿರಿ ಮೊದಲು...."

"ಬಿಡುವುದಿಲ್ಲ!"

"ಬಿಡಲೇ ಬೇಕು....ಬಿಡಿರಿ ಮೊದಲು."

ಮೋಹಿನಿ ಭೀಷಣ ನಾಗಿಣಿಯಂತಿದ್ದಳು. ಅವಳ ಕೈ ಆನಂದನ ಹಿಡಿತದಲ್ಲಿ ತೊಳಲಾಡುತ್ತಿತ್ತು. ಬಿಡಿಸಿಕೊಳ್ಳುವ ಯತ್ನದಲ್ಲಿ ದೇಹ ಬಳಲುತ್ತಿತ್ತು. ಬಿಡಿಸಿಕೊಳ್ಳಲೇಬೇಕೆಂಬ ಹಟದಲ್ಲಿ ಮೈಮೇಲಿನ ಬಟ್ಟೆಗಳ ಪರಿವೆಯೆ ಆಕೆಗೆ ಉಳಿದಿರಲಿಲ್ಲ. ಆನಂದನ ಹಿಡಿತದ ಒತ್ತಡದಲ್ಲಿ ಎಡಗೈಯಲ್ಲಿಯ ಮೂರು ಬಳೆಗಳೂ ಪುಡಿಪುಡಿಯಾದವು. ಎಷ್ಟು ಯತ್ನಿಸಿದರೂ ಆನಂದನಿಂದ ಕೈಯನ್ನು ಬಿಡಿಸಿಕೊಳ್ಳಲಾಗಲಿಲ್ಲ. ತನ್ನ ಅಸಹಾಯತೆಗಾಗಿ ಮೊರೆಯಿಟ್ಟಿತು, ಹೃದಯ. ಬಲವಾಗಿ ಮತ್ತೊಮ್ಮೆ ಕೈ ಕೊಸರಿಕೊಂಡಳು. ಕೈಯ ಬಿಡುಗಡೆ ಆಯಿತು. ಆದರೆ ಆನಂದನನ್ನು ತಪ್ಪಿಸುವುದಾಗಲಿಲ್ಲ. ಆನಂದ ಎದುರಿನಲ್ಲಿಯೆ ನಿಂತಿದ್ದ—ರಾಕ್ಷಸನಂತೆ! ಗಟ್ಟಿಯಾಗಿ ಹೇಳಿದ:

"ನಾನು ಹೇಳಿದಂತೆ ನೀನು ಕೇಳಬೇಕು ಈಗ!"

"ಕೇಳುವುದಿಲ್ಲ!"

"ಕೇಳಲೇ ಬೇಕು...."

"ಇನ್ನುಮೇಲೆ ಎಂದಿಗೂ ಸಾಧ್ಯವಿಲ್ಲ!"

"ಸಾಧ್ಯ ಮಾಡಿಸಿ ತೋರಿಸುತ್ತೇನೆ!"

"ನಾನು ಜೀವದಿಂದಿರುವ ವರೆಗೆ ಈ ಮಾತನ್ನು ಮರೆತುಬಿಡಿರಿ!"

ಆನಂದನಿಗೆ ಉನ್ಮಾದ ತಲೆಗೇರಿತ್ತು. ಮೈಮೇಲೆ ಎಚ್ಚರವಿದ್ದಂತಿರಲಿಲ್ಲ. ಅವಳ ಆ ಮಾತಿನಿಂದ ತುಸು ಹಿಂತೆಗೆದನಾದರೂ ಮತ್ತೆ ಮೋಹಿನಿಯ ಎರಡೂ ಕೈಗಳನ್ನೂ ಬಿಗಿಯಾಗಿ ಹಿಡಿದು ಹೇಳಿದ:

"ಇಂದು ನಿನ್ನ ಹಟ ನಡೆಯುವಂತಿಲ್ಲ!"

"ನಿಮ್ಮ ಹಟವೂ ನಡೆಯುವಂತಿಲ್ಲ!"

"ನನ್ನ ಹಟ ನಡೆಯುವುದಿಲ್ಲವೆ?...."

ಎಂದವನೇ ಮೋಹಿನಿಯನ್ನು ಬಲವಾಗಿ ಸೆಳೆದ....ಮೋಹಿನಿ ದೇಹದ ತೂಕ ಉಳಿಯದೆ ಹಾಸಿದ ಹಾಸಿಗೆಯ ಆಚೆಯ ತುದಿಯ ಹತ್ತಿರ ಹೋಗಿ ಅಪ್ಪಳಿಸಿದಳು. "ಅಯ್ಯೋ!" ಎಂದಳು. ಮನಸ್ಸು ವಿಹ್ವಲವಾಗಿ, ಅಸಹಾಯವಾಗಿ ಅರಚುತ್ತಿತ್ತು: 'ಮನುಷ್ಯನಲ್ಲ ನೀನು, ಪಶು ನೀನು, ರಾಕ್ಷಸ ನೀನು!' ಎಂದು. ಆದರೆ ಮೋಹಿನಿಯ ದೇಹದ ಸ್ವಾಮಿತ್ವವನ್ನು ಬಯಸುತ್ತಿದ್ದ ಆನಂದನ ಶಕ್ತಿಯ ಮುಂದೆ ಆಕೆಯ ಆಟ ನಡೆಯಲಿಲ್ಲ. ಮಣಿಯದ ಮನಸ್ಸು ಮುಗಿಲೆತ್ತರ ನೆಗೆದು ನಿಂತಿತ್ತು. ದೇಹಕ್ಕೆ ಆ ಶಕ್ತಿ ಬರಲಿಲ್ಲ!

## ೯

ಮರುದಿನ ಇಡೀ ದಿವಸ ಮೋಹಿನಿ ಹೆಚ್ಚುಕಡಮೆ ನಡುಮನೆಯಲ್ಲಿ ಗೋಡೆಯ ಹತ್ತಿರ ನೆಲದ ಮೇಲೆ ಬಿದ್ದುಕೊಂಡವಳು ಎದ್ದಿರಲೇ ಇಲ್ಲ. ನಾದಿನಿ, ನಾರಾಯಣರಾಯರಿಗೆ ವಿಷಯ ತಿಳಿದಿರಲಿಲ್ಲವಾದ್ದರಿಂದ ಹೆಚ್ಚಿಗೆ ಮಾತನಾಡದೆ ಬೆಳಗಿನ ಊಟದ ವ್ಯವಸ್ಥೆಯನ್ನು ತಾವಾಗಿಯೇ ಮಾಡಿ ಕೊಂಡಿದ್ದರು. ಹೆಂಡತಿಗೆ ಊಟಕ್ಕೆ ಬಡಿಸಿ, ಮೋಹಿನಿಗಾಗಿ ಉಳಿಸಿಟ್ಟು, ನಾರಾಯಣರಾಯರು ವಿಚಾರಮಗ್ನರಾಗಿಯೇ ಆಫೀಸಿಗೆ ತೆರಳಿದ್ದರು. ಮೋಹಿನಿ ಬಿದ್ದುಕೊಂಡಲ್ಲಿಯೇ ನರಳುತ್ತಿದ್ದಳು, ನಿಟ್ಟುಸಿರೆಳೆಯುತ್ತಿದ್ದಳು, ಬಿಕ್ಕುತ್ತಿದ್ದಳು, ಸುಮ್ಮನಾಗುತ್ತಿದ್ದಳು. ಮುದ್ದೆಯಾಗಿ ಬಿದ್ದ ಅವಳ ಅವಸ್ಥೆ ಅವಳ ಮನಸ್ಸಿನ, ಅವಳ ದೇಹದ ಅವಸ್ಥೆಯನ್ನು ನಿರ್ದೇಶಿಸುವಂತಿತ್ತು. ಆದರೆ ಮನಸ್ಸು ಮಾತ್ರ ಆಗಾಗ ಚೇತರಿಸಿಕೊಳ್ಳುತ್ತಿತ್ತು, ಆವೇಶದಿಂದ ಚಿಮ್ಮುತ್ತಿತ್ತು. ಮಿಂಚಾಗಿ ಮೇರೆದಪ್ಪಿ ಸುತ್ತಲಿನ ಪ್ರಪಂಚವನ್ನೇ ಸುಟ್ಟುಬಿಡಬೇಕೆನ್ನುವಂತೆ ಸಿಡಿದೇಳುತ್ತಿತ್ತು. ಆದರೆ ದೇಹ ಮಾತ್ರ ದಣಿದು, ನೊಂದು, ಕುಸಿದುಹೊಗಿತ್ತು. ತನ್ನನ್ನು ಇಂಥ ಅನರ್ಥಕ್ಕೀಡುಮಾಡುವ ಈ ದೇಹ ಸುಟ್ಟುಹೋಗಬಾರದೇ ಎಂದುಕೊಳ್ಳುತ್ತಿದ್ದಳು, ಮನಸ್ಸಿನ ವಿಪನ್ನಾವಸ್ಥೆಯಲ್ಲಿದ್ದಾಗ.

'ಯಾಕೆ ಈ ದಾಸ್ಯ?' ಎಂದು ಒಮ್ಮೊಮ್ಮೆ ಹೃದಯ ಮೊರೆಯಿಡು ತ್ತಿತ್ತು. ಮೋಹಿನಿಗೆ ಮುಂದಿನ ಯೋಚನೆ ಬಗೆಹರಿಯದಾಗಿತ್ತು. ಒಂದು ವಿಷಯದಲ್ಲಿ ಮಾತ್ರ ಅಚಲವಾದ ನಿರ್ಧಾರವನ್ನು ತಲಪಿದ್ದಳು. ಅದೆಂದರೆ ಆನಂದನ ಸಂಬಂಧ ಅಂದಿನಿಂದ ಮುಗಿಯಿತೆಂದು. ಮಾನವತೆಯನ್ನು ಮರೆತು ಪಶುವಾಗಿ ವರ್ತಿಸಬಲ್ಲವನನ್ನು ಮತ್ತೊಮ್ಮೆ ಕಣ್ಣೆತ್ತಿ ನೋಡುವುದೂ ಸಾಧ್ಯ ವಿಲ್ಲ ಎಂದುಕೊಂಡಳು. ಭಾಸ್ಕರ–ಆನಂದರ ಚಿತ್ರ ಕಣ್ಣ ಮುಂದೆ ನಿಂತವು. ಮೋಹಿನಿಗೆನಿಸಿತು: 'ಭಾಸ್ಕರನೇ ಇನ್ನೂ ಎಷ್ಟೋ ವಾಸಿ. ಅವನ ಕಾಮುಕತನ ಪಶುವಿನ ಮಟ್ಟಕ್ಕಾದರೂ ಇಳಿಯಲಿಲ್ಲ. ಮನವೊಲಿಸಲಾದರೂ ಆತ ಯತ್ನಿ ಸಿದ್ದ.' ಕೊನೆಯಲ್ಲಿ ಹೃದಯ ಕೇಳಿತು: 'ಏನಾದರೇನು? ಇಬ್ಬರೂ ಅಷ್ಟೇ! ಒಬ್ಬ ತನ್ನ 'ಅಧಿಕಾರ'ದ ದುರುಪಯೋಗಮಾಡಿದ. ಇನ್ನೊಬ್ಬ ಕೃತಿಯಲ್ಲಿ

ಆಗದುದನ್ನು ಮನಸ್ಸಿನಿಂದ ಸಾವಿರ ಬಾರಿ ಸಾಧಿಸಿರಬಹುದು! ಯಾವ ಭೇದವೂ ಇಲ್ಲ!' ಎಂದು.

ಮೋಹಿನಿಗೆ ದುಃಖ ಉಮ್ಮಳಿಸಿ ಬಂದಿತು. ಪರೀಕ್ಷೆಯಾದನಂತರ ಏನಾದರೂ ಮಾಡಿ ಆನಂದನೊಡನೆ ಮನಸ್ಸನ್ನು ಸರಿಪಡಿಸಿಕೊಂಡು ಬೇರೆಯಾಗಿ ಇರುವಂತೆ ಏರ್ಪಾಡು ಮಾಡಿಕೊಂಡು ತನ್ನ 'ಕನಸಿನ ಮನೆ'ಯನ್ನು ಕಟ್ಟಿಕೊಂಡಿರಬಹುದೆಂಬ ಆಸೆಯು ಕನಸಾಗಿ ಕಳಚಿ ಹೋಯಿತು. ಆನಂದನ ಕಾಮಾತುರತೆ ಆ ಕನಸನ್ನು ಸುಟ್ಟುಬಿಟ್ಟಿತು. 'ಇಂದು ಜಗತ್ತಿನಲ್ಲಿ ನನಗೆ ಉಳಿದವಳು ನನ್ನ ತಾಯಿ ಮಾತ್ರ' ಎಂದು ರೋದಿಸಿತು ಮೋಹಿನಿಯ ಹೃದಯ. ಈ ನರಕದಿಂದ ಬಿಡುಗಡೆ ಹೊಂದಲೇಬೇಕೆಂದು ಹಂಬಲಿಸಿತು. ಆದರೆ ಹೇಗೆ?—ಎಂದಾಗ ಮಾತ್ರ ಧೃತಿಗೆಡುತ್ತಿತ್ತು.

ಮನಸ್ಸು ವಸಂತನತ್ತ ಓಡಿತು. ಆದರೆ ವಸಂತನೇನು ಮಾಡಬಲ್ಲ? ಏನಾದರೂ ಮಾಡಿ ತನ್ನನ್ನು ಗಂಡನ ಜೊತೆಯಲ್ಲಿ ಸುಖವಾಗಿರಿಸಬೇಕೆಂಬ ಆತನ ಮನೀಷೆ ಮಣ್ಣುಪಾಲಾಗಿ ಹೋಯಿತು. ಅವನು ಮಾಡಬೇಕಾದುದೇನೂ ಉಳಿಯಲಿಲ್ಲ. ಅವನ ಸಹವಾಸವೂ ಕನಸಿನ ಸಾಮ್ರಾಜ್ಯವೆನಿಸತೊಡಗಿತು. ಅವನನ್ನು ನೋಡಿಕೊಂಡು ಪರಿಹಾರವನ್ನು ಕೇಳೋಣವೆ? ಎಂದುಕೊಂಡಿತು. 'ಸಾಧ್ಯವಿಲ್ಲ!' ಎಂದಿತು ಹೃದಯ. 'ದಾರಿಯಿದ್ದರೆ ಅದು ಈ ಮನೆಯ ಹೊರಗೆ! ಇದುವರೆಗೆ ಪೂರ್ವವಾಗಿದ್ದರೆ ಇನ್ನು ಪಶ್ಚಿಮ ಎನ್ನದ ಹೊರತು ಗತಿಯಿಲ್ಲ!' ಎಂದು ಕಠೋರವಾಗಿ ಹೇಳಿತು.

ಮನಸ್ಸು ತೀರ ತಲ್ಲಣಗೊಂಡಾಗ ಮೋಹಿನಿ ಕೇಳಿಕೊಳ್ಳುತ್ತಿದ್ದಳು: 'ನಾನು ಯಾತಕ್ಕೆ ಬದುಕಬೇಕು? ನಾನಿಲ್ಲದಿದ್ದರೇನು?' ಎಂದು. ಆದರೆ ಅವಳಲ್ಲಿಯ ಸ್ತ್ರೀತ್ವ ನೆಗೆದು ನಿಂತು ಧೈರ್ಯವಾಗಿ ಆಕೆಗೆ ಹೇಳುತ್ತಿತ್ತು: 'ನೀನಿಂದು ಸಹಜವಾಗಿ ಆತ್ಮಹತ್ಯೆ ಮಾಡಿಕೊಳ್ಳಬಲ್ಲೆ. ಏನು ಬಂತು? ನಿನ್ನಂತೆ ಎಷ್ಟು ಜನರೊ? ಲಕ್ಷಾನುಲಕ್ಷ ಸ್ತ್ರೀಹೃದಯಗಳು ಗಂಡನೆಂಬ ಅಹಂಕಾರಕ್ಕೆ ಉಳಿದವರ ಮನಃಕಾರ್ಪಣ್ಯಕ್ಕೆ ಬಲಿಯಾಗಿ ಒಡೆದುಹೋದವು! ಆ ಲಕ್ಷಾನುಲಕ್ಷ ಹೃದಯಗಳ ಶೋಕ ನಿನಗಿಂದು ಸ್ಫೂರ್ತಿಯಾಗಬೇಕು! ನಿನಗೆ ಸಮಾಧಾನ ಹೇಳುವುದು ಕಷ್ಟ. ಆದರೆ ಬಾಳು—ಬದುಕುವುದಕ್ಕಾಗಿ! ನೀನು ಹೆಣ್ಣು! ತಾನು ಬದುಕಿ, ಎಂಥ ದುಃಖದ ಹೊರೆ ಬಂದರೂ ತಾನು

ಬದುಕಿ ಇನ್ನೊಬ್ಬರನ್ನು ಬದುಕಿಸುವ ಲೋಕಮಾತೆ ನೀನು! ನೊಂದಾಗ, ದಣಿದಾಗ, ಪ್ರಪಂಚವನ್ನು ನಿನ್ನ ಹೃದಯದೊಲುಮೆಯಿಂದ ಚೇತರಿಸಿ, ಬದುಕಿಸಿ, ಬೆಳೆಯಿಸಬಲ್ಲ ಸೃಷ್ಟಿಯ ಮಾಯೆ ನೀನು! ನೀನು ಬದುಕಬೇಕು. ನೀನು ಬದುಕಲೇ ಬೇಕು!' ಎಂದು.

ಸಾಯಂಕಾಲ ಐದರ ಸುಮಾರಿಗೆ ಆನಂದ ಭಾಸ್ಕರನೊಡನೆ ಮನೆಗೆ ಬಂದಾಗ ಮೋಹಿನಿ ಬಿದ್ದುಕೊಂಡವಳು ಅಲ್ಲಿಯೇ ಇದ್ದಳು. ಆನಂದ ಪಡಸಾಲೆಯಲ್ಲಿ ಬಂದವನೇ ಅಲ್ಲಿಯೇ ಏನನ್ನೋ ಹೊಲಿಯುತ್ತ ಕುಳಿತಿದ್ದ ಅಕ್ಕನನ್ನು ಕೂಡಲೇ ಕೇಳಿದ: "ಮೋಹಿನಿ ಎಲ್ಲಿದ್ದಾಳೆ?" ಎಂದು. ಅವನ ದನಿಯಲ್ಲಿ ಏನೋ ಒಂದು ವಿಲಕ್ಷಣವಾದ ಆತುರ, ಕಠೋರತೆ ಇದ್ದಂತೆ ಭಾಸವಾಯಿತು ಅಕ್ಕನಿಗೆ. ಆ ಕಠೋರತೆಗಾಗಿ ಅಕ್ಕನಿಂದ ಏನೂ ಹೇಳಲಾಗ ಲಿಲ್ಲ. ಆನಂದನನ್ನೇ ನೋಡುತ್ತಿದ್ದಳು.

"ಮೋಹಿನೀ!—" ಎಂದು ಕರೆದ, ಮತ್ತೆ ಅದೇ ದನಿಯಲ್ಲಿ

ಗೋಡೆಯ ಹತ್ತಿರ ಬಿದ್ದುಕೊಂಡಿದ್ದ ಮೋಹಿನಿ ಮಿಸುಕಲಿಲ್ಲ. ಆದರೆ ಅವನ ಕರೆಯಲ್ಲಿಯ ಕ್ರೌರ್ಯ ಹೃದಯವನ್ನು ಯಾವಾಗಲೋ ತಟ್ಟಿತ್ತು. ಹೀಗೆ ಅಕಸ್ಮಾತ್ತಾಗಿ ಬಂದು, ಬಂದ ಕೂಡಲೇ ಈ ರೀತಿ ಕರೆಯುತ್ತಿರುವಲ್ಲಿ ಏನೋ ವಿಶೇಷವಿದೆ, ಎಂದು ಎದೆ ನಡುಗುತ್ತಲೂ ಇತ್ತು. ಆದರೆ ಮೋಹಿನಿಗೆ ಆನಂದನ ಬಗೆಯಲ್ಲಿ ಆದರವೂ ಉಳಿದಿರಲಿಲ್ಲ; ಅವನಿಂದ ಭೀತಿಯೂ ಅನಿಸುತ್ತಿರಲಿಲ್ಲ.

ನಡುಮನೆಯ ಬಾಗಿಲ ಹತ್ತಿರ ಹೋಗಿ ಆನಂದ ಮತ್ತೊಮ್ಮೆ ಗಟ್ಟಿ ಯಾಗಿ ಕರೆದ:

"ಮೋಹಿನೀ—" ಎಂದು.

ಅಕ್ಕ ದಿಗ್ಭ್ರಾಂತಳಾಗಿ ಭಾಸ್ಕರನ ಮುಖ ನೋಡುತ್ತಿದ್ದಳು. ಅವನನ್ನೇ ಕೇಳಿದಳು:

"ಏನೋ, ಭಾಸ್ಕರಾ—ಏನು ಸಮಾಚಾರ?"

ಭಾಸ್ಕರ ಏನೂ ಉತ್ತರ ಕೊಡಲಿಲ್ಲ. ಮೂರನೆಯ ಬಾರಿ ಕೂಗಿದರೂ ಮೋಹಿನಿ ಮಿಸುಕದಿದ್ದುದನ್ನು ಕಂಡು ಆನಂದನ ಕೋಪ ಮಿತಿಮೀರತೊಡ ಗಿತ್ತು. ಅವಳ ಹತ್ತಿರ ಹೋಗಿ ಅವಳ ಬಲಗೈಯನ್ನು ಹಿಡಿದು ಬಲವಾಗಿ

ಎಳೆದ ಮೋಹಿನಿ ಸಂತಾಪಾತಿರೇಕದಿಂದ ತನ್ನ ಕೈಯನ್ನು ಕೊಸರಿಕೊಂಡು ಸಿಡಿದೆದ್ದು ನಿಂತು ಕೇಳಿದಳು:

"ನನ್ನ ಮೈಗೆ ಕೈಹಚ್ಚುವ ಕಾರಣವಿಲ್ಲ!"

ಅವಳ ನಿಷ್ಠುರವಾದ ಬಗೆಯನ್ನು ನೋಡಿ ಆನಂದ ಕೂಡ ತುಸು ಬೆಚ್ಚಿದ. ಆದರೆ ಬಾಯಿಂದ ಬೆಂಕಿಯನ್ನೇ ಕಾರುತ್ತಿದ್ದವನಂತೆ ಮತ್ತೆ ಚೀರಿದ:

"ಮೋಹಿನೀ—"

"ಏನು?"

"ನಾನು ನಿನಗೆ ಕೆಲವು ಮಾತುಗಳನ್ನು ಕೇಳಬೇಕಾಗಿದೆ!"

"ನನಗೆ ನಿಮ್ಮ ಕೂಡ ಮಾತಾಡಬೇಕಾಗಿಲ್ಲ!"

"ನಿನಗೆ ಬೇಕಾಗಿರಲಿಕ್ಕಿಲ್ಲ. ನನಗೆ ಬೇಕಾಗಿದೆ, ನನಗೆ!—"

"ನಿಮಗೆ ಏನೂ ಬೇಕಾಗಬಹುದು—"

"ಹೆಚ್ಚಿಗೆ ಮಾತನಾಡಬೇಡ. ನಾನು ಕೇಳಿದ್ದಕ್ಕೆ ಸರಿಯಾಗಿ ಉತ್ತರ ಕೊಡು, ನನಗೆ ಈಗಿಂದೀಗಲೇ ಎಲ್ಲವೂ ನಿಷ್ಕರ್ಷೆಯಾಗಬೇಕಾಗಿದೆ!"

"ನಿನ್ನೆ ರಾತ್ರಿಯೇ ನಿಷ್ಕರ್ಷೆಯಾಗಿ ಹೋಗಿದೆ!"

"ನಿನ್ನ ಪಾಲಿಗೆ ಆಗಿರಬಹುದು. ಆದರೆ ನನ್ನ ಪಾಲಿಗೆ ಇನ್ನೂ ಆಗ ಬೇಕಾಗಿದೆ!"

"ಇರಬಹುದು. ನನಗೇನು ಮಾಡುವುದಿದೆ?"

"ಇದೆ—ಬೇಕಾದಷ್ಟಿದೆ!"

ಮೋಹಿನಿ ಒಳಗೆ ಹೊರಡುವುದರಲ್ಲಿದ್ದಳು. ಆನಂದನಿಗೆ ಸಿಟ್ಟು ತಡೆಯ ದಾಗಿತ್ತು. ಕೋಪಾತಿಶಯದಲ್ಲಿ ಹೇಳಿದ:

"ಮೋಹಿನೀ, ಅಲ್ಲಿಯೇ ನಿಲ್ಲು. ನೀನು ಒಳಗೆ ಹೋಗಕೂಡದು!"

"ಯಾಕೆ?"

"ನನ್ನ ಈ ಮಾತಿಗೆ ಮೊದಲು ಉತ್ತರ ಹೇಳು. ಆಮೇಲೆ ಹೋಗುವಿ ಯಂತೆ ಬೇಕಾದಲ್ಲಿ .."

"ಏನದು ನಿಮ್ಮ ಮಾತು?"

"ನಿನ್ನೆ ಮಧ್ಯಾಹ್ನ ಪರೀಕ್ಷೆ ಮುಗಿದಕೂಡಲೆ ನೀನು ಎಲ್ಲಿಗೆ ಹೋಗಿದ್ದಿ?"

ಮೋಹಿನಿಗೆ ಪ್ರಶ್ನೆ ಅನಿರೀಕ್ಷಿತವಾಗಿರಲಿಲ್ಲ. ಇಷ್ಟೊಂದು ಸಂತಾಪದಲ್ಲಿ

ಮಾತನಾಡುತ್ತಿದ್ದನೆಂಬುದರ ಮೇಲಿಂದ, ಭಾಸ್ಕರ ಆ ವಿಷಯದಲ್ಲಿಯಾಗಲಿ, ಇನ್ನೇನನ್ನಾಗಲಿ ಚುಚ್ಚಿರಬೇಕೆಂದು ಯಾವಾಗಲೋ ತಿಳಿದಿದ್ದಳು. ಪ್ರಶ್ನೆಗೆ ಉತ್ತರ ಹೇಳುವುದೇನೆಂಬುದರ ವಿಷಯದಲ್ಲಿಯೂ ಆಕೆಗೆ ಯೋಚನೆಯಿರಲಿಲ್ಲ. ಯಾರ ಹಂಗೂ ಇಲ್ಲದ ಮೇಲೆ ಯಾರ ಹೆದರಿಕೆ? ಮೋಹಿನಿ ಸುಮ್ಮನಾಗಿಯೇ ಇದ್ದುದನ್ನು ನೋಡಿ ಆನಂದನಿಗೆ ತಡೆಯದಾಯಿತು. ಗದರಿಸುತ್ತ ಹತ್ತಿರ ಹೋಗಿ ಮತ್ತೆ ಕೇಳಿದ:

"ನಿನ್ನೆ ಮಧ್ಯಾಹ್ನ ಎಲ್ಲಿಗೆ ಹೋಗಿದ್ದಿ ?"

"ನಿಮ್ಮ ಪ್ರಶ್ನೆಗೆ ನಾನು ಉತ್ತರ ಹೇಳುವುದಿಲ್ಲ!"

"ಉತ್ತರವನ್ನು ಹೇಳಲೇಬೇಕು...." ಆನಂದ ಹಲ್ಲು ಕಟಿಯುತ್ತಿದ್ದ. ಮೋಹಿನಿ ನಿಂತಲ್ಲಿಂದ ಕದಲಲಿಲ್ಲ; ಅವಳ ದನಿ ನಡುಗಲಿಲ್ಲ; ಮುಖದಲ್ಲಿ ಭೀತಿಯ ಸುಳಿವೂ ಇರಲಿಲ್ಲ. ವಿಲಕ್ಷಣವಾದ ಗಂಭೀರ ದನಿಯಲ್ಲಿ ಹೇಳಿದಳು:

"ನಾನು ಹೇಳುವುದಿಲ್ಲ!—"

ಆನಂದನಿಗೆ ತಡೆಯದಾಗಿ ಕೈ ಎತ್ತಿದ. ಅಕ್ಕ ನಡುವೆ ಬರುವುದರಲ್ಲಿದ್ದರು "ಆನಂದಾ—" ಎಂದು. ಏಟು ಬೀಳುವುದರಲ್ಲಿತ್ತು. ಮೋಹಿನಿ ಆನಂದನ ಕೈಯನ್ನು ತಡೆದು ಅದನ್ನು ಹಿಂದಕ್ಕೆ ನೂಕಿದಳು. ಆನಂದ ಗದರಿಸುತ್ತಿದ್ದ:

"ನಿನ್ನೆ ಮಧ್ಯಾಹ್ನ ಯಾರ ಕೂಡ ಹೋಗಿದ್ದೆ—ಹೇಳು...."

"ಹೇಳುವುದಿಲ್ಲ—"

"ಹೇಳಲೇಬೇಕು...."

ಎಂದು ಚಂಗನೆ ಆನಂದ ಮುಂದಕ್ಕೆ ಬಂದು ಅವಳ ಬಲಗೈಯನ್ನು ಸೆಳೆದು ಹಿಡಿದು ತಿರುವಿದ. ಎರಡು-ಮೂರು ಬಳೆಗಳು ಪಳಪಳನೆ ನೆಲಕ್ಕೆ ಬಿದ್ದವು.

"ಹೇಳು, ಹೇಳದಿದ್ದರೆ ನಿನ್ನ ಜೀವ ತೆಗೆಯುತ್ತೇನೆ—ಇಲ್ಲಿಯೇ!"

"ನನ್ನ ಕೈ ಬಿಡಿರಿ ಮೊದಲು....ಬಿಡಿರಿ ಮೊದಲು. .."

ಮೋಹಿನಿಯ ಕಣ್ಣಲ್ಲಿ ನೀರು ಚಿಮ್ಮಿತ್ತು. ನೋವಿನ ಬೀಡಾಗಿತ್ತು ಮುಖ. ಆನಂದ ಸಂತಾಪದಿಂದ ನಡುಗುತ್ತಿದ್ದ:

"ಕೈ ಬಿಡುವುದಿಲ್ಲ. ನಿನ್ನನ್ನು ಕೊಲ್ಲುವೆ! ಹೇಳು ಮೊದಲು—ನಿನ್ನೆ ಯಾರ ಜೊತೆಯಲ್ಲಿ ಸಮುದ್ರಕ್ಕೆ ಹೋಗಿದ್ದಿ ?"

ಮೋಹಿನಿ ತುಟಿ ಬಿಚ್ಚಲಿಲ್ಲ. ತುಟಿ ಬಿಚ್ಚಿದಾಗ ಮಾತು ಹೊರಬರ ಲಿಲ್ಲ. ಅಯ್ಯೋ! ಎಂದು ಹೃದಯ ಕೊರೆಯುವ ಆರ್ತಸ್ವರ ಮಾತ್ರ ಹೊರ ಬಂದಿತು. ಅಕ್ಕನಿಗೆ ತಡೆಯದಾಗಿತ್ತು. ಕಣ್ಣೀರು ಹಾಕುತ್ತ "ಆನಂದಾ, ಆನಂದಾ" ಎಂದು ನಡುವೆ ಬಂದರು. ಭಾಸ್ಕರ ಕಿಟಕಿಯೊಳಗಿಂದ ಹೊರಗಡೆ ನೋಡುತ್ತ ನಿಂತಿದ್ದ. ಆನಂದ ಹೇಳಿದ:

"ನೀನು ಸುಮ್ಮನಿರು ಅಕ್ಕ, ಸುಮ್ಮನಿರು. ನೀನು ನಡುವೆ ಬರಬೇಡ."

"ಅಲ್ಲ ಆನಂದಾ, ಆದದ್ದಾದರೂ ಏನೋ?"

"ಎಲ್ಲವನ್ನೂ ಆಕೆಯ ಬಾಯಿಂದಲೇ ಹೇಳಿಸುತ್ತೇನೆ—ತಾಳು...."

"ಆನಂದಾ....ಭಾಸ್ಕರಾ....ನೀನಾದರೂ ಹೇಳೊ. ಏನಾಯಿತು?"

ಭಾಸ್ಕರನ ಬಾಯಿಂದ ಮಾತು ಹೊರಡಲಿಲ್ಲ. ಅಕ್ಕನ ಕೂಡ ಮಾತಿ ನಲ್ಲಿ ಆನಂದ ಮೋಹಿನಿಯ ಕೈಯನ್ನು ಬಿಟ್ಟಿದ್ದ. ಎದೆಯ ಮೇಲೆ ಎರಡೂ ಕೈಗಳನ್ನು ಕಟ್ಟಿಕೊಂಡು ಮೋಹಿನಿ ಕಲ್ಲಿನಂತೆ ನಿಂತಿದ್ದಳು. ಮುಖ ಶಾಂತ ವಾಗಿ ಕಾಣುತ್ತಿತ್ತು—ಸಮುದ್ರದಂತೆ. ಆದರೆ ಹೃದಯ ಜ್ವಾಲಾಮುಖಿ ಯಾಗಿತ್ತು!

"ಮೋಹಿನಿ, ನೀನು ಮಾತನಾಡದಿದ್ದರೆ ಪರಿಣಾಮ ಚೆನ್ನಾಗಲಿಕ್ಕಿಲ್ಲ."

"ಆಗದಿದ್ದರೆ ಇಲ್ಲ!"

"ಯಾರ ಜೊತೆಯಲ್ಲಿ ಹೋಗಿದ್ದಿ? ಹೇಳು—ಇಲ್ಲವಾದರೆ...."

"ನಾನು ಹೇಳುವುದಿಲ್ಲವೆಂದು ಹತ್ತು ಸಾರೆ ಹೇಳಿದೆ. ನಿಮಗೆ ಹೇಳಿ ದವರು ಅದನ್ನೂ ಹೇಳಲಿಲ್ಲವೇನು?"

"ನನಗೆ ಎಲ್ಲವೂ ಗೊತ್ತಿದೆ!"

"ಹಾಗಾದರೆ ನನ್ನನ್ನೇತಕ್ಕೆ ಕೇಳುತ್ತೀರಿ?"

"ನನಗೆ ನಿನ್ನ ಬಾಯಿಂದಲೇ ತಿಳಿಯಬೇಕಾಗಿದೆ!"

"ಅದರಿಂದ ನಿಮಗೆ ಏನಾಗಬೇಕು?"

"ಏನಾಗಬೇಕು? ಏನುಳಿದಿದೆ ಆಗಲಿಕ್ಕೆ?"

"ಉಳಿಯದಿದ್ದರೆ ಇಲ್ಲ!"

"ನಿನ್ನಷ್ಟು ನನ್ನ ಜೀವ ನಾಚಿಕೆ ಬಿಟ್ಟಿಲ್ಲ!"

"ಇಲ್ಲದ್ದನ್ನು ಎಲ್ಲಿಂದ ಬಿಟ್ಟೀರಿ?"

" ಬಾಯಿ ಬಿಗಿಹಿಡಿ, ಮೋಹಿನಿ—ಬಾಯಿ ಹರಿಬಿಡಬೇಡ! "

" ಏನು ನಿಮ್ಮ ನಿರ್ಬಂಧ ನನಗೆ ? "

" ಬಂಧ ಪೂರ್ತಿ ತಪ್ಪಿದಮೇಲೆ ಮಾತಾಡುವಿಯಂತೆ ! "

" ತಪ್ಪಿಹೋಗಿ ಹಳೆಯ ಕತೆಯಾಯಿತು ! "

" ಹಳೆಯ ಕತೆಯಾದರೂ ನನ್ನ ಹೆಸರಿನಲ್ಲಿ ಹೊಸ ಕತೆ ಬೆಳೆಯುವುದು ನನಗೆ ಬೇಡವಾಗಿದೆ."

" ಕತೆ ಕಟ್ಟುವುದನ್ನು ನಿಲ್ಲಿಸಿರಿ, ಅಂದರೆ ಎಲ್ಲವೂ ನಿಲ್ಲುವುದು ! "

" ನಿನ್ನ ಉಪದೇಶ ಬೇಕಾಗಿಲ್ಲ ನನಗೆ ! "

" ನಿಮ್ಮ ಮಾತೇ ಬೇಕಾಗಿಲ್ಲ ನನಗೆ ! "

ಎಂದು ಮೋಹಿನಿ ಒಳಗಡೆ ಹೊರಟಳು. ಆನಂದ ಮತ್ತೆ ತಡೆದ ಆಕೆಯನ್ನು.

" ಮೋಹಿನಿ !—ಇಂದು ಎಲ್ಲ ಮಾತಿನ ನಿಷ್ಕರ್ಷೆಯಾಗಲೇಬೇಕು."

" ಆಗಿಹೋಗಿದೆ ಎಂದು ಹೇಳಿದೆನಲ್ಲ...."

ಮೋಹಿನಿಯ ಸ್ಥಿರವೃತ್ತಿ ಆನಂದನನ್ನು ಕೆಣಕುತ್ತಿತ್ತು, ಕೆರಳಿಸುತ್ತಿತ್ತು.

" ನಾನು ಹೇಳಿದಂತೆ ನೀನು ಕೇಳಬೇಕು ! " ಎಂದು ಗದರಿಸಿದ.

" ನಿಮ್ಮ ದಾಸಿಯಲ್ಲ ನಾನು ! "

" ಕೇಳದೆ ಗತಿಯಿಲ್ಲ— "

" ಅದು ಸಾಧ್ಯವಿಲ್ಲ ! "

" ಹಾಗಾದರೆ ನೀನು ಇಲ್ಲಿ ಇರಕೂಡದು ! "

" ನೀವು ಹೇಳುವ ಕಾರಣವೇ ಇಲ್ಲ. ನಾನೇ ನಿಶ್ಚಯಿಸಿದ್ದೇನೆ ! "

ಆನಂದನಿಗೆ ಸಿಟ್ಟು ತಡೆಯದಾಗದೆ ಮೋಹಿನಿಯ ಮೈಮೇಲೆ ಹೋದ. ನಿಮಿಷಾರ್ಧದಲ್ಲಿ ಕೈಬೀಸುವವನಿದ್ದ. ಆದರೆ ಆಕೆ ಸರ್ರನೆ ಹಿಂದಕ್ಕೆ ಸರಿದು ಖಂಡಿತವಾಗಿ ಹೇಳಿದಳು :

" ಸುಮ್ಮನೆ ಹಿಂದಕ್ಕೆ ಸರಿಯಿರಿ, ನನ್ನ ಮೈ ಮುಟ್ಟಿದರೆ ಪರಿಣಾಮ ಚೆನ್ನಾಗಲಿಕ್ಕಿಲ್ಲ ! "

" ಏನು ಮಾಡುವ ಹಾಗಿದ್ದೀಯೆ ? " ಎಂದು ಹಲ್ಲು ಕಟೆದ.

" ಅದನ್ನು ಬಾಯಿಂದ ಹೇಳುವುದಿಲ್ಲ ! "

" ಏನು ಮಾಡುವ ಹಾಗಿದ್ದೀ ನೀನು ? "ಎಂದವನೆ ಬಲವಾಗಿ ಮೋಹಿನಿಯನ್ನು ನೂಕಿದ. ಎದುರಿನ ಗೋಡೆಗೆ ಮೋಹಿನಿ ಹಾಯ್ದಳು. ಮಾತು ಮಾತಿಗೆ ಆನಂದನ ಉದ್ವೇಗ ಹೆಚ್ಚಾಗುತ್ತಿತ್ತು. ಮೋಹಿನಿಯ ನಿಶ್ಚಲತೆ ಕಠೋರವಾಗುತ್ತಿತ್ತು. ಹಸಿದ, ಕೆರಳಿದ ಹಾವಿನಂತಿದ್ದಳು—ಮೋಹಿನಿ ! ಆನಂದ ಚೀರುತ್ತಿದ್ದ :

" ಹೋಗು, ಹೊರಟುಹೋಗು ಮೊದಲು ! ಇಲ್ಲಿಂದ ಹೋಗೇ....ನಿನ್ನ ಮುಸುಡಿ ಬೇಡ." ಮೋಹಿನಿ ಸರಿಯಲಿಲ್ಲ. ಭಾಸ್ಕರ ಸಮಾಧಾನ ಹೇಳಬಂದ :

" ಯಾಕೆ ಸುಮ್ಮನೆ ಮನಸ್ತಾಪ ಮಾಡಿಕೊಳ್ಳುತ್ತೀ, ಆನಂದಾ. ಸುಮ್ಮನೆ ಬಾಯಿಮಾಡಿ ಏನಾಗಬೇಕಾಗಿದೆ ?...."

ಭಾಸ್ಕರ ಮಾತನಾಡಿದ್ದನ್ನು ಕೇಳಿ ಮೋಹಿನಿ ಕೆಂಡದಂತಾದಳು. ಭಾಸ್ಕರನನ್ನು ಅಣಕಿಸುವಂತೆ ಹೇಳಿದಳು :

" ಹೌದು ! ಯಾಕೆ ಮಾತಾಡಿ ಮನಸ್ತಾಪ ? ಮಾತನಾಡದೆ ಕುತ್ತಿಗೆ ಕೊಯ್ಯುವುದನ್ನು ಕಲಿಯಿರಿ. ಭಾಸ್ಕರರಾಯರು ಚೆನ್ನಾಗಿ ಕಲಿಸುತ್ತಾರೆ...."

" ಮೋಹಿನೀ, ಬಾಯಿ ಬಿಡಬೇಡ " ಎಂದ ಭಾಸ್ಕರ.

" ನನ್ನ ಹೆಸರೆತ್ತಬೇಡ, ಮೂರ್ಖ ! ನೀಚ !. .."

" ಯಾರೂ ಹೆಸರೆತ್ತುವುದೇ ಬೇಡ, ಸಾಕಾಗಿಹೋಗಿದೆ, ಮಹಾರಾಯ್ತೀ. ಈ ಮನೆ ಬಿಟ್ಟು ನೀನು ಹೊರಟುಹೋಗು " ಎಂದ ಆನಂದ. ಸಿಟ್ಟಿಗಿಂತ ಬೇಸರ ಹೆಚ್ಚಿದಂತಿತ್ತು.

" ಹೊರಡುತ್ತೇನೆ...."

" ಎಷ್ಟು ನಿಶ್ಚಿಂತೆಯಿಂದ ಹೇಳುತ್ತಿದ್ದೀಯಲ್ಲೇ ? "

" ಯಾರಿಗೆ ಯಾತಕ್ಕೆ ಹೆದರಬೇಕಾಗಿದೆ ನಾನು ? "

" ಹೌದು, ನಾಚಿಕೆಯನ್ನೇ ಬಿಟ್ಟಮೇಲೆ ಹೆದರಿಕೆಯೆಲ್ಲಿಯದು ? "

" ನೀವು ಹೇಳಿದ್ದನ್ನು ನಿಮಗೇ ಹೇಳುತ್ತೇನೆ—ಬಾಯಿ ಬಿಡಬೇಡಿರಿ ಎಂದು."

" ಯಾಕೆ? ನಿನ್ನ ಹೆದರಿಕೆಯೇ ನನಗೆ ? "

" ಅಷ್ಟು ಕ್ಷುದ್ರ ಮನಸ್ಸಿಲ್ಲ ನನಗೆ. ನಾನು ನಿಮಗೆ ಹೆದರಿಕೊಂಡಿರಬೇಕೆಂದು ನೀವು ಹೇಳಿದಂತೆ ನಾನು ಹೇಳುವಂತಿಲ್ಲ."

"ಸಾಕುಮಾಡೇ ನಿನ್ನ ಮಾತು, ಹಲ್ಲು ಮುರಿದೇನು!"

"ಅದೊಂದು ದೊಡ್ಡ ಶೌರ್ಯದ ಮಾತು!"

"ಹೋಗೇ ನೀನು, ಮೊದಲು ಹೋಗು ಇಲ್ಲಿಂದ" ಎಂದು ಸಂತಾಪ ದಿಂದ ಮೋಹಿನಿಯನ್ನು ಎಳೆದು ಬಾಗಿಲೆಡೆಗೆ ತಳ್ಳಿದ.

"ನೀವು ಅಷ್ಟು ಶ್ರಮಪಡುವ ಕಾರಣವಿಲ್ಲ. ನಾನೇ ಹೋಗುತ್ತೇನೆ" ಎಂದು ಮೋಹಿನಿ ಒಳಗಡೆ ಮಾಯವಾದಳು. ಅಕ್ಕ ಗಾಬರಿಯಾಗಿ ಹೋಗಿ ದ್ದಳು. ಅಳುವು ನಡೆದೇ ಇತ್ತು. ಆನಂದನಿಗೆ ಎಷ್ಟು ಪರಿ ಸಮಾಧಾನ ಹೇಳಿದರೂ ಆತ ಕೇಳದಾಗಿದ್ದ.

"ಆನಂದಾ, ನನ್ನ ಮಾತು ಕೇಳು. ಸಂಜೆಗೆ ಅವರು ಮನೆಗೆ ಬರಲಿ. ಆಮೇಲೆ ಏನು ಬೇಕಾದ್ದನ್ನು ಮಾಡುವಿಯಂತೆ."

"ಅದು ಸಾಧ್ಯವಿಲ್ಲ. ಈಗಲೇ ಈಕೆಯನ್ನು ಇಲ್ಲಿಂದ ಹೊರಗೆ ಹಾಕಿ ಎರಡನೆಯ ಕೆಲಸ!"

"ಆನಂದಾ ."

ಎರಡು ನಿಮಿಷದಲ್ಲಿ ಮೋಹಿನಿ ನಡುಮನೆಯಿಂದ ಹೊರಗೆ ಬಂದಳು. ಅವಳ ಕೈಯಲ್ಲಿ ಚಿಕ್ಕದೊಂದು 'ಲೇಡೀಸ್ ಬ್ಯಾಗ್' ಮಾತ್ರ ಇತ್ತು. ಆನಂದ ಚೀರಿದ:

"ಈ ಮನೆಯಲ್ಲಿಂದ ನೀನು ಒಂದು ಚೂರು ಸಾಮಾನನ್ನೂ ಒಯ್ಯ ಕೂಡದು! ಈ ಮನೆಯಲ್ಲಿಯ ಸಾಮಾನಿಗೆ ಕೈಹಚ್ಚಿದರೆ ನಿನ್ನ ಕೈ ಕಡಿದು ಬಿದ್ದಾವು!"

ಅಕ್ಕನಿಗೆ ಏನೂ ತೋಚದಾಗಿತ್ತು. ಅವರು ಹಂಬಲಿಸುತ್ತಿದ್ದರು:

"ಮೋಹಿನಿ, ಎಲ್ಲಿಗೆ ಹೊರಟೆ ಎಲ್ಲಿಗೆ ಹೊರಟೆ, ಮೋಹಿನಿ "

"ಎಲ್ಲಿ ಬೇಕಾದಲ್ಲಿ. ಈ ನರಾಧಮರನ್ನು ಬಿಟ್ಟು ಬಹಳ ದೂರ ದೂರ ಹೋಗುತ್ತೇನೆ."

"ಮೋಹಿನಿ....ಹೋಗಬೇಡಮ್ಮ ಅವರು ಬರಲಿ "

"ಯಾರು ಬರುವುದೂ ಬೇಡ, ಯಾರು ಹೇಳುವುದೂ ಬೇಡ."

"ಎಲ್ಲಿ ಹೋಗುತ್ತೀಯೇ, ಮೋಹಿನೀ ?....."

ಆನಂದ ಕಟುವಾಗಿ ಹೇಳಿದ:

"ನಿನಗೇಕೆ ಅಷ್ಟು ಯೋಚನೆ, ಅಕ್ಕ, ಆಕೆಗೆ ಬೇಕಾದಷ್ಟು ಗೆಳೆಯರು!"

"ಬಾಯಿ ಬಿಡಬೇಡಿರಿ. ಮನುಷ್ಯರಂತೆ ಮಾತನಾಡಿರಿ. ಅಂಥ ಕೆಟ್ಟ ಮಾತಿನಿಂದ ನಾಲಗೆ ಕಡಿದುಬಿದ್ದೀತು!"

ಮೋಹಿನಿಯೆದುರು ಬಂದು ನಿಂತು ಆನಂದ ಕೇಳಿದ:

"ಎಲ್ಲಿಗೆ ಹೊರಟೆ?"

"ಮೊದಲು ಈ ಮನೆ ಬಿಟ್ಟು ಹೊರಗೆ—ಆಮೇಲೆ ಬೇಕಾದಲ್ಲಿಗೆ!"

"ಅಷ್ಟು ಸುಲಭವಾಗಿಲ್ಲ!"

"ಅದರ ಯೋಚನೆ ನೀವು ಮಾಡಬೇಕಾಗಿಲ್ಲ!"

"ಹೌದು. ನಿನ್ನ ಆ ವಸಂತ ಎಲ್ಲ ಯೋಚನೆಯನ್ನೂ ಮಾಡಿರ ಬೇಕಲ್ಲವೆ? ನಿಮ್ಮಿಬ್ಬರನ್ನೂ ಪಾತಾಳಕ್ಕೆ ಇಳಿಸುವೆ, ತಿಳಿಯಿತೇ?"

"ನನ್ನ ಮಟ್ಟಿಗೆ ಮಾತನಾಡಿರಿ. ಉಳಿದವರ ಬೇಕಾದವರ ಹೆಸರು ನನ್ನೆದುರು ಬೇಡ!"

"ಹೌದು! ಬೇಡವಲ್ಲವೆ? ಸಮುದ್ರದ ದಂಡೆಯಲ್ಲಿ ಚೆಲ್ಲಾಟವಾಡುವಾಗ ಬೇಕು, ಕೂಡಿ ತಿನ್ನುವಾಗ ಬೇಕು—ಈಗ ಬೇಡ, ನಿರ್ಲಜ್ಜೆ!"

"ಮತ್ತೆ ..."

"ನಿನ್ನ ಕೈಯಲ್ಲಿಯ ಆ ಚಿನ್ನದ ಬಳೆಗಳನ್ನು ತೆಗೆದಿಟ್ಟು ಹೋಗು .."

ಅಕ್ಕ ಮತ್ತೆ ನಡುವೆ ಬಂದು "ಆನಂದಾ, ಆನಂದಾ—ಬೇಡ .." ಎಂದರೂ ಆನಂದ ಕೇಳಲಿಲ್ಲ. ಮೋಹಿನಿ ಒಂದು ನಿಮಿಷ ತಡೆದಳು. ಆನಂದ ಕಸಿದುಕೊಳ್ಳಹೋದಾಗ ಮೋಹಿನಿ ಹೇಳಿದಳು:

"ನೀವು ಅಷ್ಟು ಹೆದರುವ ಕಾರಣವಿಲ್ಲ. ತೆಗೆದಿಟ್ಟೇ ಹೋಗುತ್ತೇನೆ. ಇಗೋ, ನಿಮ್ಮ ಈ ಚಿನ್ನದ ಬಳೆ!....ಇದು ಕೊರಳ ಸರ...." ಎಂದು ತೆಗೆದು ಆನಂದನ ಮೈಮೇಲೆ ಎಸೆದಳು. ಕೊರಳ ಸರ ತೆಗೆದ ಮೇಲೆ ಮತ್ತೆ ಮೋಹಿನಿಯ ಕೈ ಕೊರಳ ಕಡೆಗೆ ಸರಿಯಿತು. ಒಂದು ನಿಮಿಷ ಅಲ್ಲಿಯೇ ತಡೆಯಿತು. ದುಃಖ ಚಿಮ್ಮಿ ಕಣ್ಣೀರು ಕೋಡಿಯಾಗಿ ಹರಿಯಿತು. ನಡುಗುತ್ತಿದ್ದ ದನಿಯಲ್ಲಿ ಹೇಳಿದಳು:

"ಇದು ನಿಮ್ಮ ಮೊದಲನೆಯ, ಈಗ ಕೊನೆಯ—ಆಭರಣ....ಇದನ್ನೂ ತೆಗೆದುಕೊಳ್ಳಿರಿ....ನನಗೆ ನಿಮ್ಮದಾವುದೂ ಬೇಡ...." ಎಂದವಳೇ ತಟಕ್ಕನೆ

ಕೊರಳಲ್ಲಿಯ ಮಂಗಳಸೂತ್ರವನ್ನು ಹರಿದು ಆನಂದನ ಮೋರೆಯ ಮೇಲೆ ಬೀಸಿದಳು. ಮಂಗಳಸೂತ್ರ ಆನಂದನ ಹಣೆಗೆ ಕಟ್ಟೆಂದು ತಾಕಿ ಅವನ ಪಾದಗಳಲ್ಲಿ ಬಿದ್ದಿತು!

ಅಕ್ಕನಿಗೆ ಏನು ಮಾಡಬೇಕು ತಿಳಿಯದಾಗಿಹೋಗಿತ್ತು. ಮೋಹಿನಿ ಹೆಜ್ಜೆ ಎತ್ತಿದಳು. "ಮೋಹಿನಿ, ಮೋಹಿನಿ, 'ಹೋಗಬೇಡ, ಎಲ್ಲಿ ಹೋಗುವೆ, ಮೋಹಿನಿ .." ಎಂದು ಬಾಗಿಲಲ್ಲಿ ಅಡ್ಡವಾಗಿ ಬಂದು ನಿಂತಳು. ಮೋಹಿನಿ ಸ್ತಬ್ಧವಾಗಿ ಅರೆನಿಮಿಷ ನಿಂತು, ನೀರು ತುಂಬಿದ ಕಣ್ಣುಗಳಿಂದ ನಾದಿನಿಯನ್ನು ಕಣ್ತುಂಬ ನೋಡಿದಳು. ಮರುಕ್ಷಣ ಬಾಗಿಲಲ್ಲಿ ಅಡ್ಡವಾಗಿ ಹಿಡಿದ ನಾದಿನಿಯ ಕೈಗಳನ್ನು ಹಿಂದಕ್ಕೆ ತಳ್ಳಿ ದಡದಡನೆ ಪಾವಟಿಗೆಗಳನ್ನಿಳಿದಳು. ಆನಂದ ಎತ್ತರವಾಗಿ ಕೂಗಿದ: "ಮೋಹಿನಿ! " ಎಂದು. ಪಾವಟಿಗೆಗಳ ಸಪ್ಪಳದಲ್ಲಿ ಆ ಕರೆ ಮೋಹಿನಿಗೆ ಕೇಳಿಸಲಿಲ್ಲವೇನೊ!

ಆನಂದ ನಿಂತಲ್ಲಿಯೇ ನೆಲಕ್ಕೆ ಕುಳಿತ. ಕುಳಿತ ಕಿಟಕಿಯೊಳಗಿಂದ ಭಾಸ್ಕರ ಕದಲಲಿಲ್ಲ. ಅಕ್ಕ ಮಾತ್ರ ವಿಹ್ವಲಳಾಗಿ ದಾರಿಗಾಣದೆ ಒಳಗೆ ಓಡಿ ಬಂದು,

"ಆನಂದಾ, ಆನಂದಾ, ಏನಿದನ್ನು ಮಾಡಿದೆಯೋ, ಮಹಾರಾಯ, ಹೋಗು, ನೋಡು ಹೋಗು, ಎಲ್ಲಿ ಹೋದಳು. ಜೀವಕ್ಕೆ ಏನಾದರೂ ಮಾಡಿಕೊಂಡಾಳು, ಹೋಗೋ ಆನಂದಾ ... " ಎಂದು ಗೋಳಿಟ್ಟಳು.

"ಭಾಸ್ಕರಾ, ನೀನಾದರೂ ನೋಡಪ್ಪಾ.... ಹೋಗು "

ಭಾಸ್ಕರ ಎದ್ದು ನಿಂತ; ಆದರೆ ಮೋಹಿನಿಯನ್ನು ಬೆನ್ನಟ್ಟುವ ಧೈರ್ಯ ಆತನಲ್ಲಿ ಉಳಿದಂತೆ ಕಾಣಲಿಲ್ಲ. ಅಕ್ಕ ಮತ್ತೆ ಗ್ಯಾಲರಿಯಲ್ಲಿ ಬಂದು ಮತ್ತೆ ಕೂಗಿದಳು: "ಮೋಹಿನಿ, ಮೋಹಿನಿ, ಇಲ್ಲಿ ಬಾರೇ, ಮೋಹಿನಿ" ಎಂದು. ಮೋಹಿನಿ ಆಗಲೇ ಕೊನೆಯ ಮೆಟ್ಟಲನ್ನಿಳಿದಿದ್ದಳು.

ಕೊನೆಯ ಪಾವಟಿಗೆಯನ್ನಿಳಿಯುವಾಗ ಮೋಹಿನಿಗೆ ವಿಪರೀತ ವೇದನೆಯಾಯಿತು. ಆ ಸಂಕಟ ಆನಂದನ ಪೆಟ್ಟಿಗಿಂತಲೂ ಅಸಹ್ಯವಾಗಿತ್ತು! ಪ್ರತಿಯೊಂದು ಪಾವಟಿಗೆಯ ಮೇಲಿನ ಹೆಜ್ಜೆಯ ಸಪ್ಪಳವೂ 'ಇಂದು ಇಲ್ಲಿಯ ನಿನ್ನ ಋಣ ತೀರಿತು—ತೀರಿತು!' ಎಂದು ಹೇಳುವಂತಿತ್ತು. ಆ ಮನೆಯನ್ನು ಇನ್ನೊಮ್ಮೆ ನೋಡಬಾರದೆಂದುಕೊಂಡಳು. ಮತ್ತೊಮ್ಮೆ—ಕೊನೆಯಾಗಿ—

ನೋಡಬೇಕೆಂಬ ಆಸೆ ಅನಿವಾರ್ಯವಾಯಿತು. ಹಿಂದಿರುಗಿ ನೋಡಿದಳು., ಆ ನೋಟದಲ್ಲಿ ಯಾವ ವ್ಯಥೆಯಿತ್ತೋ! ಯಾವ ನಿರಾಶೆಯಿತ್ತೋ! ಅತ್ತೆಯ ಮನೆಯವರ ಕಾಟಕ್ಕಾಗಿ ಆತ್ಮಹತ್ಯ ಮಾಡಿಕೊಳ್ಳಲು ಮುನ್ನುಗ್ಗುವ ಮುನ್ನ, ಮುದ್ದಾಗಿ ಮಲಗಿದ ತನ್ನ ಒಂದೇ ಮಗುವಿನ ಮುಖವನ್ನು ಕೊನೆಯಾಗಿ ನೋಡಿಕೊಂಡು ಹೋಗುವಾಗಿನ ಸೊಸೆಯ ಸಂಕಟವಿತ್ತು, ಆ ನೋಟದಲ್ಲಿ! ಮೋಹಿನಿ ಎಂದುಕೊಂಡಳು: ' ಈ ಮನೆಯನ್ನು ನನ್ನ ' ಕನಸಿನ ಮನೆ ' ಯನ್ನಾಗಿ ಮಾಡಬೇಕೆಂದಿದ್ದೆ. ಇಲ್ಲಿ ನನ್ನ ಕನಸು ಸಾಮ್ರಾಜ್ಯವೈಭವದಿಂದ ಮೆರೆಯಬೇಕಾಗಿತ್ತು. ಆದರೆ ಇನ್ನುಮುಂದೆ ಈ ಮನೆ ನನಗೆ ಕನಸಾಯಿತು. ನನ್ನ ಕನಸಿನ ಮಸಣವಾಯಿತು. ಇದರ ನೆನಹು ನನ್ನ ಬದುಕನ್ನು ಬೆನ್ನಟ್ಟಿ ಬರುವ ಬೇತಾಳವಾಯಿತು.' ಮತ್ತೊಮ್ಮೆ ಮೋಹಿನಿ ಹಿಂದಿರುಗಿ ನೋಡಿದಳು. ಬಾಗಿಲಲ್ಲಿ ಯಾರೂ ಕಾಣಲಿಲ್ಲ. ಆ ಕ್ಷಣಕ್ಕೆ ಮೋಹಿನಿಗೆ ಅರಿವಾಯಿತು— ತನಗಿನ್ನು ಯಾರೂ ಇಲ್ಲವೆಂದು!

' ಎಲ್ಲಿಗೆ ಹೋಗುವಿ ? ' ಎಂದು ಕೇಳಿದಾಗ ಹೇಳಿದ್ದಳು : ' ಈ ಮನೆಯನ್ನು ಬಿಟ್ಟು ಹೊರಗೆ—ಬೇಕಾದಲ್ಲಿ ' ಎಂದು. ಆದರೆ ಸುತ್ತಲಿನ ಪ್ರಪಂಚವೆಲ್ಲವೂ ' ಎಲ್ಲಿ ? ಎಲ್ಲಿಗೆ ಹೋಗುವೆ ? ' ಎಂದು ಅಣಕಿಸಿಕೊಳ್ಳುವಂತಿತ್ತು. ದಿನದ ದಾರಿ—ಪರಿಚಿತವಾದ ದಾರಿ. ಆದರೆ ಆ ಕ್ಷಣಕ್ಕೆ ಅದು ಬೇರೆಯಾಗಿ ಕಾಣಿಸಿತು. ಊರು ಅಡವಿಯಾಗಿತ್ತು, ಮನೆ ಮಸಣವಾಗಿತ್ತು, ಭವಿಷ್ಯ ಕತ್ತಲೆಯ ಕಡಲಾಗಿತ್ತು. ಮೋಹಿನಿಗೆ ತಟ್ಟನೆ ನೆನಪಾಯಿತು ... ಆ ಜುಹುವಿನ ಕನಸಿನ ಕೊನೆ! ಅಲ್ಲಿ ದಾರಿಗಾಣದಾಗಿದ್ದಳು. ದಾರಿ ತೋರಬೇಕೆಂದು ಬಯಸಿದವ ಮಾಯವಾಗಿದ್ದ. ಕೈಹಿಡಿದವ ಗದರಿಸಿದ್ದ! ಕಾಲ ಕೆಳಗಿನ ಪೃಥ್ವಿಯೇ ಕಳಚಿಹೋದಂತಾಗಿತ್ತು. ಆದರೆ ಎಲ್ಲಿಯೋ ಹೃದಯದೊಳಗಿಂದ ಕಿರುದನಿಯೊಂದು ಸಮಾಧಾನದ ಮಾತನ್ನು ಉಸಿರುತ್ತಿತ್ತು : ' ಯಾಕೆ ಯೋಚಿಸುತ್ತೀ, ಮೋಹಿನಿ ? ಇಂದು ನಿನ್ನ ಬಿಡುಗಡೆಯಾಯಿತು. ಇಂದು ನಿನ್ನ ಸ್ತ್ರೀತ್ವಕ್ಕೆ ಬಿಡುಗಡೆಯಾಯಿತು. ಪ್ರಪಂಚವೆಂದರೆ ಆನಂದನ ಮನೆ ಮಾತ್ರವಲ್ಲ! ಪ್ರಪಂಚವೆಲ್ಲವೂ ಆನಂದ-ಭಾಸ್ಕರರಿಂದ ತುಂಬಿಲ್ಲ. ವಸಂತನ ಅಂತಹರೂ ಇದ್ದಾರೆ! ನೀನು ತಪ್ಪು ಎಂದು ಸಮಾಜ ಸೆಟೆದು ನಿಂತು ಉದ್ದಾಮವಾಗಿ ನಿನ್ನನ್ನು ಅಮಾನುಷ ಹಿಂಸೆಗೀಡುಮಾಡಬಹುದು—ಮಾಡು

ವುದು! ನೀನು ಪತಿತೆಯೆಂದು ತೆಗಳುವುದು, ಪಾಪಿಯೆಂದು ಶಪಿಸುವುದು! ಆದರೆ ಇಂದು ನೀನು ಬಂಧಮುಕ್ತಳಾದೆ! ಹಿಂಸೆ ಮಾಡುವ ಆ ಸಮಾಜವನ್ನು, ಪಾಪಿಯೆಂದು ಆಪಾದಿಸುವ ಸಮಾಜವನ್ನು—ನೀನು ಕಣ್ಣು ತೆರೆಯುವಂತೆ ಮಾಡಬಲ್ಲೆ! ಇದು ನಿನ್ನ ವಿಮೋಚನೆಯ ಕಾಲ, ಆದರೆ ಇದು ನಿನ್ನ ಪರೀಕ್ಷಾ ಕಾಲವೂ ಹೌದು' ಎಂದು. ಕಾಲುಗಳು ಹೆಜ್ಜೆಹಾಕುತ್ತಲೇ ಇದ್ದವು. ದಾರಿ ತಿರುಗುವಾಗ ಮನೆಯನ್ನು ಮತ್ತೊಮ್ಮೆ ನೋಡಿದಳು—'ಅಯ್ಯೋ!' ಎಂದು ನರಳಿತು ಹೃದಯ.

ಬೋರಿವಲಿಯ ನಿಲ್ದಾಣದ ಒಂದು ಬೆಂಚಿನ ಮೇಲೆ ಬಂದು ಕುಳಿತಳು. ಹಿಂದೆ ಎಷ್ಟು ಸಾರೆ ಅದೇ ಬೆಂಚಿನ ಮೇಲೆ ಬಂದು ಕುಳಿತಿರಲಿಲ್ಲ? ಆದರೆ ಇಂದಿನದು ಬೇರೆಯಾಗಿತ್ತು! 'ಆ ಮನೆಯನ್ನು, ಆ ನಿಲ್ದಾಣವನ್ನು, ಆ ಬೆಂಚನ್ನು, ಆ ಸುತ್ತಲಿನ ಪ್ರಪಂಚವನ್ನು ಎಂದೆಂದಿಗೂ ನೋಡಲಾರೆ—ಇಗೋ, ಇಂದು ನಿನ್ನ ಕೊನೆಯ ಕ್ಷಣ' ಎಂದು ಕಾಲಪುರುಷ ಮುಂದೆ ನಿಂತು ಹೇಳುತ್ತಿರುವಂತೆ—ಕಾತರಳಾಗಿ, ಕರುಣವಾಗಿ, ಕಣ್ಣು ಬಿಟ್ಟು ಕಣ್ಣೀರ ತೆರೆಯ ಮಧ್ಯದಿಂದ ನೋಡಿದಳು.

ಆಫೀಸುಗಳಿಂದ ಜನ ಬರುತ್ತಲೇ ಇದ್ದರು. 'ವಸಂತ ಈಗ ಸಿಕ್ಕರೆ?' ಎಂದು ಒಂದು ಕ್ಷಣ ಮನಸ್ಸು ಯೋಚಿಸಿತು. ಆದರೆ ಮರುಕ್ಷಣ ಅಂದುಕೊಂಡಳು: 'ಏನೆಂದು ವಸಂತನಿಗಾದರೂ ಈ ಮುಖವನ್ನು ಇನ್ನುಮೇಲೆ ತೋರಿಸುವುದು? ನನ್ನಿಂದ ಆತನಿಗೆ ಅವಮಾನವಾಯಿತು! ಇನ್ನೇನು ತೊಂದರೆಯೋ ಯಾರಿಗೆ ಗೊತ್ತು? ಒಳ್ಳೆಯದನ್ನು ಬಗೆಯಹೋಗಿ ಕೆಡಕನ್ನು ಗಳಿಸಿದ ಹಾಗಾಯಿತು ಆತನಿಗೆ! ಪಾಪ!' ವಸಂತ ಎದುರಿಗೆ ಬಂದರೂ ಆತನನ್ನು ಎದುರಿಸಿ ಮಾತನಾಡಿಸಿಯೇನೆಂಬ ಧೈರ್ಯವೂ ಉಳಿಯಲಿಲ್ಲ ಮೋಹಿನಿಯಲ್ಲಿ! ರೈಲು ಬಂದಿತು—ಯಂತ್ರ! ಯಾಂತ್ರಿಕವಾಗಿ ರೈಲನ್ನು ಏರಿದಳು. ನಿಧಾನವಾಗಿ ಹೊರಟಿತು. ವೇಗ ಹೆಚ್ಚಾಯಿತು. ಗಾಲಿಗಳ ಸಪ್ಪಳದಲ್ಲಿ ಪ್ರಶ್ನೆ ತೂರಿ ತೂರಿ ಬರುವಂತಿತ್ತು: 'ಇಂದಿಗೆ ನಿನ್ನ ಅವತಾರ ಮುಗಿಯಿತು .ಮುಗಿಯಿತೊ? ಮೊದಲಾಯಿತೊ?' ಎಂದು. ಹೊರಗೆ ಮುಚ್ಚಂಜೆ ಮಕಮಕ ಕವಿಯುತ್ತಿತ್ತು. ಬೆಳಕು-ಕತ್ತಲೆಗಳ ಸಂಧಿಕಾಲ—ಅದು ಮೋಹಿನಿಯ ಜೀವನದಲ್ಲಿಯ ಸಂಧಿಕಾಲದ ಸಂಕೇತವಾದಂತಿತ್ತು!

ವಸಂತ ವಾಡಿಕೆಯಂತೆ ಒಂಬತ್ತರ ಸುಮಾರಿಗೆ ಮನೆಗೆ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡೇ ಏನನ್ನೋ ಓದುತ್ತಿದ್ದ. ಮಧ್ಯಾಹ್ನದಿಂದ ಮನಸ್ಸು ಮೋಹಿನಿಯ ಬಗೆಯಲ್ಲಿ ಹಲವಾರು ಯೋಚನೆಗಳಲ್ಲಿ ಸಿಲುಕಿತ್ತು. ಯಾವುದೋ ಒಂದು ತೆರದ ಅವ್ಯಕ್ತವಾದ ದುಗುಡ ಹೃದಯವನ್ನು ಬಾಧಿಸುತ್ತಿತ್ತು. ಏನೆಂದು ಕೇಳಿಕೊಂಡರೆ ಹೇಳಲಾಗುತ್ತಿದ್ದಿಲ್ಲ. ತರ್ಕಕ್ಕೆ ಮುಂದಾಲೋಚನೆಗೆ ನಿಲುಕದ ರೀತಿಯಲ್ಲಿ ಮನಸ್ಸು ಏನೋ ಒಂದು ಅನಿಷ್ಟವನ್ನು ಮುನ್ನೋಡುತ್ತಿರುವಂತಿತ್ತು. ಓದುತ್ತಿದ್ದ. ಆದರೆ ಮನಸ್ಸು ಮಾತ್ರ ಸ್ಥಿರವಾಗಿರಲಿಲ್ಲ. ಪುಸ್ತಕದಿಂದ ಲಕ್ಷ್ಯ ತಪ್ಪಿದಾಗ ಹೊರಗಿನ ಶಾಂತತೆ ಭಯಾನಕವೆನಿಸುತ್ತಿತ್ತು. ಮುನ್ನಾದಿನದ ಹೊಟೇಲಿನಲ್ಲಿಯ ಸಾಯಂಕಾಲದ ಸನ್ನಿವೇಶವನ್ನು ಆಗಾಗ ನೆನೆಯುತ್ತಿದ್ದ. ಹೊರಗಿನ ಬಾಗಿಲನ್ನು ಯಾರೋ ತಟ್ಟಿದಂತಾಯಿತು :

"ವಸಂತರಾವ್" ಎಂದು.

"ಯಾರವರು ? ಬಂದೆ ." ಎಂದು ಎದ್ದುಹೋಗಿ ವಂಸತ ಬಾಗಿಲು ತೆರೆಯುತ್ತಾನೆ—ಎದುರಿಗೆ ಆನಂದ, ಭಾಸ್ಕರ ! ವಸಂತನ ಎದೆ ಝುಲ್ಲೆಂದಿತು 'ಕೊನೆಯ ನಿಷ್ಕರ್ಷೆಯ ವೇಳೆ ಬಂದಿತು' ಎಂದುಕೊಂಡ. ತಾನು ಹೆದರಬೇಕಾದ ಕಾರಣವಿರಲಿಲ್ಲವಾದರೂ ಆ ಕ್ಷಣದಲ್ಲಿ ಧೈರ್ಯ ತುಸು ಕೈಬಿಟ್ಟಂತೆ ಎನಿಸಿತು. ಸನ್ನಿವೇಶವನ್ನು ಯಾವ ಮುಚ್ಚುಮರೆಯೂ ಇಲ್ಲದೆ ಧೈರ್ಯವಾಗಿ ಎದುರಿಸಲೇಬೇಕೆಂದುಕೊಂಡ. ಆನಂದನ ಮುಖ ಗಂಭೀರವಾಗಿ ವಿವರ್ಣವಾಗಿ ಹೋದಂತಿತ್ತು. ಭಾಸ್ಕರ ಅನುಮಾನದ ಪ್ರತೀಕವಾಗಿದ್ದ. ವಸಂತನಿಗೆನಿಸಿತು : 'ಇನ್ನಾವ ಪ್ರಸಂಗದಲ್ಲಿಯೂ ಆನಂದ ತನ್ನ ಮನೆಗೆ ಬಂದಿದ್ದರೆ ಎಷ್ಟು ಉತ್ಸಾಹದಿಂದ ಆತನನ್ನು ಬರಮಾಡಿಕೊಳ್ಳಬಹುದಿತ್ತು ?' ಎಂದು. ಆದರೆ ಆ ಉತ್ಸಾಹ ಈಗ ಅವನಲ್ಲಿ ಉಳಿದಿರಲಿಲ್ಲ.

"ಬನ್ನಿ, ಒಳಗಡೆಯೇ ಕುಳಿತುಕೊಳ್ಳೋಣ—" ಎಂದ.

ಆನಂದ-ಭಾಸ್ಕರರಿಬ್ಬರೂ ಒಳಗಡೆಯ ವಸಂತನ ಕೋಣೆಯಲ್ಲಿ ಬಂದು ಕುಳಿತರು. ವಸಂತನಿಗೆ ಏನು ಮಾತನಾಡಬೇಕೆಂಬುದು ತಿಳಿಯದಾಗಿತ್ತು. ಆನಂದನಿಗೆ ಮಾತನ್ನು ಹೇಗೆ ಮೊದಲುಮಾಡಬೇಕೆಂಬುದು ಬಗೆಹರಿಯದಾಗಿತ್ತು. ಕೊನೆಗೆ ವಸಂತನೇ ಅಂದ :

"ಏನು, ಇಷ್ಟು ರಾತ್ರಿಯಾಗಿ ಬಂದಿರಿ ?"

" ನಿಮ್ಮ ಕೂಡ ಒಂದಿಷ್ಟು ಮಾತನಾಡಬೇಕಿತ್ತು " ಎಂದ ಆನಂದ ಬಿಗುವಾಗಿ.

" ಏನದು ? "

" ವಿಷಯ ತುಂಬ ಸೀರಿಯಸ್ ಆಗಿದೆ...."

" ಏನು ! ಏನು ವಿಷಯ ? "

ಭಾಸ್ಕರ ನಡುವೆಯೇ ನೆಗೆದುಬಂದು ಗಟ್ಟಿಯಾಗಿ ಹೇಳಿದ :

" ಈ ಸೋಗು ಸಾಕುಮಾಡಿರಿ. ಇನ್ನುಮುಂದೆ ಇದೆಲ್ಲ ನಡೆಯಲಿಕ್ಕಿಲ್ಲ —ತಿಳಿಯಿತೆ ? "

ಭಾಸ್ಕರನ ಈ ಮಾತಿನ ರೀತಿ ವಸಂತನಿಗೆ ಅನಿರೀಕ್ಷಿತವಾಗಿರದಿದ್ದರೂ ಅಸಹ್ಯವಾಗಿತ್ತು. ಅದನ್ನು ನಿಷೇಧಿಸುವುದವಶ್ಯವೆನಿಸಿ ವಸಂತನೆಂದ:

" ಏನು ವಿಷಯ—ಅದನ್ನು ಹೇಳದೆ, ಈ ಮಾತಿನ ರೀತಿ ನನಗೆ ಅರ್ಥ ವಾಗುವುದಿಲ್ಲ."

" ಅರ್ಥವಾಗುವುದಿಲ್ಲವೆ ? ಹೇಗಾದೀತು ? ಈಗಲೇ ಆಗುವುದಿಲ್ಲ. ಆದರೆ ಬೇಗನೆ ಆಗಬಹುದು ! " ಎಂದ ಭಾಸ್ಕರ ಉದ್ದಾಮವಾಗಿ.

ವಸಂತನಿಗೆ ತಡೆಯದಾಯಿತು. ಆನಂದನನ್ನು ಕುರಿತು ಹೇಳಿದ :

" ನಿಮ್ಮಿಬ್ಬರಲ್ಲಿ ನಾನು ಯಾರ ಕೂಡ ಮಾತನಾಡಬೇಕು ಇದು ಮೊದಲು ನಿಷ್ಕರ್ಷೆಯಾಗಬೇಕು ! "

" ಅದು ಆದೀತಂತೆ. ಮೊದಲು ಮೋಹಿನಿಯನ್ನು ಕಳಿಸಿಕೊಡಿರಿ...."

" ಮೋಹಿನಿ ?—"

" ಹುಂ....ಮೋಹಿನಿ ! ಈ ಸೋಗು ಸಾಕುಮಾಡಿರಿ ಎಂದು ಮೊದಲೇ ಹೇಳಿದೆನಲ್ಲ."

" ಮೋಹಿನಿ ಇಲ್ಲಿಗೇಕೆ ಬರುತ್ತಾಳೆ ?....ಅದೂ ಇಷ್ಟು ರಾತ್ರಿ...."

" ಇಲ್ಲಿಗೆ ಬಾರದೆ ಎಲ್ಲಿಗೆ ಹೋಗಬೇಕು ? ಸುಮ್ಮನೆ ಆಕೆಯನ್ನು ಮನೆಗೆ ಈಗಿಂದೀಗಲೆ ಕಳಿಸಿಕೊಡಿರಿ. ಇಲ್ಲವಾದರೆ ನಮಗೆ ಪೋಲೀಸರನ್ನು ಕರೆಯ ಬೇಕಾದೀತು ! "

" ಇದು ನೋಡಿರಿ, ಭಾಸ್ಕರರಾವ್—ನೀವು ಒಬ್ಬ ಸದ್ಗೃಹಸ್ಥನ ಕೂಡ ಮಾತನಾಡುತ್ತಿದ್ದೀರೆಂಬುದನ್ನು ಮರೆಯಬೇಡಿರಿ...."

" ನನಗೆ ಗೊತ್ತಾಗಿದೆ ಈ ಸದ್ಗೃಹಸ್ಥರ ಲಕ್ಷಣ ! "

" ನಾನೂ ಕೆಟ್ಟ ಮಾತು ಆಡಬಹುದು, ಭಾಸ್ಕರರಾವ್, ತಿಳಿಯಿತೆ ? ಆದರೆ ನನಗೆ ಅದು ಬೇಕಾಗಿಲ್ಲ...."

" ನಮಗೂ ಮಾತು ಬೇಕಾಗಿಲ್ಲ. ನಾಳೆ ನಿಮ್ಮ ಮೇಲೆ ಅಡಲ್ಟರಿ ಕೇಸ್ ಹಾಕುತ್ತಾನೆ....ಆಗ ಕೋರ್ಟಿನಲ್ಲಿಯೇ ಆದೀತು, ಈ ನಿಮ್ಮ ಸಭ್ಯತನದ ಪ್ರದರ್ಶನ ! "

" ಮೇರೆ ತಪ್ಪಿ ಮಾತನಾಡಬೇಡಿರಿ, ಭಾಸ್ಕರರಾವ್—"

" ಮೇರೆ ತಪ್ಪಿ ನಡೆಯುವವರ ಮಾತೇ ಇದು ? "

ಆನಂದ ನಡುವೆಯೇ ಬಂದು ಅಣ್ಣನಿಗೆ ಹೇಳಿದ :

" ನೀನು ಸುಮ್ಮನಿರು, ಭಾಸ್ಕರಾ—ನೀನು ಸುಮ್ಮನಿರು...."

" ಹೇಗೆ ಸುಮ್ಮನಿರುತ್ತಾರೊ ? ಕೇಸು ಹಾಕಿಯೇ ಬಿಡುತ್ತೇನೆ....ಆಮೇಲೆ ತಿಳಿಯುವುದು."

ವಸಂತನಲ್ಲಿ ಕೋಪ ಪುಟಿದೇಳುತ್ತಿದ್ದರೂ ಅದನ್ನು ತಡೆಹಿಡಿದು, ಶಾಂತ ವಾಗಿಯಾದರೂ ಗಂಭೀರವಾಗಿ ಹೇಳಿದ :

" ಇದು ನೋಡಿರಿ, ಭಾಸ್ಕರರಾವ್—ಇದರಲ್ಲಿ ನೀವು ಮಾತಾಡದಿರು ವುದೇ ಒಳ್ಳೆಯದು, ತಿಳಿಯಿತೆ ? "

" ಹಾಗಾದರೆ ನೀವು ಮಾಡಿದ್ದನ್ನೆಲ್ಲ ನೋಡುತ್ತ ಹೋಗಬೇಕೇನು ? "

" ನೀವು ಮಾಡಿದ್ದನ್ನೆಲ್ಲ ಆನಂದರಾಯ ಕಣ್ಣಿಟ್ಟು ನೋಡಿದ್ದರೆ, ಪರಿಸ್ಥಿತಿ ಇಲ್ಲಿಗೆ ಬರುತ್ತಿದ್ದಿಲ್ಲ !...."

ಭಾಸ್ಕರನಿಗೆ ಏಟು ಪೂರೈಸಿತು. ಆದರೂ ಧೈರ್ಯಗೆಟ್ಟವನಂತೆ ತೋರಿಸ ಲಿಲ್ಲ. ಆನಂದನಿಗೆಂದ : " ನಡೆ, ಆನಂದಾ—ಈ ನಮ್ಮ ಸಭ್ಯ ಗೃಹಸ್ಥರಿಗೆ ಪೊಲೀಸರೇ ಮದ್ದು...."

ಆನಂದ ತುಸು ಸಿಡುಕಿನಲ್ಲಿಯೇ ಹೇಳಿದ :

" ನೀನು ತಡೆ, ಭಾಸ್ಕರಾ—ನೀನು ಮೊದಲು ಸುಮ್ಮನಿರು........ ನೋಡೋಣ...."

" ಇದು ನೋಡಿರಿ, ವಸಂತರಾವ್—ನೀವು ಇದ್ದುದನ್ನು ಮರೆಮಾಚದೆ ಹೇಳಲೇಬೇಕು. ಎಲ್ಲ ಸಮಾಚಾರವೂ ನನಗೆ ತಿಳಿದಿದೆ...."

ವಸಂತ ಶಾಂತವಾಗಿ ಉತ್ತರ ಹೇಳಿದ:

" ನಿಮಗೆ ಎಲ್ಲ ಸಮಾಚಾರ ತಿಳಿದಿಲ್ಲ. ತಿಳಿದಷ್ಟನ್ನು ತಪ್ಪಾಗಿ ತಿಳಿದು ಕೊಂಡಿದ್ದೀರಿ. ಅಂತೆಯೇ ಇಲ್ಲಿಗೆ ಬಂದಿರುವಿರಿ. ಸರಿಯಾದ ಸಮಾಚಾರ ನಿಮಗೆ ತಿಳಿದಿದ್ದರೆ, ನೀವು ಇಲ್ಲಿಗೆ ಬರುವ ಸಂದರ್ಭವೇ ಇರುತ್ತಿರಲಿಲ್ಲ ! "

" ನನಗೆ ಯಾವ ಸಂದೇಹವೂ ಉಳಿದಿಲ್ಲ ! "

" ಯಾವ ವಿಷಯದಲ್ಲಿ ? "

" ಮೋಹಿನಿ ನಿಮ್ಮ ಕೂಡ ಸಲಿಗೆ ಬೆಳಸಿದ ವಿಷಯದಲ್ಲಿ ! "

" ನೀವು ಮೋಹಿನಿಗೆ ಅನ್ಯಾಯ ಮಾಡುತ್ತಿದ್ದೀರಿ, ಹೀಗೆ ಮಾತಾಡಿ."

" ನೀವಿಬ್ಬರೂ ಸೇರಿ ನನಗೆ ಅನ್ಯಾಯ ಮಾಡಿದ್ದೀರಿ. ಇದರ ಯೋಚನೆ ನಿಮಗಿಲ್ಲ ! " ಆನಂದ ಕಟುವಾಗಿ ಮಾತನಾಡುತ್ತಿದ್ದ.

" ನನ್ನಿಂದ ನಿಮಗೆ ಅನ್ಯಾಯವಾಗಿದ್ದರೆ ಈ ಕ್ಷಣ ನಿಮ್ಮ ಪಾದ ಮುಟ್ಟಿ ಕ್ಷಮೆ ಕೇಳಿಕೊಳ್ಳುತ್ತಿದ್ದೆ ! "

" ಅಲ್ಲಿಯ ಪಾದರಕ್ಷೆಗಳನ್ನೆತ್ತಿಕೊಂಡೇ ನನ್ನನ್ನು ಹೊಡೆಯುತ್ತಿದ್ದಿರಿ, ಅಲ್ಲವೆ ? "

" ಕೆಟ್ಟ ಮಾತು ಅಗತ್ಯವಿಲ್ಲ ಎಂದು ಹೇಳಿದೆನಲ್ಲವೆ, ಆನಂದರಾವ್ ? "

" ಕೆಟ್ಟ ಮಾತು ಎಂದು ಹೇಳಲಿಲ್ಲ ನಾನು. ನನ್ನ ವಿಶ್ವಾಸದ ದುರುಪ ಯೋಗಮಾಡಿಕೊಂಡು ನನಗೆ ನೀವು ವಿಶ್ವಾಸಘಾತ ಮಾಡಿದಿರಿ. ಅದಕ್ಕೆ ಏನೆನ್ನುವಿರಿ ? "

" ನಿಮ್ಮ ವಿಶ್ವಾಸದ ಉಪಯೋಗವನ್ನೂ ಮಾಡಿಕೊಂಡಿಲ್ಲ, ದುರುಪ ಯೋಗವನ್ನು ಮಾಡಿಕೊಳ್ಳಲಿಚ್ಛೆಯಿಲ್ಲ. ನಿಮ್ಮ ವಿಶ್ವಾಸಘಾತವನ್ನೂ ನಾನು ಮಾಡಿಲ್ಲ."

" ಈ ಮುಚ್ಚುಮರೆ ಸಾಕು ಇನ್ನು ."

" ಯಾವ ಮುಚ್ಚುಮರೆಯೂ ಇಲ್ಲ. ಇದ್ದುದನ್ನೇ ಹೇಳುತ್ತಿದ್ದೇನೆ

" ನನಗೆ ವಿಶ್ವಾಸವಿಲ್ಲ ! "

" ನಿಮಗೆ ವಿಶ್ವಾಸವಿಲ್ಲದಿದ್ದರೆ, ನಾನು ಏನು ಹೇಳಿದರೂ ವ್ಯರ್ಥ ! "

" ಒಂದಲ್ಲ, ಎರಡು ಸಾರೆ ಕಣ್ಣಾರೆ ಕಂಡವರು ಹೇಳಿದಮೇಲೆಯೂ ಹೇಗೆ ವಿಶ್ವಾಸ ಉಳಿಯಬೇಕು ? "

" ಏನು ಕಂಡರು ಕಣ್ಣಾರೆ ? "

" ನೀವಿಬ್ಬರೂ ಕೂಡಿ ಅಡ್ಡಾಡುವುದನ್ನು....ಸಲಿಗೆಯಲ್ಲಿ ಬೇಕಾದಷ್ಟು ಹೊತ್ತು ಕುಳಿತುಕೊಂಡು ಹರಟೆ ಹೊಡೆಯುವುದನ್ನು ..."

" ಯಾರವರು ನೋಡಿದವರು ? "

" ಯಾರೇ ನೋಡಲಿ. ನಿನ್ನೆ ಮಧ್ಯಾಹ್ನವೇ ಎರಡು ಗಂಟೆ ಕೂಡಿ ಇದ್ದಿರಿ...."

" ನಾನು ಇಲ್ಲ ಎಂದು ಹೇಳುವುದಿಲ್ಲ."

ಭಾಸ್ಕರ ಗೆದ್ದವನಂತೆ ನಡುವೆಯೇ ಬಾಯಿಹಾಕಿದ :

" ಇಲ್ಲ ಎಂದು ಏನು ಹೇಳುತ್ತೀರಿ ? ನೀವು ಎಲ್ಲೆಲ್ಲಿ ಹೋದಿರಿ, ಏನೇನು ಮಾಡಿದಿರಿ ಎಂಬುದು ಎಲ್ಲವೂ ಗೊತ್ತಾಗಿದೆ."

" ಇರಬಹುದು ... ನನಗೂ ತಿಳಿದಿದೆ, ಎಲ್ಲ ವಿಷಯ. ನನಗೆ ಹೇಳ ಬೇಕಾದದ್ದೂ ಬೇಕಾದಷ್ಟಿದೆ. ಸ್ವಲ್ಪ ತಡೆಯಿರಿ."

ಭಾಸ್ಕರ ಸುಮ್ಮನಾದ. ಮೋಹಿನಿಯ ಮೂಲಕ ತನ್ನ ವಿಚಾರವೆಲ್ಲ ವಸಂತನಿಗೆ ತಿಳಿದಿದ್ದು ಆ ಕತೆಯನ್ನೇ ವಸಂತ ಈಗ ಬಯಲಿಗೆಳೆದರೆ ? ಎಂಬ ಯೋಚನೆಯಿಂದ ತುಸು ಗಾಬರಿಯಾದಂತಿದ್ದ ಭಾಸ್ಕರ.

" ನಿಮಗೇನು ಹೇಳಬೇಕಾಗಿದೆ ? "

" ನಿಮ್ಮದು ಮುಗಿಯಲಿ. ನಿಮಗೇ, ನು ಹೇಳುವುದಿದೆ ಮೊದಲು ಹೇಳಿ. . ಮುಖ್ಯ ಒಂದು ವಿಷಯ : ಇದು ಬಿಕ್ಕ ನ ಸಮಯ. ಸ್ಪಷ್ಟವಾಗಿ, ಯಾವ ಅಡ್ಡಿ ಮರೆಯಿಲ್ಲದೆ ನಾವಿಬ್ಬರೂ ಇಲ್ಲಿ ಮಾತಾಡಬೇಕಾಗಿದೆ, ಎಂಬು ದನ್ನು ಮಾತ್ರ ಮರೆಯಕೂಡದು—"

" ನನಗೆ ಒಂದೇ ಒಂದು ವಿಷಯ ತಿಳಿಯಬೇಕಾಗಿದೆ. ನೀವಿಬ್ಬರೂ ಸಲಿಗೆಯಿಂದ ಕೂಡಿ ಅಡ್ಡಾಡಿ ಒಬ್ಬರೊಬ್ಬರ ಸಹವಾಸದಲ್ಲಿದ್ದದ್ದೂ ಸುಳ್ಳೇ ? "

" ಸಲಿಗೆ ಮತ್ತು ಸಹವಾಸ ಎಂಬ ಮಾತುಗಳನ್ನು ಹೇಳುತ್ತಿದ್ದೀರಿ. ಅವಕ್ಕೆ ನೀವು ಯಾವ ಬೇಕಾದ ಅರ್ಥವನ್ನೂ ಮಾಡಬಹುದು. ಒಂದು ಮಾತನ್ನು ನಾನು ಮೊದಲಿಗೇ ಹೇಳುತ್ತೇನೆ....ನಾನು ಮತ್ತು ಮೋಹಿನಿ ಎಷ್ಟೋ ಬಾರಿ ಕೂಡಿ, ಕುಳಿತು ಮಾತಾಡಿದ್ದೇವೆ."

" ನಿನ್ನೆ ಮಧ್ಯಾಹ್ನ ? "

" ನಿನ್ನೆಯೂ ಅಷ್ಟೇ."

" ಇಂದು ಮಧ್ಯಾಹ್ನ ನನಗೆ ವಿಷಯ ತಿಳಿದ ಕೂಡಲೆ ನಾನು ಮೋಹಿನಿಯನ್ನು ಕೇಳಿದರೆ ಆಕೆ ಯಾವ ಉತ್ತರವನ್ನೂ ಕೊಡಲಿಲ್ಲ. ' ಉತ್ತರ ಹೇಳುವುದಿಲ್ಲ ' ಎಂದು ಯಾಕೆ ಹೇಳಿದಳು ಆಕೆ ? "

" ಹಾಗೆ ಹೇಳಿದ್ದರೆ ಅದು ತೀರ ತಪ್ಪು ! ಎಂಥ ಭಯಂಕರ ಸಂಶಯಕ್ಕೆ ತಾನು ಎಡೆಕೊಡುತ್ತಿದ್ದೇನೆಂಬುದರ ಕಲ್ಪನೆಯಿಲ್ಲದೆ ಹಾಗೆ ಹೇಳಿರಬಹುದು."

" ಮೊನ್ನೆ ನೀವು ರೈಲಿನಲ್ಲಿ ಭೆಟ್ಟಿಯಾದಾಗ ಯಾವ ವಿಷಯವನ್ನೂ ಹೇಳಲಿಲ್ಲ ! "

" ಏನೆಂದು ಹೇಳಬೇಕಾಗಿತ್ತು, ಹೇಳುವಂಥದೇನೂ ಇಲ್ಲದಾಗ ? ಅಲ್ಲದೆ ದಾದರಿನಲ್ಲಿ ಆಕೆ ಸಿಕ್ಕಿದ್ದರು ಎಂದು ಹೇಳಿಯೂ ಇದ್ದೆ ! "

ತಾವಿಬ್ಬರೂ ಹೊರಡುವಾಗ ವಸಂತನೇ ಆ ಮಾತನ್ನು ಹೇಳಿದ್ದನೆಂಬುದನ್ನು ನೆನೆದು ವಸಂತನ ಮಾತಿನಲ್ಲಿ ಮೊದಲಿಗಿಂತ ಹೆಚ್ಚು ವಿಶ್ವಾಸವಿಡಬಹುದೆನಿಸಿತು ಆನಂದನಿಗೆ. ವಸಂತನೆಂದ :

" ಇಂದು ಮಧ್ಯಾಹ್ನ ಏನು ನಡೆಯಿತು ? "

" ನಿನ್ನೆಯ ವೃತ್ತ ಸಂಪೂರ್ಣವಾಗಿ ನನಗೆ ತಿಳಿದುಬಂದಮೇಲೆ ವಿಷಯವನ್ನು ತಿಳಿಯೋಣವೆಂದು ಆಕೆಯನ್ನು ಕೇಳಿದೆ. ನನಗೂ ಸಿಟ್ಟು ತಡೆಯುವುದಾಗಲಿಲ್ಲ ; ಆಕೆ ಏನನ್ನೂ ಹೇಳಲಿಲ್ಲ ! "

" ಆಮೇಲೆ ? "

" ಹೇಳುವುದಿಲ್ಲವಾದರೆ ನನ್ನಲ್ಲಿರಕೂಡದೆಂದು ಹೇಳಿದೆ, ಸಿಟ್ಟಿನ ಭರದಲ್ಲಿ. ಆಕೆ ಹೊರಟುಹೋದಳು."

" ಎಲ್ಲಿಗೆ ? "

" ಎಲ್ಲಿಗೇನು ? ಇಲ್ಲಿಯೇ ಬಂದಿರಬೇಕೆಂದೇ ಇಲ್ಲಿಗೆ ಬಂದಿದ್ದೇನೆ."

" ಅನ್ಯಾಯ ಮಾಡಿದಿರಿ, ಆನಂದರಾವ್ !....ಅಳಿಸಲಾರದ ಅನ್ಯಾಯ ಮಾಡಿದಿರಿ." ಮಾತು ವಸಂತನ ಹೃದಯದಾಳದಿಂದ ಬರುತ್ತಿತ್ತೆಂಬುದನ್ನು ಆತನ ದನಿಯಲ್ಲಿಯ ನಡುಕದ ಮೇಲಿಂದಲೇ ತಿಳಿಯಬಹುದಿತ್ತು. ಆ ಮಾತು ಆನಂದನ ಮನಸ್ಸಿನ ಮೇಲೆಯೂ ತನ್ನ ಪರಿಣಾಮವನ್ನು ಮಾಡದಿರಲಿಲ್ಲ. ವಸಂತ ಮತ್ತೆ ಹೇಳಿದ :

" ಅನ್ಯಾಯ ಮಾಡಿದಿರಿ...." ಎಂದು.

" ನನಗೆ ಬೇರೆ ಮಾರ್ಗವೇ ಇರಲಿಲ್ಲ. ಎಷ್ಟೆಂದು ತಡೆಯುವುದು ? "

" ನೀವು ದುಡುಕಬಾರದಾಗಿತ್ತು ! "

" ಇದನ್ನು ಹೇಳುವುದು ಸುಲಭ. ನನ್ನ ಕಿವಿಗೆ ಬಂದ ಸಮಾಚಾರ ಕೇಳಿದ ಮೇಲೆ ಇನ್ನಾರಾದರೂ ಇದ್ದರೆ ಅಲ್ಲಿಯೇ ಆಕೆಯ ಜೀವ ತೆಗೆದು ಕೊಳ್ಳುತ್ತಿದ್ದರು."

" ಏನದು ಅಂಥಾದ್ದು ನಿಮ್ಮ ಕಿವಿಗೆ ಬಂದದ್ದು ? "

" ನಿನ್ನೆ ಮಧ್ಯಾಹ್ನ ನೀವಿಬ್ಬರೂ ಸೇರಿ ಊಟ ಮಾಡಿದಿರಿ, ಊಟವಾದ ಮೇಲೆ ಹರಟೆಯಾಯಿತು, ಆಮೇಲೆ ಸಮುದ್ರದ ದಂಡೆಯ ಮೇಲೆ ಮತ್ತೆ ಕುಳಿತಿದ್ದಿರಿ....ಅಲ್ಲದೆ, ಇದೆಲ್ಲ ನಡೆದದ್ದು ಮೊದಲ ಸಲವೂ ಅಲ್ಲ...."

" ಆನಂದರಾವ್, ನೀವು ಇಷ್ಟು ವಿಶ್ವಾಸದಿಂದ ಮಾತನಾಡುತ್ತಿದ್ದುದಕ್ಕೆ ನನಗೆ ನಿಜವಾಗಿಯೂ ಸಂತೋಷ. ನಿಮಗೆ ' ಆಭಾರಿ ' ನಾನು. ನಿಮ್ಮ ಮುಂದೆ ಇಂದಿಲ್ಲ ನಾಳೆ ಈ ವಿಷಯವನ್ನು ನಾನು ಸವಿಸ್ತಾರವಾಗಿ ಮಾತನಾಡ ಬೇಕೆನ್ನುತ್ತಲೇ ಇದ್ದೆ. ಮೊನ್ನೆ ನೀವು ಭೆಟ್ಟಿಯಾದಾಗ ನನ್ನ ಮನಸ್ಸನ್ನು ಸ್ವಲ್ಪ ಮಾತ್ರ ಬಿಚ್ಚಿ ತೋರಿಸಿದೆ...."

ಆನಂದ ಸುಮ್ಮನೆ ಇದ್ದ. ವಸಂತ ಮತ್ತೆ ಹೇಳತೊಡಗಿದ :

" ಈ ವಿಷಯದಲ್ಲಿ ನಾನು ಬಾಯಿ ಹಾಕಬಾರದಿತ್ತು, ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ಅದು ಅನಿವಾರ್ಯವಾಯಿತು. ಮೋರೆಯ ಮುಂದೆ ವಿಶ್ವಾಸದಿಂದ ಮಾತನಾಡಿ ಬೆನ್ನ ಹಿಂದೆ ಇನ್ನೊಬ್ಬರ ಬದುಕನ್ನು ಹಾಳುಮಾಡಬೇಕೆನ್ನುವಷ್ಟು ಕೀಳು ಮನಸ್ಸು ಸುದೈವದಿಂದ ನನ್ನದಾಗಿಲ್ಲ."

" ನಿಮ್ಮ ಮಾತು ಒಪ್ಪುತ್ತೇನೆ, ವಸಂತರಾವ್....ಆದರೆ ಸಂಶಯಕ್ಕೆ ಬೇಕಾದಷ್ಟು ಆಸ್ಪದವಾಗಿದೆಯಲ್ಲ ? "

" ಆ ಸಂಶಯವೇ ಇಂದು ನಿಮ್ಮ ಸುಖವನ್ನು ಹಾಳುಮಾಡಿದೆ. ನಿಮ್ಮ ಸುಖ ಹಾಳಾಗಬಾರದೆಂದು ನಾನು ಯತ್ನಿಸಿದೆ. ಕೊನೆಗೆ, ನನಗೆ ಇದರಲ್ಲಿ ಅಪವಾದ ಬರುವಂತಾಯಿತು...."

ವಸಂತ ಸುಮ್ಮನಾದ. ನಿಜವಾಗಿಯೂ ಆತನ ಹೃದಯ ತುಂಬಿಬಂದಿತ್ತು. ಮೋಹಿನಿಗೆ ಈ ಗತಿ ತಂದವನು ತಾನೇ ಅಲ್ಲವೇ ಎಂದುಕೊಳ್ಳುತ್ತಿದ್ದ.

ಅವಳಿಗೆ ಸುಖವಾಗಲೆಂದು ಬಯಸಿ ಮಾಡಿದ ಯತ್ನ ಅವಳಿಗೆ ದುಃಖವನ್ನು ತಂದೊಡ್ಡಿತು ಎಂಬುದನ್ನು ನೆನೆದಾಗ, ಸಮಾಜ ಜೀವನದಲ್ಲಿಯ ಪರಿಸ್ಥಿತಿ ವಿಪರ್ಯಾಸ ಹೊಂದಿ ವ್ಯಕ್ತಿಯನ್ನು ಹೇಗೆ ಹಾಳುಮಾಡಬಹುದೆಂಬುದರ ಅರಿವೂ ಬಂದುಹೋಯಿತು. ಆನಂದನಂದ :

" ಹತ್ತು ಬಾರಿ ನೋಡಿದ್ದೇನೆ, ವಸಂತರಾವ್... ಪ್ರತಿ ಸಾರಿಯೂ ಒಂದಿಲ್ಲೊಂದು ರೀತಿಯಲ್ಲಿ ಸಂಶಯಕ್ಕೆ ಆಸ್ಪದ. ಕೇಳಿದರೆ ಸಮರ್ಪಕ ಉತ್ತರವಿಲ್ಲ."

" ಮೋಹಿನಿಯ ಯಾವ ನಡೆಯೂ ಸಂಶಯಕ್ಕೆ ಆಸ್ಪದ ಕೊಟ್ಟಿರಬಹುದು.. ಅದಕ್ಕೆ ಕಾರಣ ನಿಮ್ಮ ಕಲುಷಿತವಾದ ಮನಸ್ಸು! ಆಕೆಯ ಸ್ವಭಾವವನ್ನು ಒಂದೆರಡು ಸಲದ ಮಾತಿನಲ್ಲಿಯೇ ನಾನು ತಿಳಿದಿದ್ದೇನೆ. ಪ್ರತಿ ಸಾರೆಯೂ ಸಂಶಯಿತರಾಗಿಯೇ ಪ್ರಶ್ನೆ ಕೇಳಿದರೆ ಯಾವ ಮನುಷ್ಯನೂ ಸರಿಯಾದ ಉತ್ತರವನ್ನು ಹೇಳುವುದು ಸಾಧ್ಯವಿಲ್ಲ. ಆ ಪ್ರಶ್ನೆ ಯಾವಾಗಲೂ ಆತ್ಮಗೌರವಕ್ಕೆ ಏಟು ಕೊಡುವಂಥದು ! "

" ಹಾಗಾದರೆ ನಾನು ಆಕೆಯನ್ನು ಯಾವ ಮಾತನ್ನೂ ಕೇಳಬಾರದಾಗಿತ್ತೆ ? "

" ಕೇಳಬಹುದಾಗಿತ್ತು. ಆದರೆ ನೀವು ಸಂಶಯಗೊಂಡಿದ್ದೀರಿ ಎಂಬುದನ್ನು ತಿಳಿಯಗೊಡದೆ ಕೇಳಬಹುದಾಗಿತ್ತು. ಅಲ್ಲದೆ, ಕೇಳಬೇಕಾದ ವಿಷಯವಾದರೂ ನೀವು ಕಣ್ಣಾರೆ ಕಂಡ ವಿಷಯವಿದ್ದರೆ ಮಾತ್ರ ಕೇಳಬಹುದಾಗಿತ್ತು. ನೀವು ನನ್ನಲ್ಲಿ ವಿಶ್ವಾಸವಿಡಿರಿ, ಆನಂದರಾವ್....ನಿಮ್ಮ ತೊಡಕು ನನಗೆ ಸಂಪೂರ್ಣವಾಗಿ ತಿಳಿದಿದೆ....ನಿಮ್ಮ ಸಂಶಯ—ಸಂಪೂರ್ಣ ನಿರಪರಾಧಿಯಾದ ಮೋಹಿನಿಯನ್ನು ಇಂದು ಹಾಳುಮಾಡಿತು...."

ವಸಂತನ ಮಾತಿನ ಬಗೆಯನ್ನು ನೋಡಿ ಆನಂದನಿಗೆ ಸಂಪೂರ್ಣ ವಿಶ್ವಾಸವಾಗಿತ್ತು. ಪರಿಸ್ಥಿತಿಯ ಅರ್ಥವನ್ನು ಬೇರೆಯಾಗಿ ಮಾಡಿ ತೋರಿಸುತ್ತಿದ್ದುದು ವಸಂತನ ಮಾತುಗಾರಿಕೆಯಲ್ಲ. ನಿಜವಾದ ಸ್ಥಿತಿಯೇ ಹಾಗಿರಬಹುದು ಎಂಬ ಮನವರಿಕೆ ಬಂದಾಗಲಂತೂ ಆನಂದನ ಹೃದಯವನ್ನು ಯಾವುದೋ ದುಃಖ ಆವರಿಸುತ್ತಿದ್ದಂತಿತ್ತು. ಭಾಸ್ಕರನನ್ನು ಸೂಕ್ಷ್ಮವಾಗಿ ನೋಡಿ ವಸಂತನೆಂದ :

" ನಿಮಗೆ ಒಂದೆರಡು ಮಾತುಗಳನ್ನು ಕೇಳಲಾ ! ಆನಂದರಾವ್ ?—"

" ಆಗಬಹುದು."

" ನಿನ್ನೆ ನಾವಿಬ್ಬರೂ ಕೂಡಿ ಅಡ್ಡಾಡಿದ್ದನ್ನು ನೀವೇ ನೋಡಿದ್ದೀರಾ ? "

" ಇಲ್ಲ ! "

" ಯಾರು ಹೇಳಿದರು ? "

" ಭಾಸ್ಕರ ! "

ಭಾಸ್ಕರ ಕುರ್ಚಿಯಲ್ಲಿ ಅತ್ತಿತ್ತ ಅಸ್ವಸ್ಥನಂತೆ ಮಿಸುಕಾಡುತ್ತಿದ್ದ. ಆತನಿಗೆ ಗಾಬರಿಯಾಗಿತ್ತು. ಮುಖ ಕಂಗೆಡುತ್ತಿತ್ತು.

" ನಾವು ದಾದರಿನ ನಿಲ್ದಾಣದ ಹತ್ತಿರ ಮಾತನಾಡುತ್ತ ನಿಂತುದನ್ನು ಯಾರು ಹೇಳಿದರು ? "

" ಅವನೇ ಹೇಳಿದ—ಭಾಸ್ಕರ...."

" ಅದನ್ನು ಹೇಳುವಾಗ ನನ್ನ ಹೆಸರನ್ನು ಹೇಳಲಿಲ್ಲ ನಿಮ್ಮ ಮುಂದೆ, ಅಲ್ಲವೆ ? "

" ಹೌದು, ಗುರುತು ಸಿಕ್ಕಲಿಲ್ಲವಂತೆ...."

" ಇದು ಸಾಧ್ಯವೆ, ಆನಂದರಾವ್ ? ನಾವಿಬ್ಬರೂ ಮಾತನಾಡುತ್ತ ನಿಂತಿದ್ದು ನಿಲ್ದಾಣದ ಎದುರಿನಲ್ಲಿ, ಬೆಳಕಿನಲ್ಲಿ. ಆಕೆಯ ಗುರುತು ಸಿಕ್ಕಿತು.... ನನ್ನದು ಸಿಗಲಿಲ್ಲ...ಆಶ್ಚರ್ಯ! ನನ್ನನ್ನು ಮೊದಲು ಬಾರಿಯಲ್ಲ, ಅವರು ನೋಡಿದ್ದು .. "

ಭಾಸ್ಕರ ಇದ್ದಬಿದ್ದ ಧೈರ್ಯವನ್ನು ಕಲೆಹಾಕಿ ವಸಂತನ ಬಾಯಿ ಬಡಿಯಬೇಕೆಂದು ಕೇಳಿದ:

" ನೀವು ಅನ್ನುವುದಾದರೂ ಏನು ? "

" ಎಲ್ಲವನ್ನೂ ಹೇಳುತ್ತೇನೆ; ಸ್ವಲ್ಪ ನಿಧಾನಿಸಿ.. ನಾನು ಕೇಳುವ ಮಾತಿಗೆ ಸರಳವಾದ ಉತ್ತರವನ್ನು ನೀವು ಹೇಳುವಿರಾ ? "

" ನಿಮ್ಮ ಕೂಡ ಮಾತನಾಡಬೇಕಾಗಿಲ್ಲ ನನಗೆ !.. ."

" ಇಷ್ಟು ಸಹಜವಾಗಿ ಪಾರಾಗಲಾರಿರಿ, ಮಿಸ್ಟರ್ ಭಾಸ್ಕರರಾವ್.... ನಿಮ್ಮ ಸೋಗನ್ನು ಇಂದು ಹರಿದು ಸುಟ್ಟು ನಿಮ್ಮ ಆಟವನ್ನು ಹೊರಗೆಡವ ಬೇಕಾಗಿದೆ. ನಾನು ಕೇಳಿದ ಪ್ರಶ್ನೆಗೆ ನೀವು ಉತ್ತರ ಹೇಳಲೇಬೇಕು."

ಭಾಸ್ಕರ ಕುಳಿತಲ್ಲಿಂದಲೇ ಗಡಿಬಿಡಿ ಮಾಡತೊಡಗಿದ. ಆನಂದನಿಗೆ

ಏನೂ ತೋಚದಾಗಿತ್ತು. ಆನಂದ ಏನೋ ಮಾತನಾಡಬೇಕೆಂದಿದ್ದ. ಆದರೆ ನಡುವೆಯೇ ವಸಂತ ಭಾಸ್ಕರನನ್ನು ಕೇಳಿದ :

" ಹೋದ ಬುಧವಾರ ನೀವು ಪುಣೆಗೆ ಯಾತಕ್ಕೆ ಹೋಗಿದ್ದಿರಿ ? "

ಭಾಸ್ಕರ ಅವಾಕ್ಕಾದ! ನಾಲಗೆ ತಡವರಿಸತೊಡಗಿತು :

" ಹೋದ ಬುಧವಾರ? ನಾನೆಲ್ಲಿಯೂ ಹೋಗಿರಲಿಲ್ಲ "

" ಸುಳ್ಳು ಹೇಳಬೇಡಿರಿ. ನೀವು ಹೋದ ಬುಧವಾರ ಪುಣೆಗೆ ಹೋಗಿದ್ದಿರಿ."

" ಓ! ಹಿಂದಿನ ವಾರವೇ ? " ಎಂದು ನೆನಪು ತಂದುಕೊಂಡವನಂತೆ ನಟಿಸಿ ಹೇಳಿದ : " ಹೌದು, ಹೋಗಿದ್ದೆ. ನಮ್ಮ ಶಾಲೆಯ ಕೆಲಸಕ್ಕಾಗಿ ಹೋಗಿದ್ದೆ."

" ಇರಬಹುದು, ಮೋಹಿನಿಯ ತಾಯಿಯ ಮನೆಗೆ ಹೋಗಿದ್ದಿರಲ್ಲವೆ ? "

" ಹೌದು."

" ಯಾತಕ್ಕೆ ? "

" ಯಾತಕ್ಕೇನು ? ಸುಮ್ಮನೆ ನೋಡಿಕೊಂಡು ಬರೋಣವೆಂದು ಹೋಗಿದ್ದೆ."

" ಯಾರನ್ನು ? "

" ಮೋಹಿನಿಯನ್ನು , ಅವರ ಮನೆಯವರನ್ನು ! "

" ತಾಯಿಯವರು ಸಿಕ್ಕರೆ ? "

" ಇಲ್ಲ. ಅವರು ಮನೆಯಲ್ಲಿರಲಿಲ್ಲ ! "

" ಕರೆದು ತರುತ್ತೇನೆಂದು ಮೋಹಿನಿ ಹೇಳಿದರೂ ನೀವು ಅವಸರವಸರವಾಗಿ ಯಾಕೆ ಹೊರಟುಬಿಟ್ಟಿರಿ ?...."

ಭಾಸ್ಕರನಿಗೆ ತಡೆಯದಾಯಿತು. ಇನ್ನು ತಾನು ಪಾರಾಗುವುದು ಸಾಧ್ಯವಿಲ್ಲವೆಂಬ ಮನವರಿಕೆಯೂ ಆಗಿದ್ದರಿಂದ ಸಿಟ್ಟಿನ ಸೋಗು ತೆಗೆದು ಕೇಳಿದ :

" ನನ್ನನ್ನು ನೀವು ಪರೀಕ್ಷೆ ಮಾಡುವ ಹಾಗಿದೆಯಲ್ಲ ? ನಿಮ್ಮ ತಪ್ಪನ್ನು ಮುಚ್ಚಿಕೊಳ್ಳಲಿಕ್ಕೆ ನನ್ನ ಮೇಲೆ ಏನು ತಪ್ಪು ಹೊರಿಸಬೇಕೆಂದಿದ್ದೀರಿ ? "

" ಯಾರ ಮೇಲೆ ಯಾರೂ ಏನನ್ನೂ ಹೊರಿಸಬೇಕಾಗಿಲ್ಲ. ನೀವು ಸಿಟ್ಟಿಗೇಳುವ ಕಾರಣವೂ ಇಲ್ಲ. ಇನ್ನೊಂದು ಪ್ರಶ್ನೆ, ಭಾಸ್ಕರರಾವ್...."

" ನಾನು ಏನನ್ನೂ ಹೇಳಲಿಕ್ಕೆ ಸಿದ್ಧನಿಲ್ಲ...."

" ನೀವು ಹೇಳಲೇಬೇಕು. ಯಾರ ಮನೆಯನ್ನು ಮುರಿಯಬೇಕೆಂದಿದ್ದೀರಿ ? ಇಂದು ನಿಮ್ಮ ತಮ್ಮನನ್ನು ಹಾಳುಮಾಡಿದ್ದೀರಿ. ಆ ಹೆಣ್ಣುಮಗಳನ್ನು ಬೀದಿಗೆ ತಳ್ಳಿದ್ದೀರಿ. ಮೇಲೆ, ನನ್ನ ಮೇಲೆ ಬಂದಿದ್ದೀರಲ್ಲವೆ? ಇಷ್ಟು ಸಹಜವಾಗಿ ಪಾರಾಗುವುದು ಸಾಧ್ಯವಿಲ್ಲ ನೀವು ..You can't escape....You can't....ತಿಳಿಯಿತೆ ? ನೀವು ಪುಣೆಯಿಂದ ತಿರುಗಿ ಯಾವಾಗ ಬಂದಿರಿ ? "

" ಶುಕ್ರವಾರ ಬೆಳಗ್ಗೆ."

" ಆ ದಿನ ಬೆಳಗ್ಗೆ ಪುಣೆ ಸ್ಟೇಶನ್ನಿನಲ್ಲಿ ನೀವು ಮೋಹಿನಿಗಾಗಿ ಕಾಯುತ್ತಿದ್ದಿರೋ ಇಲ್ಲವೊ ? "

" ನಾನೇತಕ್ಕೆ ಕಾಯಲಿ ? ಆಕೆ ಮಧ್ಯಾಹ್ನ ಬರುತ್ತೇನೆಂದು ಹೇಳಿದ್ದಳು."

" ಹಾಗಾದರೆ ಮೋಹಿನಿ ಸ್ಟೇಶನ್ನಿಗೆ ಬರುವವರೆಗೂ ನೀವು ಟಿಕೆಟ್ಟನ್ನು ಯಾಕೆ ತೆಗೆದುಕೊಂಡಿರಲಿಲ್ಲ ? "

ಭಾಸ್ಕರನಿಗೆ ಉತ್ತರವಿಲ್ಲದಾಯಿತು. ಆನಂದ ದಿಗ್ಭ್ರಾಂತನಂತಿದ್ದ. ವಸಂತ ಹೇಳಿದ : " ನನಗೆಲ್ಲವೂ ಗೊತ್ತಿದೆ, ಮಿಸ್ಟರ್ ಭಾಸ್ಕರರಾವ್— I know everything. ಗಾಡಿಯಲ್ಲಿ ನೀವು ಮೋಹಿನಿಯನ್ನು ಏನು ಕೇಳಿದಿರಿ ? "

" ಬೇಕಾದುದನ್ನು ಆಪಾದಿಸಬೇಡಿರಿ, ವಸಂತರಾವ್—"

" ಬೇಕಾದುದನ್ನಲ್ಲ, ನಿಜವಾದುದನ್ನು. ಏನು ಕೇಳಿದಿರಿ ? "

" ನಾನೇನು ಕೇಳುತ್ತೇನೆ ? ಆಕೆ ಲೇಡೀಸ್ ಕಂಪಾರ್ಟ್‌ಮೆಂಟ್ನಲ್ಲಿದ್ದಳು."

" ಹೌದು ! ನನಗೆ ಗೊತ್ತಿದೆ ! ನೀವು ಅಲ್ಲಿಗೇ ಚಹದ ಟ್ರೇ ತೆಗೆದುಕೊಂಡು ದಯಮಾಡಿಸಿದ್ದಿರಿ.... ಮೊದಲು ಬೇಡಿಕೊಂಡಿರಿ. ಆಮೇಲೆ ಗದರಿಸಿ ಮಾತನಾಡಿದಿರಿ. ಅದು ಸಾಧ್ಯವಾಗದಿದ್ದಾಗ ಅದಕ್ಕಾಗಿ ಸೇಡು ತೆಗೆದುಕೊಳ್ಳುವೆನೆಂದೂ ಹೇಳಿದಿರಿ."

" ಬಾಯಿಗೆ ಬಂದಂತೆ ಮಾತಾಡಬೇಡಿರಿ, ವಸಂತರಾವ್—"

" ನಾನು ನೀವಲ್ಲ. ಇದು ನೋಡಿರಿ, ಆನಂದರಾವ್. ಮೋಹಿನಿಯ ಮೇಲಿನ ನಿಮ್ಮ ಎಲ್ಲ ಸಂಶಯಕ್ಕೂ ಈ ' ಸದ್ಗೃಹಸ್ಥರು ' ಕಾರಣ. ಸಾಕಷ್ಟು ಮಾತು ಅವರ ಬಾಯಿಂದಲೇ ಹೇಳಿಸಿದ್ದೇನೆ. ನಿಮ್ಮ ಇಬ್ಬರ ಸುಖ ಹಾಳಾದದ್ದು ಈ ಸದ್ಗೃಹಸ್ಥನ ಸಭ್ಯತೆಯಿಂದ ! ಈತ ಈಗ ಒಂದು ವರ್ಷದಿಂದ

ಆಕೆಯ ಬೆನ್ನ ಹಿಂದೆ ಇದ್ದಾನೆ. ನಾನು ಈ ಮಾತನ್ನು ಹೇಳಬಾರದು. ನೀವು ನನ್ನನ್ನು ಕ್ಷಮಿಸಬೇಕು. ಎಷ್ಟಾದರೂ ನಿಮಗೆ ಅಣ್ಣ ಅವರು."

ಆನಂದನಿಗೆ ಎಚ್ಚರ ತಪ್ಪಿದಂತಿತ್ತು. ಹಲ್ಲು ಕಡಿಯುತ್ತ,

"ಭಾಸ್ಕರ್—" ಎಂದ.

"ಸಿಟ್ಟಿಗೆ ಎದ್ದು ಪ್ರಯೋಜನವಿಲ್ಲ, ಆನಂದರಾವ್....ನೀವು ಇನ್ನೂ ಯೋಚಿಸಬಹುದು."

"ಇಷ್ಟೆಲ್ಲವನ್ನು ನಿಮ್ಮ ಮುಂದೆ ಹೇಳುವಷ್ಟು ಸಲಿಗೆಯಲ್ಲವೆ ನಿಮ್ಮದೂ ಆಕೆಯದು?" ಎಂದು ಭಾಸ್ಕರ ವ್ಯಂಗ್ಯವಾಗಿ ಕೇಳಿದ—ಕೊನೆಯ ಯತ್ನ ವೆಂದು. ಆದರೆ ವಸಂತನ ವಿರುದ್ಧವಾಗಿ ವಾದ ಹೂಡುವುದು ಅಸಾಧ್ಯವಾಗಿ ಹೋಗಿತ್ತು.

"ಹೌದು, ಮಿಸ್ಟರ್. ಅಷ್ಟು ಸಲಿಗೆಯಿದೆ. ಆದರೆ ಮಾತನಾಡುವಷ್ಟು ಸಲಿಗೆಯಿದ್ದರೆ ಮೈ ಮುಟ್ಟುವ ಸಲಿಗೆ ಇರಬೇಕಾಗಿಲ್ಲ. ಎಲ್ಲರೂ ನೀವು ನೋಡುವ ದೃಷ್ಟಿಯಿಂದಲೇ ಹೆಣ್ಣನ್ನು ನೋಡುವುದಿಲ್ಲ, ನೋಡಬೇಕಾಗಿಯೂ ಇಲ್ಲ...."

ತೀರ ಕಡೆಯದಾಗಿ ಭಾಸ್ಕರ ಮೋರೆ ತಪ್ಪಿಸುವ ಬೇರೆ ಹಂಚಿಕೆಯನ್ನು ಹುಡುಕುತ್ತ ಹೇಳಿದ:

"ನಾನೂ ನೋಡಿದ್ದೇನೆ, ಇಂಥ ದೊಡ್ಡ ದೊಡ್ಡ ಮಾತುಗಳನ್ನಾಡಿ ಮಂದಿಯ ಮನೆ ಮುರಿಯುವವರನ್ನು. ನಡೆಯೋ ಆನಂದಾ....ನಡೆ. ನಾನೆಲ್ಲ ವನ್ನೂ ಹೇಳುತ್ತೇನೆ. ಇವರ ಹತ್ತಿರ ಮಾತನಾಡುತ್ತ ಕುಳಿತರೆ ಮುಗಿದೇ ಹೋಯಿತು....ಕೇಸು ಹಾಕದ ಹೊರತು ಇವರು ಹಾದಿಗೆ ಬರುವಂತಿಲ್ಲ...."

ಭಾಸ್ಕರನ ಮಾತಿನ ಕಡೆಗೆ ಆನಂದನ ಲಕ್ಷ್ಯವಿದ್ದಂತೆ ಕಾಣಲಿಲ್ಲ. ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಕುಳಿತಿದ್ದ. ಮನಸ್ಸು ಕಿಂಕರ್ತವ್ಯಮೂಢವಾಗಿತ್ತು. ಭಾಸ್ಕರನ ಮಾತಿನ ಈ ಸೋಗು ವಸಂತನಿಗೆ ತಿಳಿಯದಿರಲಿಲ್ಲ. ಅದು ಅಲ್ಲಿಂದ ಪಲಾಯನಕ್ಕೊಂದು ದಾರಿಯಾಗಿತ್ತು, ಅಷ್ಟೆ. ವಸಂತನಂದ:

"ನನ್ನ ಮೇಲೆ ಕೇಸು ಹಾಕಬಹುದು, ಭಾಸ್ಕರರಾವ್. ಆದರೆ ನೀವು ಹಾಕಲಾರಿರಿ. ಆನಂದರಾವ್, ನಿಮಗೆ ಕೊಡಹೇಳುತ್ತೇನೆ. ಹೇಳುವುದನ್ನು

ಎಲ್ಲವನ್ನೂ ಮನಬಿಚ್ಚಿ ಹೇಳಿದ್ದೇನೆ. ನಾನು ಎಲ್ಲಿ ಹೇಳಿದರೂ ಇಷ್ಟೇ ಹೇಳಬೇಕಾದದ್ದು. ನಿಮಗೆ ಸಂಶಯ ಇನ್ನೂ ಉಳಿದಿದ್ದರೆ ಬೇಕಾದಲ್ಲಿ ವಿಚಾರಣೆ ಮಾಡಬಹುದು. ಬೇಕಾದರೆ ಕೇಸನ್ನೂ ಹಾಕಬಹುದು. ಆದರೆ ಒಂದು ಮಾತನ್ನು ಹೇಳದಿರಲಾರೆ. ಯಾವ ಕೋರ್ಟೂ ಈಗ ನಡೆದ ಅನ್ಯಾಯವನ್ನು ಸರಿಪಡಿಸುವಂತಿಲ್ಲ. ಇನ್ನು ಕೋರ್ಟಿಗೆ ಹೋದರೆ, ಆ ನೋವಿನ ಮೇಲೆ ಬರೆ ಕೊಟ್ಟಂತೆ. ನೀವು ಕೋರ್ಟಿನಲ್ಲಿ 'ನನ್ನ ಹೆಂಡತಿ ದಾರಿ ತಪ್ಪಿದವಳು' ಎಂದು ಸಾರಬೇಕು. ಅದು ನಿಮಗೆ ಅವಮಾನ, ನನಗೆ ಅನ್ಯಾಯ, ಮೋಹಿನಿಗೆ ಸಾಯ ಹೊಡೆಯುವ ಪೆಟ್ಟು! ಇದಕ್ಕಿಂತ ಹೆಚ್ಚಿನದಿನ್ನೇನೂ ಆಗಬೇಕಿಲ್ಲ.... ನಿಮಗೆ ತಿಳಿದಂತೆ ನೀವು ನಡೆಯಬಹುದು...."

ವಸಂತ ಸುಮ್ಮನಾದ. ಎಲ್ಲರಿಗೂ ಬಾಯಿ ಕಟ್ಟಿದಂತಾಗಿತ್ತು. ಭಾಸ್ಕರ ವಸಂತನ ಮುಖ ತಪ್ಪಿಸುವುದರಲ್ಲಿಯೇ ಒದ್ದಾಡುತ್ತಿದ್ದ. ಸುತ್ತಲಿನ ಶಾಂತತೆ ಕಿರ್ರೆನ್ನುತ್ತಿತ್ತು. ಐದು ನಿಮಿಷಗಳ ನೀರವತೆಯನ್ನು ತಡೆಯದಾಗಿ ಕೊನೆಗೆ ವಸಂತನೇ ಹೇಳಿದ:

"ನೀವು ನನ್ನ ಮೇಲೆ ವಿಶ್ವಾಸ ಇಡಿರಿ ಎಂದು ನಾನು ಹೇಳಲೇಬಾರದು. ನೀವು ನನ್ನ ವಿಷಯದಲ್ಲಿ ಬೇಕಾದುದನ್ನು ಬೇಕಾದಲ್ಲಿ ಕೇಳಿಕೊಳ್ಳಿರಿ. ಆದರೆ ಒಂದು ಮಾತನ್ನು ನಾನಿಲ್ಲಿಯೇ ಇಡುತ್ತೇನೆ, ದಯಮಾಡಿ ಮನೆಯನ್ನೆಲ್ಲ ಹುಡುಕಿಕೊಂಡು ಹೋಗಿರಿ. ..ಬೇಕಾದಲ್ಲಿ ವಿಚಾರಿಸಿರಿ...."

ಆನಂದನಿಗೆ ತಡೆಯದಾಗಿತ್ತು. ದುಃಖ ಒತ್ತರಿಸಿ ಬರುತ್ತಿತ್ತು. ಗದ್ಗದಿತನಾಗಿ ಹೇಳಿದ:

"ವಸಂತರಾವ್, ಅನ್ಯಾಯ ಮಾಡಿದೆ ನಿಮಗೆ ನಾನು. ನೀವು ನನ್ನನ್ನು ಧಾರಾಳವಾಗಿ ಕ್ಷಮಿಸಬೇಕು...."

"ನನಗೆ ಅನ್ಯಾಯ ಮಾಡಿಲ್ಲ, ಮಾಡುವುದರಲ್ಲಿದ್ದಿರಿ. ಮೋಹಿನಿಗೆ ಅನ್ಯಾಯ ಮಾಡಿದ್ದೀರಿ....ನಿಮಗೆ ಅಷ್ಟೊಂದು ಸಂಶಯ ಬಂದಿದ್ದರೆ ಮೊದಲು ನೀವು ನನ್ನ ಕಡೆಗೇ ಬರಬಾರದಾಗಿತ್ತೇ?"

"ತಪ್ಪಿದೆ. ವಸಂತರಾವ್....ಸಂಪೂರ್ಣ ತಪ್ಪಿದೆ...."

"ನನ್ನ ಕಡೆಗೆ ಬಂದಿದ್ದರೆ ಎಲ್ಲವನ್ನೂ ಹೇಳುತ್ತಿದ್ದೆ. ನಾಳೆ ನಾಡಿದ್ದು ಅಷ್ಟರಲ್ಲಿ ನಿಮ್ಮಲ್ಲಿಗೆ ನಾನೇ ಬರುವವನಿದ್ದೆ...."

ಎಲ್ಲವೂ ತನ್ನ ಕೈಮೀರಿತೆಂಬಂತೆ ಭಾಸ್ಕರ ಸುಮ್ಮನಿದ್ದ. ಆದರೆ ಅಲ್ಲಿಯೇ ಉಳಿಯುವುದೂ ಅಸಾಧ್ಯವಾಗಿತ್ತು. ತಾನೊಬ್ಬನೇ ಹೊರಡುವುದೂ ಅಶಕ್ಯ ವಾಗಿತ್ತು.

" ಇದೆಲ್ಲವೂ ನನಗೆ ಗೊತ್ತಿದೆ ನಡೆಯೋ, ಆನಂದಾ... ನಡೆ ಮೊದಲು ಇಲ್ಲಿಂದ. ನೋಡೋಣ. ತಮ್ಮ ತಪ್ಪನ್ನು ಮುಚ್ಚಿಡಲಿಕ್ಕೆ ದೊಡ್ಡದೊಂದು ಕತೆ....ನಡೆ ಇಲ್ಲಿಂದ. ಇಲ್ಲಿ ಕುಳಿತಾದರೂ ಏನು ? ಮೊದಲು ಆಕೆ ಏನಾದಳು ಇದನ್ನಾದರೂ ನೋಡಬೇಕು "

ಎಂದು ಅರ್ಥಮರ್ಥ ಆನಂದನನ್ನು ಎಳೆದು ಎಬ್ಬಿಸಿಯೇ ಬಿಟ್ಟ. ಆನಂದ ನಿಗೆ ದುಃಖ, ಪರಿತಾಪ, ಪಶ್ಚಾತ್ತಾಪ—ವಸಂತನಿಗೆ ಮುಖವನ್ನು ಕೂಡ ತೋರಿಸದಂತೆ ಮಾಡಿದ್ದವು. ಎದ್ದು ನಿಂತು ಹೇಳಿದ :

" ನಾನು ಇನ್ನೊಮ್ಮೆ ನಿಮ್ಮ ಹತ್ತಿರ ಬರುತ್ತೇನೆ, ವಸಂತರಾವ್...."

" ಬೇಕಾದಾಗ ಬನ್ನಿರಿ—ನನ್ನಿಂದ ಯಾವ ಸಹಾಯ ಸಾಧ್ಯ ಅದನ್ನು ಯಾವಾಗಲೂ ಮಾಡಲು ಸಿದ್ಧ. ನಿಮ್ಮನ್ನು ನೋಡಿ ನನಗೆ ದುಃಖವಾಗು ತ್ತಿದೆ, ಆನಂದರಾವ್—ನಾನು ನಿಮ್ಮಿಬ್ಬರನ್ನು ಸುಖಿಗಳನ್ನಾಗಿ ಮಾಡಲು ಶತಪ್ರಯತ್ನ ಮಾಡಿದೆ. ಆದರೆ ನನ್ನ ಪಾಲಿಗೆ ಸೋಲು ಬಂತು. ಯಾವುದನ್ನು ತಪ್ಪಿಸಬೇಕೆಂದು ಮಾಡಿದ್ದೆನೋ ಅದೇ ಕೊನೆಗೂ ನಡೆಯಿತು—ಇದು ನಮ್ಮ ಎಲ್ಲರ ದುರ್ದೈವ."

ಭಾಸ್ಕರ ಏನನ್ನೂ ಮಾತನಾಡದೆ ಆಗಲೇ ಹೊರಗಿನ ಬಾಗಿಲ ಹತ್ತಿರ ಹೋಗಿ ನಿಂತಿದ್ದ. ಆಗಲೇ ಎರಡು ಸಾರೆ " ಆನಂದಾ—" ಎಂದು ಕರೆದೂ ಆಗಿತ್ತು. ಆನಂದ ಹೊರಡುವಾಗ ಮತ್ತೆ ಹೇಳಿದ್ದ :

" ನಿಮ್ಮಿಂದ ನನಗೆ ತುಂಬ ಉಪಕಾರವಾಯಿತು—"

" ಉಪಕಾರವಾಗಲಿಲ್ಲ, ಆನಂದರಾವ್, ಆಗಲಿಲ್ಲ."

" ನಿಮ್ಮ ಸ್ನೇಹವಾದರೂ ನನಗೆ ಉಳಿಯಿತು ! "

" ದೊಡ್ಡ ದುಃಖದಲ್ಲಿ ತೀರ ಸಣ್ಣ ಸಮಾಧಾನ ಇದು! ನಿಮಗೆ ಇಂದು ಮೋಹಿನಿ ಇಲ್ಲದಾದಳು, ಅದರ ಮುಂದೆ ನನ್ನ ಸ್ನೇಹಕ್ಕೆ ಯಾವ ಬೆಲೆ ? "

ಆನಂದ ಸುಮ್ಮನಾಗಿದ್ದ. ವಸಂತನ ಹೃದಯದ ಔದಾರ್ಯವನ್ನು ನೆನೆಯುತ್ತ ಕತ್ತಲೆಯಲ್ಲಿ ಹೊರಬಿದ್ದ. ಬದಿಯಲ್ಲಿ ಭಾಸ್ಕರ ನಡೆಯುತ್ತಿದ್ದ.

ಏನಾದರೂ ಮಾಡಿ ಆನಂದನನ್ನು ಮಾತನಾಡಿಸಿ ಆತನ ಮನಸ್ಸನ್ನು ತಿರುಗಿಸ ಬೇಕೆಂಬ ಯತ್ನವನ್ನು ಮಾಡುತ್ತಿದ್ದ. ವಸಂತನ ವಿರುದ್ಧವಾಗಿ ಮಾತನಾಡಿಯೇ ಆಡುತ್ತಿದ್ದ. ಆದರೆ ಆನಂದ ಭಾಸ್ಕರನ ಯಾವ ಮಾತಿಗೂ ಲಕ್ಷ್ಯಕೊಡು ತ್ತಿರಲಿಲ್ಲ. ಕೇಳಿದ ಪ್ರಶ್ನೆಗಳಿಗೆ ಯಾವ ಉತ್ತರವನ್ನೂ ಹೇಳುತ್ತಿರಲಿಲ್ಲ. ಆನಂದನ ಸ್ಥಿತಿಯನ್ನು ನೆನೆದು ಭಾಸ್ಕರನಿಗೆ ಕೂಡ ಅನಿಸಿತು: 'ನಾನು ಇಷ್ಟು ದೂರ ಹೋಗಬಾರದಾಗಿತ್ತು' ಎಂದು. ಕತ್ತಲೆ ಪ್ರಪಂಚವನ್ನಾವರಿ ಸಿತ್ತು—ಆನಂದನ ಹೃದಯವನ್ನು ದುಃಖ ಆವರಿಸಿದ್ದಂತೆ. ಬೀದಿಯಲ್ಲಿಯ ದೀಪಗಳೂ ಆರಿಹೋಗಿದ್ದವು. ಆನಂದನಿಗೆ ಆಶಾಕಿರಣ ಎಲ್ಲಿಯೂ ಕಾಣಲಿಲ್ಲ. ತಾರೆಗಳು ಕಣ್ಣು ಚಿವುಟಿ ತಮ್ಮತಮ್ಮಲ್ಲಿಯೇ ನಕ್ಕು, ಆನಂದನನ್ನು ಅಣಕಿಸು ತ್ತಿರುವಂತಿದ್ದವು.

## ೧೮

ಮುಂದೆ ಐದಾರು ದಿನಗಳವರೆಗೂ ವಸಂತ ನಡೆದುದೆಲ್ಲವನ್ನೂ ನೆನೆದು ದುಃಖಕ್ಕೀಡಾಗುತ್ತಿದ್ದ. ಆನಂದ ಭಾಸ್ಕರ ಇವರಿಬ್ಬರು ಬಂದು ಹೋದ ಮರುದಿನವಂತೂ ವಸಂತ ಆಫೀಸಿಗೆ ಕೂಡ ಹೋಗಲಿಲ್ಲ. ಕೋಣೆ ಬಿಟ್ಟು ಕದಲಲಿಲ್ಲ. ಮೋಹಿನಿಯ ಈ ಎಲ್ಲ ದುಃಖಕ್ಕೆ ತಾನೇ ಕಾರಣನಾದಂತಾಗ ಲಿಲ್ಲವೇ ಎಂದು ಮನಸ್ಸು ಕೇಳುತ್ತಿತ್ತು. ಆದರೆ ತಾನು ಯಾವ ಅನ್ಯಾಯ ವನ್ನೂ ಬಗೆದಿರಲಿಲ್ಲ. ಸಾಧ್ಯವಾದರೆ ಆಕೆಗೆ ಒಳ್ಳೆಯದನ್ನೇ ಕೋರಿ ಆನಂದ ನೊಡನೆ ಆಕೆ ಸುಖಿಯಾಗಿರಬೇಕೆಂದಲ್ಲವೆ ತಾನು ಯತ್ನಿಸಿದ್ದು? ಬಗೆದದ್ದು ಒಂದು, ಬಂದದ್ದು ಇನ್ನೊಂದಾದರೆ ತಾನು ಮಾಡುವುದಾದರೂ ಏನು? ಎಂದು ಚಿಂತೆಗೊಳಗಾಗುತ್ತಿದ್ದ. ಆದರೆ ದೀರ್ಘಾಲೋಚನೆಯಲ್ಲಿದ್ದಾಗ ಒಮ್ಮೊಮ್ಮೆ ಅಂದುಕೊಳ್ಳುತ್ತಿದ್ದ: 'ಮೋಹಿನಿಯ ವಿಚಾರದಲ್ಲಿ ನಾನು ಯಾವ ಉದಾರ ಭಾವನೆಯನ್ನಿಟ್ಟುಕೊಂಡಿದ್ದರೂ ಅದು ಇತ್ತೀಚೆಯಾದರೂ ಯಾವುದೋ ಒಂದು ಸಲ್ಲದ ಆಸೆಯಿಂದ ದೂಷಿತವಾಗಹತ್ತಿರಲಿಲ್ಲವೆ?' ಎಂದು. ಆ ಆಸೆ ಒಂದು ಭಾವದ ಉನ್ಮತ್ತಾವಸ್ಥೆಯಾಗಿದ್ದಿರಬಹುದು; ಆದರೆ ಅದು ಕಲುಷಿತ ವಾಗಿದ್ದರಿಂದಲೇ ತನ್ನ ಯತ್ನ ಕೈಗೂಡದಿದ್ದಿರಬಹುದೇ ಎಂದೂ ಕೇಳಿಕೊಂಡು ತನ್ನಲ್ಲಿಯ ಸ್ಥೈರ್ಯದ ಅಭಾವಕ್ಕಾಗಿ ಕೊರಗುತ್ತಿದ್ದ. ಮೋಹಿನಿ ತನ್ನ ತಾಯ ಬಳಿ ಹೋಗಿರಬೇಕೆಂಬುದರಲ್ಲಿ ವಸಂತನಿಗೆ ಯಾವ ಸಂಶಯವೂ ಇರಲಿಲ್ಲ. ಆರನೆಯ ದಿನ ಸಂಜೆ ಮನೆಗೆ ಹಿಂತಿರುಗಿದಾಗ ಪತ್ರವೊಂದು ಬಂದು ಬಿದ್ದಿತ್ತು. ಲಕ್ಕೋಟೆ ದಪ್ಪವಾಗಿತ್ತು. ವಿಳಾಸದ ಅಕ್ಷರಗಳನ್ನು ನೋಡಿದರೆ ಹೆಣ್ಣುಮಗಳು ಬರೆದ ಹಾಗಿತ್ತು. ವಸಂತನ ಹೃದಯದಲ್ಲಿ ಆಸೆ ಯೊಂದು ಮಿಂಚಿನಂತೆ ಮಿಂಚಿಹೋಯಿತು. ಒಡೆದು ನೋಡಿದ. ಪತ್ರ ೋಹಿನಿಯದಾಗಿತ್ತು! ಪುಣೆಯಿಂದಲೇ ಬರೆದಿದ್ದಳು.

**ಪುಣೆ**

ಮಂಗಳವಾರ, ೨೫-೨-೪೭

**ವಸಂತರಾಯರಿಗೆ, ವಂದನೆಗಳು.**

ನನ್ನ ಈ ಪತ್ರವನ್ನು ನೋಡಿ ನಿಮಗೆ ಆಶ್ಚರ್ಯವಾಗಬಹುದು. ಓದಿದನಂತರ ದುಃಖವೂ ಆಗಬಹುದು. ಆದರೆ ಬರೆಯಲೇಬೇಕೆಂದೆನಿಸಿದ್ದರಿಂದ ಬರೆಯು ತ್ತಿದ್ದೇನೆ. ನಿಮಗೆ ಮನಸ್ತಾಪವಾದರೆ ದಯವಿಟ್ಟು ಮನ್ನಿಸಿ. ಹೋದ ಸಲ

ನಾನು ಪುಣೆಗೆ ಬಂದಾಗ ಪತ್ರ ಬರೆಯಬೇಕು ಎಂದುಕೊಂಡಿದ್ದೆ. ಆದರೆ ಆಗ ಬರೆಯಬೇಕೆಂಬ ಮನಸ್ಸು ಇದ್ದರೂ ಬರೆಯುವ ಧೈರ್ಯವಿರಲಿಲ್ಲ. ಈಗ ಬರೆಯುವ ಧೈರ್ಯ ಬೇಕಾದಷ್ಟಿದೆ; ಆದರೆ ಬರೆಯುವ ಮನಸ್ಸಿಲ್ಲ. ಆದರೂ ಬರೆಯುತ್ತಿದ್ದೇನೆ. ಇದಕ್ಕೆ ಕಾರಣವೆಂದರೆ, ಮೊದಲನೆಯದಾಗಿ, ನಿಮ್ಮ ಮನಸ್ಸನ್ನು ನನ್ನ ದುಃಖದ ಮೂಲಕ ನೋಯಿಸಲಾರೆ; ಎರಡನೆಯದಾಗಿ, ಬರೆದಾದರೂ ಏನು? ಬರೆಯದಿದ್ದರೂ ಏನು? ಎಂಬ ನಿರುತ್ಸಾಹ. ಹೇಗಿದ್ದರೂ ಇದುವರೆಗೆ ನನ್ನನ್ನು ನೀವು ಸಹಾನುಭೂತಿಯಿಂದ ನೋಡಿದ್ದೀರಿ. ನನ್ನ ದುಃಖಕ್ಕೆ ಕಿವಿಗೊಟ್ಟು ಮರುಗಿದ್ದೀರಿ, ಎಂಬ ಭರವಸೆಯಿಂದಲೇ ಬರೆಯುತ್ತಿದ್ದೇನೆ. ಸಣ್ಣಪುಟ್ಟ ದುಃಖಗಳನ್ನು ಕೇಳಿ ಸಹಾನುಭೂತಿ ತೋರಿದವರಿಗೆ, ನನ್ನ ಬದುಕೇ ಮೂರಾಬಟ್ಟೆಯಾಗಿ ಬಿದ್ದಿರುವಾಗ, ಬರೆಯದೆ ಹೇಗೆ ಇರಲಿ?

ಗುರುವಾರ ಸಾಯಂಕಾಲ ನಿಮ್ಮನ್ನು ನಾನು ದಾದರಿನಲ್ಲಿ ಬಿಟ್ಟು ಬಂದನಂತರ ನಡೆದ ಘಟನೆಗಳಲ್ಲಿ ಕೆಲವು ನಿಮಗೆ ಈಗಲೇ ತಿಳಿದಿರಬಹುದು. ನನಗೆ ಪತಿ ಆಗಿದ್ದ ಆನಂದ, ಅವರ ಅಣ್ಣ ಭಾಸ್ಕರ ನಿಮ್ಮ ಕಡೆಗೆ ಬಂದು ನಿಮಗೆ ತೊಂದರೆ ಕೊಟ್ಟಿರಬೇಕು. ಅವರಿಂದ ಕೆಲವಂಶ ತಿಳಿದಿರಬೇಕು. ನಿಮ್ಮಲ್ಲಿಯೇ ನಾನಿರಬೇಕೆಂದು ನೋಡಲೂ ಬಂದಿರಬೇಕು. ನಾನು ಮುಂಬಯಿಯಲ್ಲಿಯೇ ಇರಬಹುದಾಗಿದ್ದರೆ ಎಲ್ಲವನ್ನೂ ಸವಿಸ್ತಾರವಾಗಿ ಹೇಳಬಹುದಿತ್ತು. ಆದರೆ ಅಲ್ಲಿ ಉಳಿಯುವುದು ಒಂದು ಕ್ಷಣದ ಮಟ್ಟಿಗೂ ಸಾಧ್ಯವಿರಲಿಲ್ಲ. ನೇರವಾಗಿ ಶುಕ್ರವಾರ ರಾತ್ರಿಯೇ ಇಲ್ಲಿಗೆ ಬಂದುಬಿಟ್ಟೆ. ಸುತ್ತಲಿನ ಜಗತ್ತು ಕಡಿದುಬಿದ್ದರೂ ತಾಯಿ ಇದ್ದಾಳೆ ನನಗೆ. ಅವಳ ಆಶ್ರಯಕ್ಕೆ ಹಾತೊರೆದು ಬಂದೆ. 'ತಾಯಿ ಇದ್ದಲ್ಲಿ ಸ್ವರ್ಗ!' ಎಂದು ಹೇಳಿದ್ದೆನಲ್ಲವೆ ನಿಮಗೆ? ಆದರೆ ಇಂದು ತಾಯಿ ನನಗೆ ಸ್ವರ್ಗವಾಗಿಲ್ಲ! ನರಕದಿಂದ ಓಡಿಬಂದವಳಿಗೆ ಆಶ್ರಯವನ್ನು ಮಾತ್ರ ಕೊಟ್ಟವಳಾಗಿದ್ದಾಳೆ. ಅವಳ ಹತ್ತಿರ ಕೂಡ ನನ್ನ ಹೃದಯ ಹಿಂದಿನ ಸುಖವನ್ನು ಕಾಣುವಂತಿಲ್ಲ. ಆದರೆ ಆಕೆಯ ಹೊರತು ನನಗೆ ಇನ್ನು ಈ ವಿಶಾಲ ಪ್ರಪಂಚದಲ್ಲಿ ಯಾರಿದ್ದಾರೆ?

ನನ್ನ-ಆನಂದನ ಸಂಬಂಧವನ್ನು ತಿಳಿದ ನಿಮ್ಮ ಮುಂದೆ ನಾನು ಯಾವುದನ್ನೂ ಮರೆಮಾಚಬೇಕಾಗಿಲ್ಲ. ಇಡೀ ಸಮಾಜವೇ ನಮ್ಮನ್ನು ಇಂದು ಬೊಟ್ಟುಮಾಡಿ ತೋರಿಸುವಂತಾದಾಗ ಯಾರಿಂದಲೂ ಏನನ್ನೂ ಮರೆಮಾಚಬೇಕಾಗಿಲ್ಲ. ಆದರೆ ಇಂದು ಆತ್ಮಪ್ರತಿಷ್ಠೆಯಲ್ಲಿ ಎರಡನೆಯವರನ್ನು ಹೀಗಳೆಯುವುದರಿಂದಲೇ ತಮ್ಮ ಸಭ್ಯತೆಯನ್ನು ಸ್ಥಾಪಿಸಬಯಸುವವರು ನನ್ನ ಪಕ್ಷವನ್ನು ಕೇಳಲು ಸಿದ್ಧರಿಲ್ಲ. ಅವರು ಕೇಳಬೇಕೆಂಬ ಆಸೆಯೂ ನನಗಿಲ್ಲ. ನೀವು ಕೇಳಲು ಸಿದ್ಧರಿದ್ದೀರಿ, ನೀವು ನನ್ನ ಸ್ಥಿತಿಯನ್ನು ಅರಿತವರಾಗಿದ್ದೀರಿ, ನನ್ನ ಮನಸ್ಸಿನ ಬಗೆಯನ್ನು ಕೆಲಮಟ್ಟಿಗಾದರೂ ಒಳಹೊಕ್ಕು ನೋಡಿದವರಾಗಿದ್ದೀರಿ ಎಂತಲೇ ಎರಡನೆಯವರಿಗೆ ಹೇಳ

ಬೇಕಾದುದನ್ನು, ಎರಡನೆಯವರು ಕೇಳಲಾರದುದನ್ನು ನಿಮ್ಮ ಎದುರು ಹೇಳು
ನಿರೀಕ್ಷಿಸಿದಂತೆ ಗುರುವಾರ ರಾತ್ರಿ ಆನಂದ ಮನೆಗೆ ಬಂದಿದ್ದರು.
ಸಹವಾಸ ನನಗೆ ನರಕದ ಯಾತನೆಯಾಯಿತು! ನನ್ನ ಹೃದಯ
ಬಯಸುತ್ತಿದ್ದ ಆನಂದನ ಕಾಮಲಾಲಸೆ
ಡಸಿಕೊಂಡಿತು. ಅಂದು ನನ್ನ ದೇಹ
ಂತಿತು. ನಿರ್ಧಾರವನ್ನು ಕಟ್ಟಿತು—
ಪಶುವಿನಂತೆ ವರ್ತಿಸಬಲ್ಲವನ ಸಹವಾಸ

ತು. ಒಂದು ವಾರದ ಅವಧಿಯಲ್ಲಿಯೇ
ಪರಿಣಾಮ ಮಾಡಿದ್ದಿರಿ.
ಸಿದ್ಧಳಾಗಿದ್ದೆ. ಹೃದಯ ಬಿಚ್ಚಿ
ಸರಿಪಡಿಸಿಕೊಂಡು ಸರಿಯಾಗಿ
ಸುಖವಾಗಿ ಇರಬಹುದು ಎಂಬ ಆಸೆಯನ್ನು ನಿಮ್ಮ ಭೆಟ್ಟಿಯ ಫಲವಾಗಿ ಕಟ್ಟಿ
ಕೊಂಡಿದ್ದೆ. ಆ ರಾತ್ರಿ ಆನಂದ ನನ್ನ ಕೂಡ ಸಹೃದಯವಾಗಿ ಮಾತನಾಡಿದ್ದರೆ,
ಹಾಗೆಯೇ ಮಾತನಾಡಲು ನನಗೆ ಆಸ್ಪದ ಕೊಟ್ಟಿದ್ದರೆ, ಭವಿಷ್ಯವೇ ಬದಲಾಗು
ತ್ತಿತ್ತೇನೊ! ಆದರೆ ಅಂದು ಸಾಯಂಕಾಲ ಮನೆಗೆ ಬಂದಾಗಿನಿಂದ ಅವರ ಮನಸ್ಸಿ
ನಲ್ಲಿ ಒಂದೇ ಒಂದು ಯೋಚನೆಯಿದ್ದಂತೆ ಕಾಣಿಸಿತು. ಪ್ರತಿಯೊಂದು ಕೃತಿ
ಯಲ್ಲಿಯೂ ಅವರಲ್ಲಿಯ ದೇಹಲಾಲಸೆ ಹೊಳೆಯಾಗಿ ಹೊಮ್ಮುತ್ತಿತ್ತು. ಅದು
ನನಗೆ ಅಸಹ್ಯವಾಗಿತ್ತು. ಈ ದೇಹ ಅವರಿಗಾಗಿ ಇತ್ತು! ನಿಜ. ಆದರೆ ಈ
ಹೃದಯವೂ ಅವರಿಗಾಗಿ ಇತ್ತು. ಆದರೆ ಮನಸ್ಸನ್ನಲ್ಲದೆ ದೇಹವನ್ನು ಕೊಡಲಾರದ
ನನಗೆ ಅಂದಿನ ಅವರ ವರ್ತನೆ ಹೇಸಿಕೆಯನ್ನುಂಟುಮಾಡಿತು. ಬೇಕಾದಷ್ಟು
ರೀತಿಯಿಂದ ಮೆತ್ತನ್ನ ಮಾತನಾಡಿ ನೋಡಿದೆ. ಮನವೊಲಿಸಲೆತ್ನಿಸಿದೆ. ಆದರೆ
ಅದೆಲ್ಲವನ್ನೂ ಅವರು ಹಿಂದುಗಡೆಯಿಂದ ಮಾಡಬಹುದೆಂದುಕೊಂಡಿದ್ದರೇನೊ!
ಅವರು ಅಂದು ದೇಹವನ್ನು ಮಣಿಸಿದರು. ಮನಸ್ಸನ್ನು ಮುಸಣಕ್ಕಟ್ಟಿದರು!

ಮರುದಿನ ಸಾಯಂಕಾಲದವರೆಗೂ ಮನಸ್ಸು ತೀರ ವಿಪನ್ನಾವಸ್ಥೆಯಲ್ಲಿತ್ತು.
ಆದರೆ ನನ್ನ ಅನುಮಾನದ ಬಟ್ಟಲು ಇನ್ನೂ ತುಂಬಿರಲಿಲ್ಲ. ನಾವು ಮುನ್ನಾದಿನ
ಪಾಪರಿನಲ್ಲಿ ಊಟ ಮಾಡಿದ್ದು, ಅನಂತರ ಸಮುದ್ರದ ದಂಡೆಯಲ್ಲಿ ಕುಳಿತು ಮಾತ
ನಾಡಿದ್ದು—ಅವರಿಗೆ ಹೇಗೆ ತಿಳಿಯಿತೊ? ಅವರು ನನ್ನ ಮುಂದೆ ಎಸೆದ ವಿವರಗಳ
ಮೇಲಿಂದ ಅದೆಲ್ಲವೂ ಭಾಸ್ಕರನ ಆಟವಿರಬೇಕೆಂದು ಸಹಜವಾಗಿಯೇ ಗೊತ್ತಾಗು
ವಂತಿತ್ತು. ನಮ್ಮ ಹಿಂದೆಯೇ ಆತ ಅಂದು ಸುಳಿದಾಡಿರಬೇಕು, ಇಲ್ಲವಾದರೆ,
ಇನ್ನಾರನ್ನಾದರೂ ನಿಯಮಿಸಿರಬೇಕು. ಅಂತು, ಅಂದು ಸಾಯಂಕಾಲ ಕೊನೆಯ

ನಿರ್ಣಯಕ್ಕಾಗಿಯೇ ಬಂದಂತಾಯಿತು. ಎಂದಿನಂತೆ ಮತ್ತೆ ಸಲ್ಲದ ಪ್ರಶ್ನೆಗಳ ಸುರಿಮಳೆ! ಅದೇ ಸಂಶಯ! ಒಂದು ಹೆಣ್ಣು, ಒಂದು ಗಂಡು ಕಾಮದ ಹೊರ[illegible] ಬೇರೆ ಯಾವ ಸಂಬಂಧದಲ್ಲಿಯೂ ಇರಲಾರದೆಂಬುದು ಅವರಿಗೆ ಪರ[illegible] ನಡೆದುಬಂದ ಬುದ್ಧಿ. ಕೂಡಿ ಮಾ[illegible] ದ್ದಾರು—ಎಂಬುದೇ ತರ್ಕ. ಈ [illegible] ಅವರ ಸಂಶಯ ನನ್ನ ಬದುಕನ್ನು [illegible] ಉತ್ತರ ಹೇಳುವುದಿಲ್ಲ[illegible]ಂದೆ. ಹೇ[illegible] ಸುಳ್ಳೆನಿಸುವುದೇ ಖಂಡಿತವಾಗಿದ್ದಾಗ [illegible] ಕೊಂಡೆ. ಅಲ್ಲದೆ ಕೊ[illegible]ಯುವರೆಗ[illegible] ದಿಂದ ವಿಷಗೂಡಿದ ಮನಸ್ಸಿನ ಪ್ರ[illegible] ಕೇಳಿರಬಹುದು. ಆದರೆ ಅದಕ್ಕೆ [illegible] ಮನುಷ್ಯನಿಗೆ ಸಾಧ್ಯವಿರಲಿಲ್ಲ. ಅ[illegible] ಮುಟ್ಟಿಗಾದರೂ ಯಾರಿಗಾದರೂ [illegible] ಎಂದು ನನಗೆ ಭರವಸೆ ಇದೆ. ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ದೊರಕದಿದ್ದುದಕ್ಕೆ ನಾನು ಹೊರಗೆ ಹೊರಡಬೇಕೆಂದು ಅಪ್ಪಣೆಯಾಯಿತು. ಮನೆಯಲ್ಲಿಯ ಯಾವ ವಸ್ತುವನ್ನೂ ನಾನು ಕೈಯಿಂದ ಮುಟ್ಟಕೂಡದೆಂದು ಹೇಳಿಯಾಯಿತು. ಮೈಮೇಲಿನ ಆಭರಣಗಳನ್ನು ಬೇಡಿಯಾಯಿತು. ಎಲ್ಲವನ್ನೂ ಬಿಚ್ಚಿಕೊಟ್ಟೆ—[illegible]ಸೂತ್ರವನ್ನು ಕೂಡ! ಮೊದಲ ರಾತ್ರಿ ಎಡಗೈಯಲ್ಲಿಯವು, ಅಂದು ಮಧ್ಯಾಹ್ನ ಬಲಗೈಯಲ್ಲಿ ಯವು—ಬಳೆಗಳನ್ನು ಅವರು ತಮ್ಮ ಕೈಯಿಂದಲೇ ಒಡೆದು ಹಾಕಿದ್ದರು!

ಅವರ–ನನ್ನ ನಡುವಿನ ಗಂಡಹೆಂಡಿರೆಂಬ ಸಂಬಂಧಕ್ಕೆ—ಹೆಸರಿನಲ್ಲಿಯಾದರೂ ಉಳಿದ ಸಂಬಂಧಕ್ಕೆ—ಸಂಕೇತಗಳಂತಿದ್ದ ಬಳೆ, ಮಂಗಳಸೂತ್ರ ಅಂದಿಗೆ ನನಗಿಲ್ಲದಾದವು. ಆ ಕ್ಷಣಕ್ಕೆ ನಾನು ಬಂಧಮುಕ್ತಳಾದೆ. ಆದರೆ ಆ ಕ್ಷಣದಿಂದಲೇ ನನಗೆ ಸ್ವಾತಂತ್ರ್ಯದ ಭೀತಿ ಮೈದೋರಿತು. ಎದೆಯನ್ನು ನಡುಗಿಸಿತು! ಸ್ವಾತಂತ್ರ್ಯವನ್ನು ಬೇಡಿದೆ, ಬಯಸಿದೆ; ಅದು ಬಂದಾಗ ಮಾತ್ರ ಅದರಿಂದ ದೂರ ಓಡಿ ಹೋಗುವಂತಾಯಿತು. ಇದಕ್ಕೆ ಕಾರಣ—ನಾನು ಬೇಡಿ ಬಯಸಿದ ಸ್ವಾತಂತ್ರ್ಯ ಆ ಸ್ವಾತಂತ್ರ್ಯವಾಗಿರಲಿಲ್ಲ! ನನಗೆ ಬೇಕಾದ ಸ್ವಾತಂತ್ರ್ಯದ ಅರ್ಥ ಅವರಾರಿಗೂ ಆಗಲಿಲ್ಲ. ನನಗೆ ಬೇಕಾದುದು ಸ್ವೈರವೃತ್ತಿ ಎಂದು ತಿಳಿದರು ಅವರು. ಆದರೆ ಸ್ವಾತಂತ್ರ್ಯವೆಂದರೆ ಸ್ವೈರವಲ್ಲವೆಂದು ತಿಳಿಯದಷ್ಟು ತಿಳಿಗೇಡಿಯಲ್ಲ ನಾನು. ಅವರಲ್ಲಿ ನಾನಿನ್ನೇನನ್ನೂ ಬೇಡಲಿಲ್ಲ. ನಾನು ಮಾನವ ಪ್ರಾಣಿಯೆಂಬ ವ್ಯಕ್ತಿತ್ವವನ್ನು ಕಳೆದುಕೊಳ್ಳಬಾರದೆಂದು ಹೆಣಗಿದೆ, ಹಟ ಹಿಡಿದೆ. ಆ ಹಟದಲ್ಲಿ ನಾನಿಂದು ಗೆದ್ದಿದ್ದೇನೆ. ಆದರೆ ಕೊಟ್ಟ ಬೆಲೆ ಯಾವುದು? ನನ್ನ ಸಾಮಾಜಿಕ ಜೀವನದ

ಆಹುತಿಯನ್ನು ಕೊಡಬೇಕಾಯಿತು! ಆ ಕಳೆದುಕೊಂಡ ಬದುಕನ್ನು ನಾನಿನ್ನು ಗಳಿಸಲಾರೆನೆಂದೇ ಹೇಳಬೇಕು. ಆ ನನ್ನ ವ್ಯಕ್ತಿತ್ವವನ್ನು ನಾನು ಕಾಪಾಡಿಕೊಳ್ಳ ಬೇಕಾದಾಗ ನನ್ನ ವರ್ತನೆಯ ಅರ್ಥವನ್ನು ಬೇಕಾದವರು ಬೇಕಾದ ಹಾಗೆ ಮಾಡಿ ಕೊಂಡರು. ನಾನು ಇನ್ನಾರಿಗೋ ಮೋಹಿಸಿ, ಹೃದಯವನ್ನು ತನ್ನನ್ನಲ್ಲದ ಬೇರೆಯವರಿಗೆ ಧಾರೆಯಾಗಿಸಿದ್ದೇನೆಂದು ಆನಂದ ಬಗೆದ. ಈ ಬಂಧನವನ್ನು ಕಿತ್ತೊಗೆಯುವಾಗ ನಾನು ಅನಿರ್ಬಂಧವಾಗಿ ನಡೆಯುತ್ತಿದ್ದೇನೆಂದು ತಿಳಿದ ಭಾಸ್ಕರ, ನನ್ನನ್ನು ಕೊಂಡುಕೊಳ್ಳಬಹುದು ಎಂದುಕೊಂಡ. ನಾದಿನಿಗೆ, ಅವರ ಗಂಡನಿಗೆ— ನನ್ನ ವರ್ತನೆ ಪರಂಪರೆಗೆ ವಿರುದ್ಧವಾಗಿ ಕಂಡುಬಂದಿತು. ಆದರೆ ಇವರಲ್ಲಿ ಯಾರೊಬ್ಬರೂ ನಾನು ಹೀಗೇಕೆ ವರ್ತಿಸುತ್ತಿರಬಹುದು ಎಂಬುದನ್ನು ನೆನೆಯಲಿಲ್ಲ, ಯೋಚಿಸಲಿಲ್ಲ. ತಮ್ಮ ದೃಷ್ಟಿಯಿಂದ ಒಂದೊಂದಾಗಿದ್ದರೂ ಎಲ್ಲರೂ ಹೆಚ್ಚು ಕಡಮೆ ಒಂದೇ ಒಂದು ಕಾರಣವನ್ನು ಗ್ರಹಿಸಿ, ಅದೇ ಸತ್ಯವೆಂದು ಸಾರಿದರು. ಆ ಗ್ರಹಿಕೆಯಲ್ಲಿ ನಾನು ವ್ಯಭಿಚಾರಿಣಿ!

ಬಂಧನವಿಲ್ಲದೆ ಬದುಕಿಲ್ಲವೆಂಬುದನ್ನು ನಾನು ಸಂಪೂರ್ಣವಾಗಿ ಬಲ್ಲೆ. ಹುಟ್ಟಿ ದಂದಿನಿಂದ ಸಾಯುವವರೆಗೂ ಸಾವಿರ ಬಂಧನಗಳ ಮಧ್ಯದಲ್ಲಿಯೇ ಬದುಕನ್ನು ಸವೆಯಿಸಬೇಕಾದ ಮನುಷ್ಯ, ಬದುಕಿನಲ್ಲಿದ್ದು ಬಂಧಮುಕ್ತನಾಗಬೇಕೆನ್ನುವುದು ನಿರರ್ಥಕ. ಇನ್ನಾವ ಬಂಧನಗಳಿರದಿದ್ದರೂ, ನಾವು ನಮ್ಮ ತಾಯಿತಂದೆಗಳ ಮಕ್ಕಳೆಂಬ ಬಂಧನ, ಅವರ ಆಸ್ತಿ ಇಲ್ಲದಿದ್ದರೂ ಅವರ ರಕ್ತದ ಬಂಧನ, ನಾವು ಎಷ್ಟು ಸ್ವತಂತ್ರ ವಿಚಾರಶಾಲಿಗಳೆಂದರೂ ನಮ್ಮ ಸುತ್ತಲಿನ ಸಮಾಜ ಜೀವನದ ಬಂಧನ, ನಮ್ಮ ದೇಹದ, ನಮ್ಮ ಮನಸ್ಸಿನ, ನಮ್ಮ ವ್ಯಕ್ತಿತ್ವದ, ಕೊನೆಗೆ ನಾವು ನಾವೇ ಇನ್ನಾರೂ ಅಲ್ಲ ಎಂಬ ಬಂಧನ! ಒಂದೋ ಎರಡೊ! ಮದುವೆಯಾಗ ಲೊಪ್ಪಿದಾಗ ನಾನು ಇಂಥವನ ಮಡದಿಯಾಗಬೇಕೆಂಬ ಬಂಧನವನ್ನು ನಾನು ಒಪ್ಪಲಾರದವಳಾಗಿದ್ದರೆ ನಾನು ಮದುವೆಯಾಗುತ್ತಿರಲಿಲ್ಲ. ಆದರೆ ಆ ಬಂಧನ ವನ್ನೊಪ್ಪಿದೆನೆಂದಮಾತ್ರಕ್ಕೆ ನನಗೆ ಮಾನವಮಾತ್ರಕ್ಕೆ ಸಹಜವಾದ, ಮನುಷ್ಯ ಪ್ರಾಣಿಯೆಂಬುವಕ್ಕೆ ಯೋಗ್ಯವಾದ, ಅವಶ್ಯವಾದ ವ್ಯಕ್ತಿತ್ವಕ್ಕೆ ನಾನು ಸಿದ್ಧವಾಗ ಲಿಲ್ಲ. ನಾನು ಮಾನವಪ್ರಾಣಿಯೆಂದು ಬದುಕಬೇಕಾಗಿದ್ದಾಗ, ಬಂಧನಗಳಿಗಾಗಿ, ನನ್ನ ವ್ಯಕ್ತಿತ್ವವನ್ನು ಮಾರಬೇಕಾಗಿರಲಿಲ್ಲ. ನನ್ನ ಸುತ್ತಲಿನವರು, ನನ್ನ ಬದುಕಿ ನಲ್ಲಿ ಬಂದ ವ್ಯಕ್ತಿಗಳು, ಯಾವುದನ್ನು ನಾನು ಕಾಯ್ದುಕೊಳ್ಳಬೇಕೆಂದೆನೊ ಅದನ್ನೇ ಬೇಡಿದರು, ಅದಕ್ಕಾಗಿಯೇ ಹಟ ಹಿಡಿದರು. ಆನಂದನಿಗೆ ನಾನು ದಾಸಿ ಯಾಗಬೇಕಾಗಿತ್ತು! ಭಾಸ್ಕರನಿಗೆ ನಾನು ವೇಶ್ಯೆಯಾಗಬೇಕಾಗಿತ್ತು! ನಾದಿನಿಗೆ ಮನೆಯಾಳಾಗಬೇಕಾಗಿತ್ತು! ಇನ್ನಾವಾರಿಗೆ ನಾನು ಇನ್ನೇನಾಗಬೇಕಾಗಿತ್ತೊ!

ನನಗೆ ಇದಾವುದೂ ಬೇಕಾಗಿರಲಿಲ್ಲ. ಎಲ್ಲಕ್ಕೂ ಮಿಗಿಲಾಗಿ ನನಗೆ ಆನಂದನ

ಮಡದಿಯಾಗಬೇಕಾಗಿತ್ತು, ಆತನ ಸಹಧರ್ಮಿಣಿಯಾಗಬೇಕಾಗಿತ್ತು. ಮಾನವ ಪ್ರಾಣಿಯೆಂದು ಸ್ವತಂತ್ರಳಾಗಿ, ಹೆಂಡತಿಯೆಂದು ಬಂಧಿತಳಾಗಿ ನನಗೆ ಬದುಕನ್ನು ನಡೆಯಿಸಬೇಕಾಗಿತ್ತು. ಈ ಬಂಧನದಲ್ಲಿಯ ಬಿಡುಗಡೆಯ ತಳಪಾಯದ ಮೇಲೆ ನಾನು ನನ್ನ 'ಕನಸಿನ ಮನೆ'ಯನ್ನು ಕಟ್ಟಿದೆ. ಅದಕ್ಕೆ ಸುಖದ ತೋರಣ ಕಟ್ಟಿದೆ; ಆಸೆಗಳ ಆವಾರ ಹಾಕಿದೆ. ಆ ಮನೆಯಲ್ಲಿ ಆನಂದ ಅರಸ, ನಾನು ಅರಸನ ಅರಸಿಯಾಗಿ ಆತನ ಪಾದಸೇವೆಯನ್ನು ಮಾಡುತ್ತಿದ್ದೆ. ಆಗ ಆ ಮನೆಯಲ್ಲಿ ಅನಂದ ಅರಸನಾಗಿ ನಾನು ದಾಸಿಯಾಗಬೇಕಾಗಿ ಬಂದಿತು! ಅರಸ–ಅರಸಿಯರ ಸಂಬಂಧ ತಪ್ಪಿ, ಯಜಮಾನ–ದಾಸಿಯರ ಸಂಬಂಧ ಬಂದಿತು. ಸುಖದ ತೋರಣ ಕಡಿಯಿತು. ಹೊಂಗನಸುಗಳ ಹೂದೋಟ ಬಯಲಾಯಿತು. 'ಕನಸಿನ ಮನೆ' ಕುಪ್ಪಳಿಸಿತು! ಅದರ ದುಃಖದಿಂದ ಇಂದು ನನ್ನ ಹೃದಯ ಬಿರಿಯುತ್ತಿದೆ. ಇನ್ನುಮೇಲೆ ಬದುಕಿಯಾದರೇನೆಂದೂ ಎನಿಸುತ್ತಿದೆ. ನನಗೆ ಬೇಕಾದದ್ದು ಸ್ವೈರಾಚಾರವಾಗಿದ್ದರೆ ಇಂದು ನನ್ನಲ್ಲಿ ವಿಜಯೋನ್ಮಾದವಿರಬೇಕಾಗಿತ್ತು. ಸುಖದ ಬದುಕಿನ ಆಸೆ ಇಂದು ನನ್ನಲ್ಲಿ ಕಮರಿಹೋಗಿದೆ—ಬಿಸಿಲಲ್ಲಿ ಬಳಲಿದ ಹೂವಿನಂತೆ. ಅದು ಹಾಗಿರದಿದ್ದರೆ ನಾನು ಸುಖವಾಗಿರಬೇಕೆಂದು ಎಂದಿಗೂ ಬಯಸಿರಲಿಲ್ಲವೆಂದೇ ಹೇಳಬೇಕಾದೀತು. ಆದರೆ ಅದು ಸಾಧ್ಯವೆ?

ಬದುಕಿನಲ್ಲಿಯ ಯಾವ ಶಕ್ತಿ ನನ್ನನ್ನು ನಿಮ್ಮೆಡೆಗೆ ಎಳೆಯಿತೊ ನಾನರಿಯೆ. ನಿಮ್ಮ ಸಹಾನುಭೂತಿ ನನ್ನನ್ನು ಸೆರೆಹಿಡಿಯಿತು. ಆ ಸಹಾನುಭೂತಿಗಾಗಿಯೇ ನಾನು ಹಾತೊರೆಯುತ್ತಿದ್ದೆ. ಅದರ ಫಲವಾಗಿಯೇ ಇನ್ನಾರೆದುರೂ ಆಡದ, ಆಡಕೂಡದ ಮಾತುಗಳನ್ನಾಡಿದ್ದೇನೆ. ಈಗ ನನ್ನ ಹೃದಯವನ್ನು ಬಿಚ್ಚಿ ತೋರಿಸುತ್ತಿದ್ದೇನೆ. ಆದ್ದರಿಂದಲೇ ಅಲ್ಪಾವಧಿಯಲ್ಲಿಯೇ ಒಂದು ಬಗೆಯ ಸೌಹಾರ್ದ ನಮ್ಮಲ್ಲಿ ಬೆಳೆಯಿತು. ಆದರೆ ಕ್ಷಣಕ್ಷಣಕ್ಕೂ ಒಂದು ಮಾತನ್ನು ನಾನು ಕೇಳಿಕೊಳ್ಳುತ್ತಿದ್ದೆ: 'ಈ ಸೌಹಾರ್ದ ನನ್ನನ್ನು ಇನ್ನಾವ ವಿಪರೀತ ಮಾರ್ಗಕ್ಕಾದರೂ ಎಳೆಯುವಂತಾದರೆ?' ಎಂದು. ನಿಮ್ಮ ಜೊತೆಯಲ್ಲಿದ್ದಾಗ ನಾನು ಖಡ್ಗಧಾರೆಯ ಮೇಲೆ ನಡೆಯುತ್ತಿರುವಂತೆ ಇದ್ದೆ. ಕೊನೆಯ ದಿನ, ಸಮುದ್ರದ ದಂಡೆಯಲ್ಲಿ ಕುಳಿತಾಗ, ಮನಸ್ಸು ಮೇರೆ ತಪ್ಪುವುದರಲ್ಲಿತ್ತು. ಜುಹುವಿನ ಕನಸನ್ನು ಕಂಡ ಮಾತನ್ನು ಹೇಳಿದ್ದೇನೆ. ಮೇರೆ ತಪ್ಪುತ್ತಿದ್ದ ಮನಸ್ಸಿನ ಪ್ರತೀಕ ಆ ಕನಸು. ನಿಮ್ಮೆದುರು ಸ್ಪಷ್ಟವಾಗಿ ಹೇಳುತ್ತೇನೆ, ಆ ಕನಸಿನಲ್ಲಿಯ ನಮ್ಮ ವಿಹಾರ—ರತಿಯನ್ನೂ ನಾಚಿಸಬೇಕು, ಕಾಮದೇವನೆದುರು ಪಾರ ಕಲಿಯಬೇಕು, ಎನ್ನುವಂತಿತ್ತು. ಇದನ್ನು ಹೇಳಲು ತುಂಬಾ ನಾಚಿಕೆಯಾಗುತ್ತದೆ. ಆದರೆ ಆ ಕನಸು ವಿವೇಕದ ಹಿಡಿತವನ್ನು ಮೀರಿದ ಮನೋವ್ಯಾಪಾರ. ಅದರ ಬಗೆಯಲ್ಲಿ ನಾನು ನಿರುಪಾಯಳಾಗಿದ್ದೆ. ಆದರೆ ಹೃದಯ ಆ ಬಗೆಯ ಸುಖಾತಿಶಯವನ್ನು ಬಯಸುತ್ತಿತ್ತೆಂಬುದನ್ನು ಅಲ್ಲಗಳೆಯಲಾರೆ. ಮೊನ್ನೆ

ನಡೆದ ದುರ್ಘಟನೆ ನಮ್ಮ ಸೌಹಾರ್ದಕ್ಕೆ ಎಚ್ಚರದ ಮಾತನ್ನು ಹೇಳಿತು. ಸುದೈವ ದಿಂದ ಅದಕ್ಕೆ ತಡೆಯನ್ನುಂಟುಮಾಡಿತು. ಕಾಲು ಜಾರುವುದರಲ್ಲಿ ಎಚ್ಚರ ಹೇಳಿ ದಂತಾಯಿತು! ಒಂದಿಲ್ಲೊಂದು ದಿನ ಆ ಆಸೆ ಅನಿವಾರ್ಯವಾಗಬಹುದಿತ್ತೇನೊ! ಈ ಚೆಲುವಿನ ನನ್ನ ದೇಹದಲ್ಲಿಯ ನೆತ್ತರ ಇನ್ನೂ ಬಿಸಿ! ಕಾಮ ಬಿಡಲಿಲ್ಲ! ಸೌರಭದ ಆಸೆ ತೋರಿಸಿ ಸೆಳೆಯುವುದರಲ್ಲಿದ್ದ! ಮಣ್ಣಿನಿಂದ ಮೇಲೆದ್ದ ಗಿಡ ಇದು! ಆ ಮಣ್ಣಿನಂಶ ಅಂಟಿಕೊಳ್ಳದಿದ್ದೀತೆ? ನನ್ನಲ್ಲಿ ನಾನು ಗುರುತಿಸಿದ ಈ ಮಾರ್ಪಾಟನ್ನು ನಾನು ನಿಮ್ಮಲ್ಲಿಯೂ ಕಂಡಿದ್ದೇನೆ. ಮೊದಲಿನ ಸೌಹಾರ್ದ ನನ್ನಲ್ಲಿಯಂತೆಯೇ ನಿಮ್ಮಲ್ಲಿಯೂ ಭಾವನಾಪರವಾಗತೊಡಗಿತ್ತು. ಅನಿವಾರ್ಯವಾಗಿ ಕಾಮದ ವಾಸನೆ ಉನ್ಮಾದಗೊಳಿಸುವುದರಲ್ಲಿತ್ತು. ಆದರೆ ಸುದೈವದಿಂದ ಎಳೆತನದಲ್ಲಿ ಅಗಲಿದೆವು. ಸೌಹಾರ್ದ ಸೌಹಾರ್ದವಾಗಿಯೇ ಉಳಿಯುವಂತಾಯಿತು! ಅಂತೆಯೇ ಇಷ್ಟು ನಿರ್ದಾಕ್ಷಿಣ್ಯವಾಗಿ ಬರೆಯುತ್ತಿದ್ದೇನೆ.

ನನಗಾಗಿ ಸುಖವನ್ನು ಬಯಸಹೋಗಿ ನೀವು ದುಃಖವನ್ನು ಗಳಿಸಿದಿರಿ. ಒಳ್ಳೆಯದನ್ನು ಮಾಡಹೋಗಿ ಅಪಕೀರ್ತಿಯನ್ನು ತಂದುಕೊಂಡಿರಿ. ಅಪಮಾನವೂ ಬಂದಿತು. ನನ್ನ ದುಃಖಕ್ಕಾಗಿ ನಾನು ಕುದಿಯಬೇಕಾಗಿಲ್ಲ. ನನ್ನ ಪಾಲಿಗೆ ಅವು ಎಂದಿನಿಂದಲೂ ಇವೆ. ಆದರೆ ನನಗಾಗಿ ನೀವು ವ್ಯರ್ಥವಾದ ನೋವಿಗೊಳಗಾದಿರಲ್ಲಾ ಎಂದು ನನ್ನ ಹೃದಯ ಮೊರೆಯಿಡುತ್ತಿದೆ. ನೀವು ನನ್ನನ್ನು ಕ್ಷಮಿಸಬೇಕು. ಈ ಬೇಡಿಕೆಯಿಂದಲ್ಲದೆ ಇನ್ನಾವ ರೀತಿಯಿಂದಲೂ ನಾನು ನಿಮಗೆ ಸಮಾಧಾನ ಹೇಳುವಂತಿಲ್ಲ. ಯಾವ ಶಕ್ತಿ ನಮ್ಮನ್ನು ಒಂದೆಡೆ ತಂದಿತೋ ಅದೇ ಶಕ್ತಿ ನಿಮ್ಮ ಪಾಲಿಗೆ ದುಃಖವನ್ನು ತಂದಿತು. ಅದೇ ಶಕ್ತಿ ನನ್ನ 'ಕನಸಿನ ಮನೆ'ಯನ್ನು ಪುರಿಯಿತು. ಅದರ ಅಂಕಿತಕ್ಕೊಳಗಾಗಿಯೇ ಸ್ವಭಾವಸೌಮ್ಯನಾದ ಆನಂದ ಭಾಸ್ಕರನಿಗೆ, ಉಳಿದವರಿಗೆ ಬಲಿಬಿದ್ದ. ತನ್ನನ್ನಲ್ಲದೆ ನನ್ನನ್ನೂ ಹಾಳುಮಾಡಿದ. ಸುಖದ ಸಾಮ್ರಾಜ್ಯಭೂಮಿಯನ್ನು ಸುಖದ ಸುಡುಗಾಡನ್ನಾಗಿ ಮಾಡಿದ. ಆತ ಮಾಡಿದನೆನ್ನುವುದೂ ತಪ್ಪಾದೀತು. ಯಾರು ಏನು ಮಾಡಿಯಾರು?

ಇಂದು ನಾನು ನಿರ್ಗತಿಕಳಾಗಿದ್ದೇನೆ. ತಂದೆಯಿಲ್ಲದ ಪರದೇಶಿ. ನಾನು ಇಂದು ಗಂಡನಿದ್ದ ವಿಧವೆಯಾಗಿದ್ದೇನೆ. ಮನೆಯಲ್ಲಿ ತಾಯಿಯ ಆಶ್ರಯವಿದ್ದರೂ ಸಮಾಜ ದಲ್ಲಿ ಆಶ್ರಯವಿಲ್ಲದ ಅನಾಥೆಯಾಗಿದ್ದೇನೆ. ಆದರೆ ನಾನು ಅಪರಾಧಿಯಲ್ಲವೆಂಬ ಆತ್ಮವಿಶ್ವಾಸವಿದೆ. ಬದುಕಬೇಕೆಂಬ ಆಸೆಯಿದೆ. ಆದರೆ ಆ ಆಸೆಗಾಗಿ ಆತ್ಮವಿಕ್ರಯ ಮಾಡಕೂಡದೆಂಬ ಅಚಲವಾದ ನಿರ್ಧಾರವಿದೆ. ನಾನಿನ್ನೇನು ಮಾಡಬಹುದೋ, ಯಾವುದಕ್ಕಾಗಿ ಬದುಕಿ ಏನನ್ನು ಸಾಧಿಸಬಹುದೋ—ಯಾವುದನ್ನೂ ಈಗ ಹೇಳಲಾರೆ. ಜಗತ್ತಿನ ಉದ್ಧಾರಕ್ಕಾಗಿ ನಾನು ಹೊರಟಿಲ್ಲ, ಆ ಶಕ್ತಿ ನನ್ನಲ್ಲಿಲ್ಲ. ಆದರೆ ನನ್ನ ಆತ್ಮವಿಕಾಸದ ಶಕ್ತಿ ಖಂಡಿತವಾಗಿಯೂ ನನ್ನಲ್ಲಿದೆ. ಮನುಷ್ಯನಾಗಿ ಹುಟ್ಟಿದವ

ಮನುಷ್ಯನಾಗಿ ಬಾಳುವ ಯತ್ನ ಈ ವಿಕಾಸದ ಕ್ರಮದಲ್ಲಿ ಮೊದಲ ಹೆಜ್ಜೆ, ಎಂದು ನಾನಂತೂ ಬಗೆದಿದ್ದೇನೆ. ಆ ಯತ್ನ ನನ್ನನ್ನು ಎಲ್ಲಿಗೆ ಕರದೊಯ್ಯುವುದೋ ಅಲ್ಲಿಗೆ ಹೋಗುತ್ತೇನೆ. ನಿಮ್ಮ ಸಹಾನುಭೂತಿ ನನಗೆ ಮಾರ್ಗದರ್ಶಕವಾಗಿದೆ. ನಿಮ್ಮ ಹೃದಯವನ್ನು ಬಲ್ಲ ನಾನು ನಿಮ್ಮಿಂದ ಬೇರೆ ಯಾವ ಸಹಾಯವನ್ನೂ ಅಪೇಕ್ಷಿಸುವುದಿಲ್ಲ. ಈಗಾದ ಉಪಕಾರದ ಹೊರೆಯನ್ನೇ ಹೊರಲಾರದವಳಾಗಿದ್ದೇನೆ. ನೂರು ವಿಧದಲ್ಲಿ ನಿಮಗೆ ನಾನು ತೊಂದರೆಯಾಗಿ ತವರಾಗಿದ್ದೇನೆ. ಮನಸ್ತಾಪಕ್ಕೆ ಕಾರಣವಾಗಿದ್ದೇನೆ. ಆದರೆ ನಿಮ್ಮ ಹೊರತು ಇನ್ನಾರಿಗೂ ನನ್ನ ಹೃದಯವನ್ನು ಬಿಚ್ಚಿ ತೋರಿಸುವುದು ಅಸಾಧ್ಯವಲ್ಲದೆ, ನಿಷ್ಪ್ರಯೋಜಕವೆನಿಸಿದ್ದರಿಂದ ಈ ದೀರ್ಘವಾದ ಪತ್ರವನ್ನು ಬರೆದು ನಿಮಗೆ ಇನ್ನೂ ತೊಂದರೆ ಕೊಟ್ಟಿದ್ದೇನೆ. ಅದಕ್ಕಾಗಿಯೂ ಕ್ಷಮೆಯಿರಲಿ. ಆನಂದ ನಿಮ್ಮ ಜೊತೆಯಲ್ಲಿ ಮೊದಲಿನಂತೆ ನಡೆದುಕೊಳ್ಳುತ್ತಿದ್ದರೆ, ಸಾಧ್ಯವಾದರೆ, ಆತನಿಗೆ ಈ ಪತ್ರವನ್ನು ಓದಿ ತೋರಿಸಬಹುದು. ಅದೂ ಆತನಿಗೆ ಬೇಕಾದರೆ ಮಾತ್ರ!

ವಂದನೆಗಳು.

ಇತಿ, ಯಾರವಳೂ ಅಲ್ಲ

**ಮೋಹಿನಿ**

---